[redacted]

ಶ್ರೀ

# ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

## ತೃತೀಯಂ ಬ್ರಹ್ಮಖಂಡಂ

( ೧—೨೬ ಅಧ್ಯಾಯಗಳು )

( ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ )

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಕನ್ನಡ ಪಂಡಿತ ( ಮೈಸೂರು ) ಕನ್ನಡ ವಿದ್ವಾನ್ ( ಮದರಾಸು )



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೪

# ಪ್ರಸ್ತಾವನೆ.

॥ ಶುಭಮಸ್ತು ॥



ಶ್ರೀ ವಿಷ್ಣವೇ ಪರಮಾತ್ಮನೇ ನಮಃ

ಈ ಪದ್ಮಪುರಾಣವು ಬಹು ಅಮೂಲ್ಯವಾದುದು, ಇದರಲ್ಲಿರುವ ಕೆಲವು ವಿಷಯಗಳನ್ನು ಆರಿಸಿ ಅವನ್ನೇ ಧರ್ಮಶಾಸ್ತ್ರ ರೂಪದಲ್ಲಿ ಎಲ್ಲರಿಗೂ ತಿಳಿಯುವಂತೆ ಹಿಂದಿನವರು ಮಾಡಿ ಆಚಾರಗಳನ್ನೂ ಧರ್ಮಗಳನ್ನೂ ನಿಲ್ಲಿಸಿದ್ದಾರೆ. ಅದರಲ್ಲಿ ಸಕಲ ಜನಕ್ಕೂ ಗ್ರಾಹ್ಯವಾದ ಧರ್ಮಗಳಿರುವುದರಿಂದಲೇ ಇದಕ್ಕೆ ಜನರು ಪೂಜ್ಯತೆಯನ್ನು ಕೊಡುತ್ತಿರುವುದು. ಜಾತಿಮತಭೇದಗಳನ್ನು ವಿಂಗಡಿಸುತ್ತಾ, ಒಬ್ಬೊಬ್ಬರಿಗೂ ಒಂದೊಂದು ವಿಧವಾದ ಧರ್ಮವನ್ನು ಹೇಳಿ, ಅವರ ಆತ್ಮೋದ್ಧಾರವಾಗುವಂತೆ ಅವರನ್ನು ಪ್ರೇರಿಸುತ್ತವೆ. ಅವಕ್ಕೆ ಅನುಕೂಲವಾದ ಅನೇಕ ದೃಷ್ಟಾಂತಗಳನ್ನು ಕೊಡುತ್ತ ಸಮರ್ಥಿಸುತ್ತ ಹೋಗಿದೆ.

ಇದರಲ್ಲಿ ಆರು ಭಾಗಗಳು ಇರುವುವೆಂದು ಹಿಂದೆಯೇ ವಿವರಿಸಿದೆ. ಅವುಗಳಲ್ಲಿ ಇದು ಮೂರನೆಯದಾದ ಬ್ರಹ್ಮಖಂಡವು. ಇದಕ್ಕೆ ಈ ಹೆಸರೇತಕ್ಕೆ ಬಂದಿದೆ ಎಂದು ಹೇಳಲು ಸಾಧ್ಯವಿಲ್ಲ. ಏತಕ್ಕೆಂದರೆ, ಈ ಖಂಡದಲ್ಲಿ ಪರಬ್ರಹ್ಮನ ವಿಷಯವನ್ನು ಎತ್ತಿ ವರ್ಣಿಸಿರುವುದಿಲ್ಲ. ಅಲ್ಲದೆ ನಾರದಾದಿಗಳು ವಚನಗಳನ್ನು ಹೇಳುತ್ತಿರುವಂತೆ ಬ್ರಹ್ಮನು ಯಾವ ವಚನವನ್ನೂ ಹೇಳಿಲ್ಲ.

ಆದರೆ ಇಲ್ಲಿ ಹೇಳಿರುವ ಮಾಸಮಹಿಮೆಗಳನ್ನೂ ಬ್ರಹ್ಮಜ್ಞಾನವನ್ನೂ ಬಲ್ಲ ಋಷಿಗಳೇ ವಿವರಿಸಿರುವುದರಿಂದಲೂ, ನಾವು ಅವನ್ನು ನಂಬಲು ಅವರಲ್ಲಿರುವ ಆ ಬ್ರಹ್ಮಜ್ಞಾನವೇ ಕಾರಣವಾಗಿರುವುದರಿಂದಲೂ, ಇದಕ್ಕೆ ಬ್ರಹ್ಮಖಂಡವೆಂದು ಹೆಸರು ಬಂದಿರಬಹುದೆಂದು ತೋರುತ್ತದೆ.

ಈ ಖಂಡದಲ್ಲಿ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿ ಹೇಳುವ ಕಥೆಗಳ ಮೂಲಕವೂ, ವಿಷ್ಣುವಿನ ಮಹಿಮೆಯ ಪರಾಕಾಷ್ಠತೆಯನ್ನು ವಿವರಿಸಿದೆ. ಅದರಲ್ಲಿ ಅವನ ಸೇವೆ, ಪೂಜೆ, ಸ್ತೋತ್ರ, ನಮಸ್ಕಾರ, ಪಾದೋದಕಗ್ರಹಣ ಇವನ್ನು ಯಥಾಶಕ್ತಿ

ಯಾಗಿ ಮಾಡಬೇಕು. ಕೈಲಾಗದಿದ್ದರಾಗಲಿ, ಮನಸ್ಸು ಬಾರದಿದ್ದರಾಗಲಿ, ಆ ಸ್ವಾಮಿಯ ನಾಮಗಳನ್ನಾದರೂ ಉಚ್ಚರಿಸಿದರೆ ಸಾಕೆಂದೂ ಹೇಳಿ, ವಿಷ್ಣುವಿನ ಮಹಿಮೆಯನ್ನು ಕೊಂಡಾಡಿ, ಭಕ್ತರಿಗೆ ಅತಿ ಸುಲಭೋಪಾಯವನ್ನು ಬೋಧಿಸಿರುವುದು ಒಂದು ಸುಲಭ ಮತ್ತು ಉತ್ತಮವಾದ ದಾರಿಯಾಗಿದೆ.

ಅದೇ ರೀತಿಯಲ್ಲಿ ವಿಷ್ಣುವಿಗೆ ಪ್ರಿಯವಾದ ಮಾಸಗಳು, ಅವುಗಳಲ್ಲಿ ವಿಷ್ಣು ಪ್ರೀತ್ಯರ್ಥವಾಗಿ ಮಾಡಬೇಕಾದ ಕೆಲಸಗಳು, ಅವನ್ನು ವಿವರಿಸಿ, ಅವುಗಳಲ್ಲಿಯೂ ವಿಷ್ಣುವಿನ ದಿನಗಳೆಂದು ಹೇಳಿರುವ ತಿಥಿಗಳಲ್ಲಿ ವ್ರತಗಳನ್ನೂ, ಜಯಂತಿಗಳನ್ನೂ ಹೇಳಿ ವಿಶದೀಕರಿಸಿರುವುದು. ಇವೆಲ್ಲವೂ ಅತ್ಯಂತ ಕಠಿಣವಾಗಿದ್ದರೂ ಅವರವರ ಯೋಗ್ಯತೆಗೆ ತಕ್ಕಂತೆಯೂ ನಡೆಯಬಹುದೆಂದು ಅದರಲ್ಲಿಯೂ ವಿನಾಯತಿಯನ್ನು ಕಲ್ಪಿಸಿ ಮಾಡಲು ಸಾಧ್ಯವಿಲ್ಲವೆಂಬ ಮನಸ್ಸು ಬರುವಿಕೆಯನ್ನೇ ತೊಡೆದುಬಿಟ್ಟಿರುವುದು.

ವ್ರತಗಳೂ, ಅವುಗಳಿಗೆ ಬೇಕಾದ ನಿಯಮಗಳೂ, ಅವನ್ನು ಆಚರಿಸುವ ನಿಯಮಗಳು ಅವನ್ನು ವಿವರಿಸಿ, ಅದಕ್ಕೆ ದೃಷ್ಟಾಂತವಾಗಿ ಒಂದೊಂದು ಕಥೆಯನ್ನು ಹೇಳಿರುವನಷ್ಟೆ ! ಈ ಕಥೆಗಳು ಮನೋಹರವಾಗಿದ್ದು ಓದುವವನ ಅಥವಾ ಕೇಳುವವನ ಮನಸ್ಸಿನ ಮೇಲೆ ಮಾಡಿಯೇ ಮಾಡಬೇಕೆಂಬ ಪರಿಣಾಮವುಂಟಾಗುವಂತೆ ಮಾಡುತ್ತವೆ. ಇದೇ ಈ ಖಂಡದ ಒಂದು ವೈಶಿಷ್ಟ್ಯ. ಇದರ ಸಂಬಂಧವಾಗಿ ಇನ್ನೂ ಪ್ರಾಸಂಗಿಕವಾದ ಅನೇಕ ವಿಷಯಗಳೂ ಕಥೆಗಳೂ ಬರುತ್ತವೆ. ಅವೂ ಕೂಡ ಮನೋಹರವಾಗಿಯೇ ಇರುವುವು.

ಇಷ್ಟೊಂದು ವ್ರತಗಳನ್ನು ಹೇಳಿರುವುದು, ಇವೆಲ್ಲವನ್ನು ಮಾಡಬೇಕೆಂಬ ಆಶಯದಿಂದಲ್ಲ. ಮಾಡಿದರೆ ತಪ್ಪಿಲ್ಲ. ಆದರೆ ಇವುಗಳಲ್ಲಿ ವಿವರಿಸಿರುವ ದೃಷ್ಟಾಂತಗಳಿಂದ ಮನಸ್ಸು ಕರಗಿ, ಮಾನವನು ಸ್ವಲ್ಪವನ್ನಾದರೂ ಮಾಡಿ ಜನ್ಮವನ್ನು ಸಾರ್ಥಕ್ಯಪಡಿಸಿಕೊಂಡು ಆತ್ಮೋದ್ಧಾರವನ್ನು ಮಾಡಿಕೊಳ್ಳಲೆಂಬುದೇ ಇದರ ಉದ್ದೇಶವಾಗಿರುತ್ತದೆ. ಇಂತಹ ಗ್ರಂಥಗಳು ನಮ್ಮ ಕನ್ನಡಿಗರೆಲ್ಲರಿಗೂ ತಿಳಿಯುವಂತಾಗಿ, ಧರ್ಮಶ್ರದ್ಧೆಯುಳ್ಳವರು ಅದರಂತೆ ಅನುಸರಿಸಿ ಪುಣ್ಯಭಾಗಿಗಳಾಗಲಿ ; ವಿಮರ್ಶಕರು ಹಿಂದಿನ ಮತ್ತು ಈ ಕಾಲದ ಧರ್ಮಗಳನ್ನು ವಿಮರ್ಶಿಸಿ ಅವರದೇ ಒಂದು ರೀತಿಯಾದ ಎರಡು ರೀತಿಯನ್ನು ಬಿಡದೆ ದಾರಿಯನ್ನು ಕಲ್ಪಿಸಲು ಅನುಕೂಲವಾಗಲಿ.

ಇಂತಹ ಅನೇಕ ಗ್ರಂಥಗಳು ಕನ್ನಡ ಭಾಷೆಯಲ್ಲಿ ಹೊರಬೀಳುವಂತೆ ಮಾಡುತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ**

**ಒಡೆಯರ್ ಬಹದ್ದೂರ್** ರವರಿಗೆ ಸಕಲೈಶ್ವರ್ಯಗಳೂ ಲಭಿಸಿ, ಬಹುಕಾಲ ಬಾಳುವಂತೆಯೂ, ಅವರ ಶ್ವೇತಚ್ಛತ್ರದ ನೆರಳಿನಲ್ಲಿ ನಾವು ಸುಖವಾಗಿದ್ದುಕೊಂಡು ಅವನ್ನೆಲ್ಲಾ ನೋಡುತ್ತಾ, ಅನುಭವಿಸುತ್ತ ಇರುವಂತೆಯೂ, ಆ ಸರ್ವಶಕ್ತಳಾದ ಚಾಮುಂಡಾಂಬಿಕೆಯು ಅನುಗ್ರಹಿಸಲೆಂದು ಯಾವಾಗಲೂ ಪ್ರಾರ್ಥಿಸೋಣ.

ಇಂತು ಸತ್ಪುರುಷರ ಹಿಂಬಾಲಕ

**ಬೇಲದಕೆರೆ ಸೂರ್ಯನಾರಾಯಣ ಶಾಸ್ತ್ರೀ**

ಸಂಸ್ಕೃತಸಾಹಿತ್ಯ ವಿದ್ವಾನ್, ಕನ್ನಡ ಪಂಡಿತ.



## ಪದ್ಮಮಹಾಪುರಾಣದಲ್ಲಿ ಬ್ರಹ್ಮಖಂಡದ

# ವಿಷಯಾನುಕ್ರಮಣಿಕೆ.

---

ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ

॥ ಶ್ರೀಃ ॥

---

## ಮಹಾಮುನಿ ಶ್ರೀವ್ಯಾಸಪ್ರಣೀತಂ

# ಪದ್ಮಮಹಾಪುರಾಣಂ

## ತೃತೀಯಂ ಬ್ರಹ್ಮಖಂಡಂ

---

### ಪ್ರಥಮೋಽಧ್ಯಾಯಃ



॥ ಶೌನಕ ಉವಾಚ ॥

**ಕಲೌ ಸಮಾಗತೇ ಸೂತ ಪ್ರಾಣಿನಾಂ ಕೇನ ಕರ್ಮಣಾ ।**
**ಉದ್ಧಾರೋ ವೈ ಭವೇತ್ತಸ್ಮಾತ್ಕಥಯಸ್ವ ಮಮಾಗ್ರತಃ ॥ ೧ ॥**

॥ ಸೂತಉವಾಚ ॥

**ಸಾಧು ಸಾಧು ಮುನಿಶ್ರೇಷ್ಠ ಪುಣ್ಯಾತ್ಮನಾಂ ವರೋ ಭವಾನ್ ।**
**ಸರ್ವೇಷಾಂ ಚ ಜನಾನಾಂ ಚ ಶುಭವಾಂಛೋ ನಿರಂತರಂ ॥ ೨ ॥**

---

### ಮೊದಲನೆಯ ಅಧ್ಯಾಯವು

೧. ಶೌನಕನು ಹೇಳಿದನು:—ಕಲಿಯುಗವು ಬಂದಮೇಲೆ ಯಾವ ಕೆಲಸದಿಂದ ಪ್ರಾಣಿಗಳು ಉದ್ಧಾರವಾಗುತ್ತಾರೆ ಎಂಬುದನ್ನು ಎಲೈ ಸೂತಪುರಾಣಿಕನೇ, ನನಗೆ ಹೇಳು.

೨. ಸೂತನು ಹೇಳಿದನು:—ಒಳ್ಳೆಯದು, ಒಳ್ಳೆಯದು, ಎಲೈ? ಮುನಿಶ್ರೇಷ್ಠನಾದ ಶೌನಕನೆ, ನೀನು ಪುಣ್ಯಶಾಲಿಗಳಲ್ಲಿ ಮೊದಲನೆಯವನು. ಏತಕ್ಕೆಂದರೆ ಜನಗಳಿಗೆಲ್ಲಾ ಯಾವಾಗಲೂ ಶುಭವನ್ನೇ ಕೋರುತ್ತಿದ್ದೀಯೆ.

ಏತದ್ವ್ಯಾಸಃ ಪುರಾ ವಿಪ್ರಃ ಸರ್ವಜ್ಞಸ್ಸರ್ವಪೂಜಿತಃ ।
ಪೃಷ್ಟೋ ಜೈಮಿನಿನಾ ತಂ ಸ ಯದಾಹ ಶೃಣು ವೈಷ್ಣವ ॥ ೩ ॥
ದಂಡವತ್ಪ್ರಣಿಪತ್ಯಾಸೌ ವ್ಯಾಸಂ ಸರ್ವಾರ್ಥಪಾರಗಂ ।
ಗುರುಂ ಸತ್ಯವತೀಸೂನುಂ ಪಪ್ರಚ್ಛ ಮುನಿಪುಂಗವಃ ॥ ೪ ॥

॥ ಜೈಮಿನಿರುವಾಚ ॥

ಕಲೌ ನೃಣಾಂ ಭವೇತ್ಕೇನ ಮೋಕ್ಷೋ ವೈ ಕಥಯಸ್ವ ಮೇ ।
ಅಲ್ಪೇನಾಪಿ ಚ ಪುಣ್ಯೇನ ಮರ್ತ್ಯಾಶ್ಚಾಲ್ಪಾಯುಷೋ ಯತಃ ॥ ೫ ॥

॥ ವ್ಯಾಸ ಉವಾಚ ॥

ಸಾಧುಸಂಗಾದ್ಭವೇದ್ವಿಪ್ರ ಶಾಸ್ತ್ರಾಣಾಂ ಶ್ರವಣಂ ಪ್ರಭೋ ।
ಹರಿಭಕ್ತಿರ್ಭವೇತ್ತಸ್ಮಾತ್ತತೋ ಜ್ಞಾನಂ ತತೋ ಗತಿಃ ॥ ೬ ॥
ನ ರೋಚತೇ ಕಥಾ ಭೂಮೌ ಪಾಪಿಷ್ಠಾಯ ಜನಾಯ ವೈ ।
ವೈಷ್ಣವೀ ಸ ತು ವಿಜ್ಞೇಯಃ ಪಾಪಿಷ್ಠಪ್ರವರೋ ದ್ವಿಜಃ ॥ ೭ ॥
ಶ್ರೀ ಕೃಷ್ಣಸ್ಯ ಕಥಾಂ ಶ್ರುತ್ವಾನಂದೀ ಭವತಿ ವೈಷ್ಣವಃ ।
ಅಸತ್ಯಾಂ ತಾಂ ತು ಯೋ ಬ್ರೂಯಾಜ್ಜ್ಞೇಯಃ ಸ ಪಾಪಿನಾಂ ಗುರುಃ ॥೮॥

---

೩. ಇದನ್ನೇ ಹಿಂದೆ ಸರ್ವಜ್ಞರಾದ ವ್ಯಾಸರನ್ನು ಜೈಮಿನಿಗಳು ಕೇಳಿದರು

೪. ಆ ಜೈಮಿನಿಯು ವ್ಯಾಸರಿಗೆ ದಂಡಪ್ರಣಾಮಮಾಡಿ ಹೀಗೆಂದುಕೇಳಿದನು.

೫. ಜೈಮಿನಿಯು ಕೇಳಿದನು:—ಕಲಿಯುಗದಲ್ಲಿ ಮನುಜರಿಗೆ ಅಲ್ಪಾಯುಸ್ಸಾದುದರಿಂದ ಸ್ವಲ್ಪವಾದ ಪುಣ್ಯದಿಂದಲೇ ಹೇಗೆ ಮೋಕ್ಷವನ್ನು ಪಡೆಯುವರೆಂಬುದನ್ನು ಹೇಳು.

೬. ವ್ಯಾಸನು ಹೇಳಿದನು:—ಎಲೈ! ಬ್ರಾಹ್ಮಣನೇ, ಸಾಧುಸಂಗದಿಂದ ಶಾಸ್ತ್ರಗಳನ್ನು ಕೇಳುತ್ತಾನೆ. ಆ ಶಾಸ್ತ್ರಶ್ರವಣದಿಂದ ಹರಿಯಲ್ಲಿ ಭಕ್ತಿಯುಂಟಾಗುತ್ತದೆ. ಅದರಿಂದ ಜ್ಞಾನವೂ ಆ ಜ್ಞಾನದಿಂದ ಮೋಕ್ಷವೂ ಉಂಟಾಗುತ್ತದೆ.

೭. ಯಾವನಿಗೆ ವಿಷ್ಣುಕಥೆಯು ರುಚಿಸುವುದಿಲ್ಲವೋ ಅವನು ಭೂಮಿಯಲ್ಲಿ ದೊಡ್ಡ ಪಾಪಿಷ್ಠನೆಂದು ತಿಳಿ.

೮. ವೈಷ್ಣವನು ಕೃಷ್ಣನ ಕಥೆಯನ್ನು ಕೇಳಿ ಆನಂದ ಹೊಂದುತ್ತಾನೆ. ಅದನ್ನು ಸುಳ್ಳೆಂದು ಹೇಳುವವನು ಪಾಪಿಗಳಲ್ಲಿ ಪ್ರಥಮನು.

ಯಸ್ಮಿನ್ಯಸ್ಮಿನ್ ಸ್ಥಳೇ ವಿಪ್ರ ಕೃಷ್ಣಸ್ಯ ವರ್ತತೇ ಕಥಾ ।
ತಸ್ಮಾತ್ತಸ್ಮಾಜ್ಜಗನ್ನಾಥೋ ಯಾತಿ ತ್ಯಕ್ತ್ವಾ ನ ಕರ್ಹಿಚಿತ್ ॥ ೯ ॥

ಕೃಷ್ಣಸ್ಯ ಯಃ ಕಥಾರಂಭೇ ಕುರ್ಯಾದ್ವಿಘ್ನಂ ನರಾಧಮಃ ।
ನರಕಾನ್ನಿಷ್ಕೃತಿರ್ನಾಸ್ತಿ ಮನ್ವಂತರಶತಾವಧಿ ॥ ೧೦ ॥

ಯೇ ಪುರಾಣಕಥಾಂ ಶ್ರುತ್ವಾ ನಿಂದಂತ್ಯುಪಹಸಂತಿ ವೈ ।
ತೇಷಾಂ ಕರಸ್ಥಾ ನರಕಾ ಬಹುಕ್ಲೇಶಕರಾಸ್ಸದಾ ॥ ೧೧ ॥

ಜನ್ಮಾಂತರಾರ್ಜಿತಂ ಪಾಪಂ ತ್ಕ್ಷಣಾದೇವ ನಶ್ಯತಿ ।
ಶ್ರೀ ಕೃಷ್ಣಚರಿತಂ ಯೋ ವೈ ಶ್ರೋತುಮಿಚ್ಛಾಂ ಕರೋತ್ಯಪಿ ॥ ೧೨ ॥

ಭಕ್ತ್ಯಾ ಯೋ ವೈ ನರಃ ಕುರ್ಯಾಚ್ಛ್ರೀಕೃಷ್ಣಚರಿತಂ ತಥಾ ।
ನ ಜಾನೇ ಶ್ರವಣೇ ತಸ್ಯ ಕಾ ಗತಿರ್ವಾ ಭವಿಷ್ಯತಿ ॥ ೧೩ ॥

---

೯. ಯಾವಯಾವ ಜಾಗದಲ್ಲಿ ಕೃಷ್ಣನ ಕಥೆಯು ನಡಿಯುತ್ತದೆಯೋ ಅಲ್ಲಲ್ಲಿ ಕೃಷ್ಣನಿದ್ದೇ ಇರುತ್ತಾನೆ. ಆ ಸ್ಥಳವನ್ನು ಬಿಟ್ಟು ಹೋಗುವುದೇ ಇಲ್ಲ.

೧೦. ಕೃಷ್ಣನ ಕಥಾರಂಭದಲ್ಲಿ ಯಾವನು ವಿಘ್ನಮಾಡುತ್ತಾನೋ ಅವನಿಗೆ ನರಕದಿಂದ ನೂರುಮನ್ವಂತರಕಾಲದವರೆಗೂ ಉದ್ಧಾರವಿಲ್ಲ.

೧೧. ಯಾವನು ಪುರಾಣಕಥೆಯನ್ನು ಕೇಳಿ ನಿಂದಿಸುತ್ತ ಹಾಸ್ಯಮಾಡುತ್ತಾನೆಯೋ ಅವನಿಗೆ ಬಹುಕ್ಲೇಶಕರವಾದ ನರಕವು ಕೈಲಿದ್ದಂತೆಯೇ.

೧೨. ಯಾವನು ಶ್ರೀಕೃಷ್ಣನ ಚರಿತ್ರೆಯನ್ನು ಕೇಳಲು ಇಚ್ಛಿಸುತ್ತಾನೋ ಅವನಿಗೆ ಜನ್ಮಾಂತರದಲ್ಲಿ ಮಾಡಿದ ಪಾಪಗಳು ಕೂಡ ಆ ಕ್ಷಣವೇ ನಾಶವಾಗುತ್ತವೆ.

೧೩. ಭಕ್ತಿಯಿಂದ ಶ್ರೀಕೃಷ್ಣಚರಿತೆಯನ್ನು ಕೇಳಬೇಕೆಂಬುವವನಿಗೆ ಸ್ವರ್ಗಪ್ರಾಪ್ತಿಯು. ಕೇಳಿದಮೇಲೆ ಅವನಿಗೆ ಏನು ಗತಿಯುಂಟೆಂಬುದನ್ನು ಹೇಳಲು ಹೇಗೆ ಸಾಧ್ಯ?

ಬ್ರಹ್ಮಹತ್ಯಾದಿಕಂ ಪಾಪಂ ಪರಸ್ತ್ರೀಹರಣಂ ತಥಾ ।
ಸುರಾಪಾನಂ ತಥಾ ಸ್ತೇಯಂ ಸರ್ವಂ ನಶ್ಯತಿ ಪಾಪಿನಃ ॥ ೧೪ ॥

ಪಾಪಂ ಕೃತ್ವಾ ತು ಯೋ ಮರ್ತ್ಯಃ ಪಶ್ಚಾತ್ತಾಪಂ ನಿವರ್ತಯೇತ್ ।
ತಸ್ಯ ಪಾಪಂ ವ್ರಜೇನ್ನಾಶಮಗ್ನಿನಾ ತೂಲರಾಶಿವತ್ ॥ ೧೫ ॥

ಶ್ರೀಕೃಷ್ಣಚರಿತಂ ವಿಪ್ರ ತಿಷ್ಠೇದ್ಯೈ ಪುಸ್ತಕಂ ಗೃಹೇ ।
ತಸ್ಯ ಗೃಹಸಮೀಪಂ ಹಿ ನಾಯಾಂತಿ ಯಮಕಿಂಕರಾಃ ॥ ೧೬ ॥

॥ ಜೈಮಿನಿರುವಾಚ ॥

ವದಂತಿ ವೈಷ್ಣವಾನ್ ಕಾಂಶ್ಚ ವಾಂಛಾ ಬ್ರೂಹಿ ಗುರೋ ಮಮ ।
ಇದಾನೀಂ ತಾನ್ಸಮಾಜ್ಞಾತುಂ ತೇಷಾಂ ಮಾಹಾತ್ಮ್ಯಮುತ್ತಮಂ ॥ ೧೭ ॥

॥ ವ್ಯಾಸ ಉವಾಚ ॥

ಯೋ ನರೋ ಮಸ್ತಕೇ ಭಕ್ತ್ಯಾ ವೈಷ್ಣವಾಂಘ್ರಿಜಲಂ ದ್ವಿಜ ।
ಕರೋತಿ ಸೇಚನಂ ಪಾಪೀ ತೀರ್ಥಸ್ನಾನೇನ ತಸ್ಯ ಕಿಂ ॥ ೧೮ ॥

---

೧೪. ಆ ಕಥೆಯನ್ನು ಕೇಳಿದ ಪಾಪಿಯ ಬ್ರಹ್ಮಹತ್ಯೆ, ಸುರಾಪಾನ, ಪರಸ್ತ್ರೀ ಹರಣ, ಕಳ್ಳತನಗಳ ಪಾಪಗಳು ನಾಶವಾಗುತ್ತವೆ.

೧೫. ಪಾಪಿಯಾದ ಮನುಷ್ಯನು ತನ್ನ ಪಾಪವನ್ನು ನಿವಾರಿಸಿಕೊಳ್ಳಬೇಕಾ ದರೆ ಕೃಷ್ಣನ ಚರಿತೆಯನ್ನು ಕೇಳಿದರೆ ಆ ಪಾಪವು, ಬೆಂಕಿಯು ಹತ್ತಿಯ ರಾಶಿಯನ್ನು ನಾಶಮಾಡುವಂತೆ, ನಾಶವಾಗುತ್ತದೆ.

೧೬. ಶ್ರೀಕೃಷ್ಣಚರಿತೆಯ ಪುಸ್ತಕವು ಮನೆಯಲ್ಲಿದ್ದರೆ ಅವರ ಹತ್ತಿರಕ್ಕೇನೆ ಯಮಕಿಂಕರರು ಬರುವುದಿಲ್ಲ.

೧೭. ಜೈಮಿನಿಯು ಕೇಳುತ್ತಾನೆ:—ಯಾರನ್ನು ವೈಷ್ಣವರೆಂದು ಹೇಳು ತ್ತಾರೆಂದು ತಿಳಿದುಕೊಳ್ಳಬೇಕು? ಆ ಅಪೇಕ್ಷೆ ನನಗಿದೆ. ಹೇಳು. ಈಗ ಅವನ್ನು ತಿಳಿಯಬೇಕು. ಮತ್ತು ಅವರ ಮಹಿಮೆಯನ್ನು ತಿಳಿಯಬೇಕು.

೧೮. ವ್ಯಾಸನು ಹೇಳಿದನು:—ವೈಷ್ಣವರು ತೊಳೆದ ಕಾಲಿನ ನೀರನ್ನು ಯಾವ ಪಾಪಿಯು ತಲೆಗೆ ಪ್ರೋಕ್ಷಿಸಿಕೊಳ್ಳುತ್ತಾನೋ ಅವನಿಗೆ ಬೇರೆ ತೀರ್ಥಸ್ನಾನ ದಿಂದ ಪ್ರಯೋಜನವೇನು?

**ಸಾಧುಸಂಗಂ ತು ಯಃ ಕುರ್ಯಾತ್ ಕ್ಷಣಂ ವಾರ್ಧಕ್ಷಣಂ ದ್ವಿಜ ।**
**ತಸ್ಯ ನಶ್ಯಂತಿ ಪಾಪಾನಿ ಬ್ರಹ್ಮಹತ್ಯಾಮುಖಾನಿ ಚ ॥ ೧೯ ॥**

**ಯತ್ರ ಯತ್ರ ಕುಲೇ ಚೈವ ಏಕೋ ಭವತಿ ವೈಷ್ಣವಃ ।**
**ಕುಲಂ ತಸ್ಯ ಯದಾ ಪಾಪೈರ್ಯುಕ್ತಂ ತನ್ಮೋಕ್ಷಗಾಮಿ ವೈ ॥ ೨೦ ॥**

**ಹಿಂಸಾದಂಭಕಾಮಕ್ರೋಧೈರ್ವರ್ಜಿತಾಶ್ಚೈವ ಯೇ ನರಾಃ ।**
**ಲೋಭಮೋಹಪರಿತ್ಯಕ್ತಾ ಜ್ಞೇಯಾಸ್ತೇ ವೈಷ್ಣವಾ ದ್ವಿಜ ॥ ೨೧ ॥**

**ಪಿತೃಭಕ್ತಾ ದಯಾಯುಕ್ತಾಃ ಸರ್ವಪ್ರಾಣಿಹಿತೇ ರತಾಃ ।**
**ಅಮತ್ಸರಾ ವೈಷ್ಣವಾ ಯೇ ವಿಜ್ಞೇಯಾಸ್ಸತ್ಯಭಾಷಿಣಃ ॥ ೨೨ ॥**

**ವಿಪ್ರಭಕ್ತಿರತಾ ಯೇ ಚ ಪರಸ್ತ್ರೀಷು ನಪುಂಸಕಾಃ ।**
**ಏಕಾದಶೀವ್ರತರತಾ ವಿಜ್ಞೇಯಾಸ್ತೇ ಚ ವೈಷ್ಣವಾಃ ॥ ೨೩ ॥**

**ಗಾಯಂತಿ ಹರಿನಾಮಾನಿ ತುಳಸೀಮಾಲ್ಯಧಾರಕಾಃ ।**
**ಹರ್ಯಂಘ್ರಿಸಲಿಲೈಃ ಸಿಕ್ತಾ ವಿಜ್ಞೇಯಾ ್ತೇ ಚ ವೈಷ್ಣವಾಃ ॥ ೨೪ ॥**

---

೧೯. ಸಾಧುಗಳ ಸಂಗವನ್ನು ಕ್ಷಣವಾಗಲಿ ಅರ್ಧಕ್ಷಣವಾಗಲಿ ಯಾವನು ಮಾಡುತ್ತಾನೋ ಅವನ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗುತ್ತವೆ.

೨೦. ಯಾವ ಕುಲದಲ್ಲಿಯಾಗಲಿ ಅದು ಎಷ್ಟೇ ಪಾಪದಿಂದ ಕೂಡಿದ್ದರೂ ಒಬ್ಬ ವೈಷ್ಣವನು ಹುಟ್ಟಿದರೆ ಅದು ಮೋಕ್ಷವನ್ನು ಹೊಂದುತ್ತದೆ.

೨೧. ಹಿಂಸೆ, ದಂಭ, ಕಾಮ, ಕ್ರೋಧ, ಲೋಭ, ಮೋಹಗಳಿಲ್ಲದ ನರರು ವೈಷ್ಣವರೆಂದು ತಿಳಿ.

೨೨. ಪಿತೃಭಕ್ತರು, ದಯಾವಂತರು, ಪ್ರಾಣಿಗಳಲ್ಲಿ ಹಿತರಾಗಿರುವವರು, ಹೊಟ್ಟೆಗಿಚ್ಚುಪಡದವರು, ಸತ್ಯವಂತರು ಇವರುಗಳು ವೈಷ್ಣವರೆಂದು ತಿಳಿ.

೨೩. ಬ್ರಾಹ್ಮಣರಲ್ಲಿ ಭಕ್ತರು, ಪರರ ಹೆಂಡರನ್ನು ಕಾಮಿಸದವರು, ಏಕಾದಶೀ ವ್ರತವನ್ನು ಮಾಡುವವರು, ಇವರು ವೈಷ್ಣವರು.

೨೪. ಹರಿಯ ನಾಮಗಳನ್ನು ಗಾನಮಾಡುತ್ತ ತುಳಸೀಮಾಲೆಯನ್ನು ಹಾಕಿಕೊಂಡು ಹರಿಯ ಪಾದೋದಕವನ್ನು ಧರಿಸುವವರು ವೈಷ್ಣವರೆಂದು ತಿಳಿ.

ಶ್ರೋತ್ರಯೋರ್ಮಸ್ತಕೇ ಯೇಷಾಂ ತುಳಸ್ಯಾಃ ಪರ್ಣಮುತ್ತಮಂ ।
ಕರ್ಹಿಚಿದ್ದೃಶ್ಯತೇ ವಿಪ್ರ ವಿಜ್ಞೇಯಾಸ್ತೇ-ಚ ವೈಷ್ಣವಾಃ ॥ ೨೫ ॥

ಪಾಷಂಡಸಂಗರಹಿತಾ ವಿಪ್ರದ್ವೇಷವಿವರ್ಜಿತಾಃ ।
ಸಿಂಚೇಯುಸ್ತುಳಸೀಂ ಯೇ ಚ ಜ್ಞಾತವ್ಯಾ ವೈಷ್ಣವಾ ನರಾಃ ॥ ೨೬ ॥

ಪೂಜಯಂತಿ ಹರಿಂ ಯೇ ಚ ತುಳಸೀಂ ಚಾರ್ಚಯಂತಿ ಯೇ ।
ಕನ್ಯಾದಾನರತಾ ಯೇ ಚ ಯೇ ವೈ ಹ್ಯತಿಥಿಪೂಜಕಾಃ ॥ ೨೭ ॥

ಶೃಣ್ವಂತಿ ವಿಷ್ಣುಚರಿತಂ ವಿಜ್ಞೇಯಾ ವೈಷ್ಣವಾ ನರಾಃ ।
ಯಸ್ಯ ಗೇಹೇ ಸುಪ್ರತಿಷ್ಠೇಚ್ಛಾಲಗ್ರಾಮಶಿಲಾಪಿ ಚ ॥ ೨೮ ॥

ಮಾರ್ಜಯಂತಿ ಹರೇಃ ಸ್ಥಾನಂ ಪಿತೃಯಜ್ಞಪ್ರವರ್ತಕಾಃ ।
ಜನೇ ದೀನೇ ದಯಾಯುಕ್ತಾ ವಿಜ್ಞಾಯಾಸ್ತೇ ಚ ವೈಷ್ಣವಾಃ ॥ ೨೯ ॥

ಪರಸ್ವಂ ಬ್ರಾಹ್ಮಣದ್ರವ್ಯಂ ಪಶ್ಯಂತಿ ವಿಷವಚ್ಚ ಯೇ ।
ಹರಿನೈವೇದ್ಯಮಶ್ನಂತಿ ವಿಜ್ಞೇಯಾ ವೈಷ್ಣವಾ ಜನಾಃ ॥ ೩೦ ॥

---

೨೫. ತಲೆಕಿವಿಗಳಲ್ಲಿ ತುಲಸಿಯ ದಳವನ್ನು ಸಿಕ್ಕಿಸಿಕೊಂಡಿರುವವರು ಅವರು ಒಂದುಸಾರಿ ಕಂಡರೂ ಕೂಡ ಅವರು ವೈಷ್ಣವರೆಂದು ತಿಳಿ.

೨೬. ಪಾಷಂಡಿಗಳ ಸಹವಾಸಮಾಡದೆ ಬ್ರಾಹ್ಮಣರನ್ನು ದ್ವೇಷಿಸದೆ ತುಳಸಿಗೆ ನೀರುಹಾಕುವವರನ್ನು ವೈಷ್ಣವರೆಂದು ತಿಳಿ.

೨೭-೨೮. ಹರಿಯನ್ನು ಪೂಜಿಸುತ್ತ ಅವನನ್ನು ತುಳಸಿಯಿಂದ ಅರ್ಚಿಸುತ್ತಾ ಕನ್ಯಾದಾನಮಾಡುತ್ತಾ ಅತಿಥಿಗಳನ್ನು ಪೂಜಿಸುತ್ತ ವಿಷ್ಣುವಿನ ಚರಿತೆಯನ್ನು ಕೇಳುವವರು ವೈಷ್ಣವರು. ಯಾವನ ಮನೆಯಲ್ಲಿ ಸಾಲಗ್ರಾಮವಿದೆಯೋ ಆತನು ವೈಷ್ಣವನು.

೨೯. ಹರಿಯ ದೇವರ ಮನೆಯನ್ನು ಗುಡಿಸಿ ಸಾರಿಸುತ್ತ ಪಿತೃಯಜ್ಞಗಳನ್ನು ಮಾಡುತ್ತ ದೀನರಲ್ಲಿ ದಯೆಯನ್ನು ಹೊಂದಿದ್ದರೆ ಅವರು ವೈಷ್ಣವರೆಂದು ತಿಳಿ.

೩೦. ಪರರ ಮತ್ತು ಬ್ರಾಹ್ಮಣರ ಸ್ವತ್ತನ್ನು ಯಾರು ವಿಷದಂತೆ ಮುಟ್ಟುವದಿಲ್ಲವೋ, ಹರಿಯ ನೈವೇದ್ಯವನ್ನು ಯಾರು ಭಕ್ಷಿಸುತ್ತಾರೋ ಅವರು ವೈಷ್ಣವರು.

ವೇದಶಾಸ್ತ್ರಸುರಕ್ತಾ ಯೇ ತುಳಸೀವನಪಾಲಕಾಃ ।
ರಾಧಾಷ್ಟಮೀವ್ರತರತಾ ವಿಜ್ಞೇಯಾಸ್ತೇ ಚ ವೈಷ್ಣವಾಃ ॥ ೩೧ ॥

ಶ್ರೀಕೃಷ್ಣಪುರತೋ ಯೇ ಚ ದೀಪಂ ಯಚ್ಛಂತಿ ಶ್ರದ್ಧಯಾ ।
ಪರನಿಂದಾಂ ನ ಕುರ್ವಂತಿ ವಿಜ್ಞೇಯಾಸ್ತೇ ಚ ವೈಷ್ಣವಾಃ ॥ ೩೨ ॥

॥ ಸೂತ ಉವಾಚ ॥

ಪೃಷ್ಟೋ ಜೈಮಿನಿನಾ ವ್ಯಾಸ ಇತ್ಯುಕ್ತ್ವಸ್ಸ ಯಥಾಕ್ರಮಂ ।
ಮಯೇದಂ ಕಥ್ಯತೇ ಬ್ರಹ್ಮನ್ ಯತ್ಪ್ರಸಂಗಾದ್ಗುರುಶ್ರುತಂ ॥ ೩೩ ॥

ಅಧ್ಯಾಯಂ ಶ್ರದ್ಧಯಾ ಯುಕ್ತಾ ಯೇ ಶೃಣ್ವಂತಿ ನರೋತ್ತಮಾಃ ।
ಸರ್ವಪಾಪವಿನಿರ್ಮುಕ್ತಾ ಯಾಂತಿ ವಿಷ್ಣೋಃ ಪರಂ ಪದಂ ॥ ೩೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ವ್ಯಾಸ
ಜೈಮಿನಿಸಂವಾದೇ ಪ್ರಥಮೋಽಧ್ಯಾಯಃ

---

೩೧. ವೇದಶಾಸ್ತ್ರಗಳನ್ನೋದುತ್ತ, ತುಳಸಿಯಗಿಡಗಳನ್ನು ಕಾಪಾಡುತ್ತಾ ರಾಧಾಷ್ಟಮಿಯನ್ನಾಚರಿಸುತ್ತ ಇರುವವರು ವೈಷ್ಣವರೆಂದು ತಿಳಿ.

೩೨. ಕೃಷ್ಣನ ಮುಂದೆ ಭಕ್ತಿಯಿಂದ ದೀಪಹಚ್ಚುವವರು, ಪರನಿಂದೆಯನ್ನು ಮಾಡದವರು ವೈಷ್ಣವರೆಂದು ತಿಳಿ.

೩೩. ಸೂತನು ಹೇಳಿದನು:—ಪ್ರಸಂಗವಶದಿಂದ ಗುರುಗಳು ಹೇಳಿದುದನ್ನು ನಾನು ನಿನಗೆ ಹೇಳಿದ್ದೇನೆಂದು ವ್ಯಾಸರು ಜೈಮಿನಿಗೆ ಹೇಳಿದರು.

೩೪. ಈ ಅಧ್ಯಾಯವನ್ನು ಶ್ರದ್ಧೆಯಿಂದ ಕೇಳಿದವರು ಸರ್ವಪಾಪಗಳಿಂದ ಮುಕ್ತರಾಗಿ ವೈಕುಂಠವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ವ್ಯಾಸಜೈಮಿನಿ
ಸಂವಾದವೆಂಬ ಪ್ರಥಮೋಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ಶೃಣು ಶೌನಕ ವಕ್ಷ್ಯಾಮಿ ಚಾನ್ಯಧರ್ಮಂ ಪುರಾತನಂ ।
ವ್ಯಾಸಜೈಮಿನಿಸಂವಾದಂ ಶ್ರೋತೄಣಾಂ ಪಾಪನಾಶನಂ ॥ ೧ ॥

॥ ಜೈಮಿನಿರುವಾಚ ॥

ಕರ್ಮಣಾ ಹಿ ಗುರೋ ಕೇನ ಮಂದಿರಂ ಜಗತೀಪತೇಃ ।
ಯಾತಿ ತತ್ಕಥಯಸ್ವಾದ್ಯ ನರಃ ಪಾಪೀ ಚ ಮೇ ಪ್ರಭೋ ॥ ೨ ॥

॥ ವ್ಯಾಸ ಉವಾಚ ॥

ಶ್ರೀ ಕೃಷ್ಣಮಂದಿರೇ ಯೋ ವೈ ಲೇಪನಂ ಕುರುತೇ ನರಃ ।
ಸರ್ವಪಾಪವಿನಿರ್ಮುಕ್ತಶ್ಚಾಂತೇ ಯಾತಿ ಹರೇರ್ಗೃಹಂ ॥ ೩ ॥

---

## ಎರಡನೆಯ ಅಧ್ಯಾಯವು

೧. ಸೂತನು ಹೇಳಿದನು:—ಎಲೈ! ಶೌನಕನೇ, ಕೇಳತಕ್ಕವರ ಪಾಪನಾಶಕವಾದ ವ್ಯಾಸಜೈಮಿನಿಯ ಸಂವಾದರೂಪವಾದ ಇತರ ಧರ್ಮಗಳನ್ನೂ ಹೇಳುತ್ತೇನೆ. ಕೇಳು.

೨. ಜೈಮಿನಿಯು ಕೇಳಿದನು :—ಪಾಪಿಯಾದ ಮನುಷ್ಯನು ಯಾವ ಕೆಲಸವನ್ನು ಮಾಡಿದರೆ ವೈಷ್ಣವಪದವನ್ನು ಹೊಂದುತ್ತಾನೆಂಬುದನ್ನು ಹೇಳು.

೩. ವ್ಯಾಸನು ಹೇಳಿದನು:—ಕೃಷ್ಣದೇವಸ್ಥಾನಕ್ಕೆ ಸುಣ್ಣ ಮುಂತಾದುವುಗಳನ್ನು ಬಳಿಸಿದರೆ ಆತನು ತನ್ನ ಪಾಪವನ್ನೆಲ್ಲಾ ಕಳೆದುಕೊಂಡು ಹರಿಯ ಸ್ಥಾನವನ್ನು ಹೊಂದುತ್ತಾನೆ.

**ಯಶ್ಚಾಂಬುಲೇಪನಂ ಕುರ್ಯಾತ್ ಸಂಜ್ಞಯಾ ಶೃಣು ಜೈಮಿನೇ ।**
**ತಸ್ಯ ಪುಣ್ಯಮಹಂ ವಚ್ಮಿ ಮಂದಿರೇ ಜಗತೀಪತೇಃ ॥ ೪ ॥**

**ತತ್ರ ಯಾವಂತಿ ಪಶ್ಯಂತಿ ರಜಾಂಸಿ ಚ ದ್ವಿಜೋತ್ತಮ ।**
**ತಾವತ್ಕಲ್ಪಸಹಸ್ರಾಣಿ ಸ ವಸೇದ್ವಿಷ್ಣುಮಂದಿರೇ ॥ ೫ ॥**

**ಪುರಾಸೀದ್ದಂಡಕೋ ನಾಮ್ನಾ ಚೋರೋ ಲೋಕಭಯಪ್ರದಃ ।**
**ಬ್ರಹ್ಮಸ್ವಹಾರೀ ಮಿತ್ರಘ್ನೋ ಯುಗೇ ದ್ವಾಪರಸಂಜ್ಞಕೇ ॥ ೬ ॥**

**ಅಸತ್ಯಭಾಷೀ ಕ್ರೂರಶ್ಚ ಪರಸ್ತ್ರೀಗಮನೇ ರತಃ ।**
**ಗೋಮಾಂಸಾಶೀ ಸುರಾಪಶ್ಚ ಪಾಷಂಡಜನಸಂಗಭಾಕ್ ॥ ೭ ॥**

**ವೃತ್ತಿಚ್ಛೇದೀ ದ್ವಿಜಾತೀನಾಂ ನ್ಯಾಸಾಪಹಾರಕಸ್ತಥಾ ।**
**ಶರಣಾಗತಹಂತಾ ಚ ವೇಶ್ಯಾವಿಭ್ರಮಲೋಲುಪಃ ॥ ೮ ॥**

**ಏಕದಾ ಸ ದ್ವಿಜಶ್ರೇಷ್ಠ ಕಸ್ಯಚಿದ್ವಿಷ್ಣುಮಂದಿರಂ ।**
**ಜಗಾಮ ಹರಣಾರ್ಥಾಯ ವಿಷ್ಣೋರ್ದ್ರವ್ಯಂ ಸ ಮೂಢಧೀಃ ॥ ೯ ॥**

---

೪. ಬುದ್ಧಿಪೂರ್ವಕವಾಗಿ ಸುಣ್ಣ ಮುಂತಾದುವನ್ನು ಹರಿಯ ದೇವಸ್ಥಾನಕ್ಕೆ ಬಳಸಿದರೆ ಅವರಿಗೆ ಬರುವ ಪುಣ್ಯವನ್ನು ಹೇಳುತ್ತೇನೆ, ಕೇಳು.

೫. ಅಲ್ಲಿ ಎಷ್ಟು ಆ ಲೇಪನವಸ್ತುವಿನ ಕಣಗಳು ಅಂಟಿಕೊಳ್ಳುತ್ತವೋ ಅಷ್ಟುಸಾವಿರ ಕಲ್ಪಗಳವರೆಗೂ ಅವನು ವೈಕುಂಠದಲ್ಲಿರುತ್ತಾನೆ.

೬. ಪೂರ್ವದಲ್ಲಿ ದ್ವಾಪರಯುಗದಲ್ಲಿ ದಂಡಕನೆಂಬ ಒಬ್ಬ ಕಳ್ಳನಿದ್ದನು. ಅವನು ಜನಗಳನ್ನು ಬಹುವಾಗಿ ಭಯಪಡಿಸುತ್ತ ಬ್ರಾಹ್ಮಣರ ಸ್ವತ್ತುಗಳನ್ನು ಕದಿಯುತ್ತ ಮಿತ್ರರಿಗೆ ದ್ರೋಹಮಾಡುತ್ತಲಿದ್ದನು.

೭. ಸುಳ್ಳುಹೇಳುತ್ತ, ಇತರರ ಹೆಂಡಿರಲ್ಲಿ ರಮಿಸುತ್ತ, ದನದ ಮಾಂಸವನ್ನು ತಿನ್ನುತ್ತಾ ಹೆಂಡ ಕುಡಿಯುತ್ತಾ ನಾಸ್ತಿಕಜನರ ಸಹವಾಸದಲ್ಲಿರುತ್ತಿದ್ದನು.

೮. ಬ್ರಾಹ್ಮಣರ ಜೀವನವನ್ನು ಹಾಳುಮಾಡುತ್ತ ನ್ಯಾಸಗಳನ್ನು ಕದಿಯುತ್ತ ಶರಣಾಗತರನ್ನು ನಾಶಮಾಡುತ್ತ ಸೂಳೆಯರ ಸಹವಾಸ ಮಾಡುತ್ತಲಿದ್ದನು.

೯. ಒಂದು ಸಾರಿ ಆ ಕಳ್ಳನು ವಿಷ್ಣುವಿನ ದ್ರವ್ಯವನ್ನು ಕದಿಯಲು ವಿಷ್ಣುವಿನ ದೇವಸ್ಥಾನವನ್ನು ಹೊಕ್ಕನು.

ಅಥ ದ್ವಾರಿ ಪ್ರವಿಶ್ಯಾಸಾವಂಘ್ರಿಕರ್ದಮಸಂಯುತಂ ।
ಪ್ರೋಂಛಯಾಮಾಸ ವೈ ನಿಮ್ನಭೂಮೌ ದೇವಗೃಹಸ್ಯ ಚ ॥ ೧೦ ॥

ತೇನೈವ ಕರ್ಮಣಾ ಭೂಮಿರ್ನಿಮ್ನರಿಕ್ತಾ ಬಭೂವ ಹ ।
ಲೋಹಸ್ಯ ಚ ಶಲಾಕಾಭ್ಯಾಮುದ್ಘಾಟ್ಯ ತ್ವರರಂ ಮುದಾ ॥ ೧೧ ॥

ಪ್ರವಿವೇಶ ಹರೇರ್ಗೇಹಂ ವಿತಾನವರಶೋಭಿತಂ ।
ರತ್ನಕಾಂಚನದೀಪಾಳಿಪರಿಧ್ವಸ್ತಮಹತ್ತಮಂ ॥ ೧೨ ॥

ನಾನಾಪುಷ್ಪಸುಗಂಧಾಢ್ಯಂ ನಾನಾಪತ್ರಸಮಾಕುಲಂ ।
ಸುವಾಸಿತಸ್ಯ ತೈಲಸ್ಯ ಗಂಧೇನ ಪರಿಪೂರಿತಂ ॥ ೧೩ ॥

ಅನೇನ ಹಾರಕೇಣಾಥ ಪರ್ಯಂಕೇ ಸುಮನೋಹರೇ ।
ಶಾಯಿತೋ ರಾಧಯಾ ಸಾರ್ಧಂ ದೃಷ್ಟಃ ಪೀತಾಂಬರೋಽಚ್ಯುತಃ ॥ ೧೪ ॥

ಪ್ರಣಮ್ಯ ರಾಧಿಕಾನಾಥಂ ನಿಷ್ಪಾಪಃ ಸೋಽಭವತ್ತದಾ ।
ನೇಷ್ಯಾಮ್ಯಥ ನ ನೇಷ್ಯಾಮಿ ಅನೇನ ಕಿಂ ಭವೇನ್ಮಮ ॥ ೧೫ ॥

---

೧೦. ಅವನು ಬಾಗಿಲಿನಲ್ಲಿ ಹೋಗುತ್ತ ದೇವಸ್ಥಾನದ ಒಳಗಿರುವ ಒಂದು ಹಳ್ಳಕ್ಕೆ ತನ್ನ ಕಾಲಿನಲ್ಲಿ ಅಂಟಿಕೊಂಡಿದ್ದ ಕೊಚ್ಚೆಮಣ್ಣನ್ನೆಲ್ಲಾ ಹಾಕಿದನು.

೧೧. ಆ ಕೆಲಸದಿಂದ ಆ ಭೂಮಿಯು ಸಮನಾಯಿತು. ಆಮೇಲೆ ಕಬ್ಬಿಣದ ಸಲಾಕೆಯಿಂದ ಒಳಗಿನ ತಾಳುಮುಂಬೆಯನ್ನು ತೆಗೆದನು.

೧೨. ಒಳ್ಳೆಯ ಮೇಲ್ಕಟ್ಟುಗಳುಳ್ಳ, ರತ್ನ ಚಿನ್ನಗಳ ದೀಪಗಳಿಂದ ಕತ್ತಲೆಯು ನಾಶವಾಗುತ್ತಿರುವ ಆ ದೇವಸ್ಥಾನವನ್ನು ಪ್ರವೇಶಿಸಿದನು.

೧೩. ಬಗೆಬಗೆಯ ಹೂಗಳವಾಸನೆಯುಳ್ಳ, ಅನೇಕ ಬಗೆಯಾದ ಪತ್ರೆಗಳುಳ್ಳ, ವಾಸನೆಯಾದ ಎಣ್ಣೆಯ ವಾಸನೆಯುಳ್ಳ, ಆ ದೇವಸ್ಥಾನವನ್ನು ಪ್ರವೇಶಿಸಿದನು.

೧೪. ಒಳಗಡೆ ರಾಧೆಯೊಡನೆ ಮಂಚದಮೇಲೆ ಮಲಗಿರುವ ವಿಷ್ಣುವನ್ನು ಈ ಕಳ್ಳನು ನೋಡಿದನು.

೧೫. ಆ ಸ್ವಾಮಿಯನ್ನು ನಮಸ್ಕರಿಸಿ, ಪಾಪವನ್ನು ಕಳೆದುಕೊಂಡನು. ಅನಂತರ ಅವನ ಮೇಲಿರುವ ಪೀತಾಂಬರವನ್ನು ತೆಗೆದುಕೊಳ್ಳಲೇ? ಬೇಡವೆ? ಇದರಿಂದ ನನಗೇನು ಉಪಯೋಗವೆಂದು ಯೋಚಿಸುತ್ತಿದ್ದನು.

ಸೇವಾಂ ಕರ್ತುಮಶಕ್ತೋಽಹಂ ಯತಶ್ಚೌರೋಽಸ್ಮಿ ಸರ್ವದಾ ।
ದ್ರವ್ಯೇಣ ಕಾರ್ಯಮಸ್ತೀತಿ ತನ್ನೇತುಂ ಕೃತವಾನ್ಮನಃ ॥ ೧೬ ॥

ಪಾತಯಿತ್ವಾಂಶುಕಂ ಭೂಮೌ ಕೌಶೇಯಂ ಕಮಲಾಪತೇಃ ।
ಬಬಂಧ ವಸ್ತುಜಾತಂ ಚ ಪಾಣೌ ಕೃತ್ವಾ ಸ ಕಂಪಿತಃ ॥ ೧೭ ॥

ವಿಷ್ಣೋರ್ಮಾಯಯಾಪತೇಶ್ಚಾಥ ತಾನಿ ಸರ್ವಾಣಿ ಜೈಮಿನೇ ।
ಕೃತ್ವಾ ಶಬ್ದಂ ಸುಘೋರಂ ಚ ಪತಿತಾನ್ಯಥ ಭೂತಲೇ ॥ ೧೮ ॥

ಪರಿತ್ಯಜ್ಯ ಸುನಿದ್ರಾಂ ಚ ಧಾವಂತ ಇತಿ ಕಿಮಹೋ ।
ಆಗತಾ ಬಹುಶೋ ಲೋಕಾಶ್ಚೌರೋ ದ್ರವ್ಯಂ ಜವೇನ ಚ ॥ ೧೯ ॥

ತ್ಯಕ್ತ್ವಾ ಧನಂ ಚ ಚೌರೋಽಪಿ ತ್ರಸ್ತಃ ಕಿಂಚಿಜ್ಜಗಾಮ ಹ ।
ದಂಶಿತಃ ಕಾಲಸರ್ಪೇಣ ಮೃತೋಽಸೌ ಗತಕಿಲ್ಬಿಷಃ ॥ ೨೦ ॥

---

೧೬. ಈ ಸ್ವಾಮಿಗೆ ಸೇವೆಮಾಡಲು ನನಗೆ ಶಕ್ತಿಯಿಲ್ಲ. ಏಕೆಂದರೆ ನಾನು ಕಳ್ಳ. ಆದರಿಂದ ಈ ಪೀತಾಂಬರವು ಬೇಡವೆಂದು ಬಿಟ್ಟು ಅಲ್ಲಿರುವ ಹಣ, ಚಿನ್ನ, ರತ್ನಗಳನ್ನು ನೋಡಿ ಇವುಗಳಿಂದ ನನಗೆ ಉಪಯೋಗವುಂಟೆಂದು ತಿಳಿದು ಕದಿಯಲು ಮನಸ್ಸುಮಾಡಿದನು.

೧೭. ಆದರೂ ಆ ಪದಾರ್ಥಗಳನ್ನು ಕಟ್ಟಿಕೊಳ್ಳಲು ಆ ಪೀತಾಂಬರವು ಬೇಕಾದುದರಿಂದ ಅದನ್ನು ತೆಗೆದುಕೊಂಡು ಹರವಿ ಅದರಲ್ಲಿ ಮಿಕ್ಕ ದ್ರವ್ಯಗಳನ್ನು ಹಾಕಿ ಕಟ್ಟಿಕೊಂಡು ಕೈಲಿ ಹಿಡಿದುಕೊಂಡು ನಡುಗಿದನು.

೧೮. ವಿಷ್ಣುವಿನ ಆ ಮಾಯೆಯಿಂದ ಅವನು ನಡುಗಿದಾಗ ಆ ಗಂಟು ಕೆಳಗೆ ಬಿದ್ದು ಬಹುವಾಗಿ ಶಬ್ದವಾಯಿತು.

೧೯. ನಿದ್ದೆಯಿಂದೆಚ್ಚೆತ್ತ ಜನರು ಇದು ಏನು? ಕಳ್ಳ, ಕಳ್ಳ, ಹಣ, ಹಣ ವೆಂದು ಕೂಗುತ್ತ ವೇಗವಾಗಿ ಬಂದರು.

೨೦. ಆ ಕಳ್ಳನು ಕೂಡ ಹಣವನ್ನು ಬಿಟ್ಟು ಕೊಂಚದೂರ ಹೋಗಲು ಅಲ್ಲಿದ್ದ ಕಾಳಸರ್ಪವು ಅವನನ್ನು ಕಚ್ಚಿದುದರಿಂದ ನಿಷ್ಪಾಪಿಯಾದ ಅವನು ಸತ್ತನು.

ಯಮಾಜ್ಞಯಾ ತಸ್ಯ ದೂತಾಃ ಪಾಶಮುದ್ಗರಪಾಣಯಃ ।
ಆಗತಾಸ್ತಂ ಸಮಾನೇತುಂ ದಂಷ್ಟ್ರಿಣಶ್ಚರ್ಮವಾಸಸಃ ॥ ೨೧ ॥

ಬಬಂಧುಶ್ಚರ್ಮಪಾಶೇನ ನಿನ್ಯುರ್ದುರ್ಗಮವರ್ತ್ಮನಾ ।
ದೃಷ್ಟ್ವಾ ತಂ ಶಮನಃ ಕ್ರುದ್ಧಃ ಪಪ್ರಚ್ಛ ಸಚಿವಂ ಪ್ರತಿ ॥ ೨೨ ॥

॥ ಯಮ ಉವಾಚ ॥
ಅನೇನ ಕಿಂ ಕೃತಂ ಕರ್ಮ ಪಾಪಂ ವಾ ಪುಣ್ಯಮೇವ ವಾ ।
ಸಮೂಲಂ ವದ ಹೇ ಪ್ರಾಜ್ಞ ಚಿತ್ರಗುಪ್ತ ಮಮಾಗ್ರತಃ ॥ ೨೩ ॥

॥ ಚಿತ್ರಗುಪ್ತ ಉವಾಚ ॥
ಸೃಷ್ಟಾನಿ ಯಾನಿ ಪಾಪಾನಿ ವಿಧಾತ್ರಾ ಪೃಥಿವೀತಲೇ ।
ಕೃತಾನ್ಯನೇನ ಮೂಢೇನ ಸತ್ಯಮೇತನ್ಮಯೋದಿತಂ ॥ ೨೪ ॥

ಕಿಂ ತ್ವಾಕರ್ಣಯ ಲೋಕೇಶ ಸುಕೃತಂ ಚಾಸ್ಯ ವರ್ತತೇ ।
ಮನ್ಯೇಽಹಂ ಯಮುನಾಭ್ರಾತಃ ಸರ್ವಪಾಪವಿಲೋಪಿ ತತ್ ॥ ೨೫ ॥

---

೨೧. ಆಗ ಯಮನ ಆಜ್ಞೆಯಿಂದ ಪಾಶಮುದ್ಗರಗಳನ್ನು ಕೈಲಿ ಹಿಡಿದು, ಚರ್ಮದ ಹಗ್ಗವನ್ನು ಹಿಡಿದುಕೊಂಡು ಕೋರೆದಾಡೆಯುಳ್ಳ ಯಮನ ಆಳುಗಳು ಬಂದರು.

೨೨. ಚರ್ಮದ ಹಗ್ಗದಿಂದ ಕಟ್ಟಿ ಕೆಟ್ಟಮಾರ್ಗದಿಂದ ಕರೆದುಕೊಂಡು ಹೋಗಿ ಯಮನ ಬಳಿಯಲ್ಲಿ ನಿಲ್ಲಿಸಲು, ಯಮನು ಕೋಪಗೊಂಡು ಆ ಚಿತ್ರಗುಪ್ತರನ್ನು ನೋಡಿ ಇಂತೆಂದನು.

೨೩. ಯಮನು ಹೇಳಿದನು:—ಎಲೈ! ಪ್ರಾಜ್ಞನಾದ ಚಿತ್ರಗುಪ್ತನೇ, ಇವನು ಪಾಪವನ್ನಾಗಲಿ ಪುಣ್ಯವನ್ನಾಗಲಿ ಏನು ಮಾಡಿದ್ದಾನೆ? ಸಕಾರಣವಾಗಿ ಹೇಳೆಂದನು.

೨೪. ಚಿತ್ರಗುಪ್ತನು ಹೇಳಿದನು:—ಭೂಮಿಯಲ್ಲಿ ಏನೇನು ಪಾಪಗಳು ಸೃಷ್ಟವಾಗಿವೆಯೋ ಅವೆಲ್ಲವನ್ನೂ ಈತನು ಮಾಡಿದ್ದಾನೆ. ಇದು ಸತ್ಯವು.

೨೫. ಆದರೆ ಯಮನೇ ಕೇಳು. ಇವನು ಸ್ವಲ್ಪ ಪುಣ್ಯವನ್ನು ಮಾಡಿದ್ದಾನೆ. ಅದು ಈ ಎಲ್ಲಾ ಪಾಪಗಳನ್ನು ನಾಶಮಾಡಬಲ್ಲುದೆಂದು ನನಗೆ ತೋರುತ್ತದೆ.

॥ ಧರ್ಮರಾಜ ಉವಾಚ ॥

ಕಿಂ ಪುಣ್ಯಂ ವರ್ತತೇಽಮಾತ್ಯ ವದ ಸಾರಂ ಮಮಾಂತಿಕೇ ।
ಶ್ರುತ್ವೈವಂ ತದ್ವಿಧಾಸ್ಯಾಮಿ ಯತ್ರ ಯೋಗ್ಯೋ ಭವೇದಸೌ ॥ ೧೬ ॥

ಯಮಸ್ಯ ವಚನಂ ಶ್ರುತ್ವಾ ಸಭಯಶ್ಚಿತ್ರಗುಪ್ತಕಃ ।
ಕೃತ್ವಾ ಹಸ್ತಾಂಜಲಿಂ ಪ್ರಾಹ ಚಾತ್ಮನಃ ಸ್ವಾಮಿನೇ ದ್ವಿಜ ॥ ೧೭ ॥

॥ ಚಿತ್ರಗುಪ್ತ ಉವಾಚ ॥

ಚರಣಾರ್ಥಂ ಹರೇರ್ದ್ರವ್ಯಂ ಗತೋಽಸೌ ಪಾಪಿನಾಂ ವರಃ ।
ಪ್ರೋಕ್ಷಿತಃ ಕರ್ದಮೋ ರಾಜನ್ ಪಾದಯೋರ್ದ್ವಾರತೋ ಹರೇಃ ॥ ೧೮ ॥

ಬಭೂವ ಲಿಪ್ತಾ ಸಾ ಭೂಮಿಃ ಬಿಲಚ್ಛಿದ್ರವಿವರ್ಜಿತಾ ।
ತೇನ ಪುಣ್ಯಪ್ರಭಾವೇನ ನಿರ್ಗತಂ ಪಾತಕಂ ಮಹತ್ ।
ವೈಕುಂಠಂ ಪ್ರತಿ ಯೋಗ್ಯೋಽಸೌ ನಿರ್ಗತಸ್ತವ ದಂಡತಃ ॥ ೧೯ ॥

---

೧೬. ಧರ್ಮರಾಜನು ಹೇಳಿದನು:—ಆ ಪುಣ್ಯವೇನು? ಸಂಗ್ರಹವಾಗಿ ಹೇಳು. ಅದನ್ನು ತಿಳಿದು ಇವನನ್ನು ಎಲ್ಲಿಗೆ ಕಳುಹಿಸಬೇಕೋ ಅಲ್ಲಿಗೆ ಕಳುಹಿಸುತ್ತೇನೆ.

೧೭. ಯಮನ ಮಾತನ್ನು ಕೇಳಿ ಭಯಪಟ್ಟು ಚಿತ್ರಗುಪ್ತನು ಕೈಮುಗಿದುಕೊಂಡು ಸ್ವಾಮಿಗೆ ಇಂತೆಂದನು.

೧೮. ಚಿತ್ರಗುಪ್ತನು ಹೇಳಿದನು:—ಈ ಪಾಪಿಯು ಹರಿಯ ಪ್ರಸ್ಥಪನ್ನು ಕದಿಯಲು ಹೋಗಿ ಕಾಲಿನಲ್ಲಿದ್ದ ಮಣ್ಣನ್ನು ಬಾಗಿಲಿನಲ್ಲಿ ಕೆಡವಿದನು.

೧೯. ಆ ಭೂಮಿಯಲ್ಲಿ ಆ ಕಾಲಿನ ಕೆಸರನ್ನು ತುಳಿಯುತ್ತಲೂ ಆ ಜಾಗವೂ ಸಂದುಗಳನ್ನು ಮುಚ್ಚಿಕೊಂಡು ಸಮಭೂಮಿಯಾಯಿತು. ಆ ಪುಣ್ಯದಿಂದ ಇವನ ಪಾಪವೆಲ್ಲವೂ ಹೋಯಿತು. ನೀನು ಶಿಕ್ಷಿಸಿದ ನಂತರ ಇವನು ವೈಕುಂಠಕ್ಕೆ ಹೋಗಲು ಯೋಗ್ಯನು.

॥ ವ್ಯಾಸ ಉವಾಚ ॥

ಶ್ರುತ್ವಾ ಸ ವಚನಂ ತಸ್ಯ ಪೀಠಂ ಕನಕನಿರ್ಮಿತಂ ।
ದದೌ ತಸ್ಮೈ ಚೋಪವಿಷ್ಟಸ್ತತ್ರ ಪೂಜ್ಯೋ ಯಮೇನ ಸಃ ॥ ೩೦ ॥

ನನಾಮ ಶಿರಸಾ ತಂ ವೈ ಪ್ರೋವಾಚ ವಿನಯಾನ್ವಿತಃ ।

॥ ಯಮ ಉವಾಚ ॥

ಪವಿತ್ರಂ ಮಂದಿರಂ ಮೇಽದ್ಯ ಪಾದಯೋಸ್ತ್ವದ್ಧಿ ರೇಣುಭಿಃ ।
ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ನ ಸಂಶಯಃ ॥೩೧॥

ಇದಾನೀಂ ಗಚ್ಛ ಭೋ ಸಾಧೋ ಹರೇರ್ಮಂದಿರಮುತ್ತಮಂ ।
ನಾನಾಭೋಗಸಮಾಯುಕ್ತಂ ಜನ್ಮಮೃತ್ಯುನಿವಾರಣಂ ॥ ೩೨ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಧರ್ಮರಾಜೋಽಸೌ ಸ್ಯಂದನೇ ಸ್ವರ್ಣನಿರ್ಮಿತೇ ।
ರಾಜಹಂಸಯುತೇ ದಿವ್ಯೇ ತಮಾರೋಪ್ಯ ಗತೈನಸಂ ॥ ೩೩ ॥

ಸಮಸ್ತಸುಖದಂ ಸ್ಥಾನಂ ಪ್ರೇಷಯಾಮಾಸ ಚಕ್ರಿಣಃ ।
ಏವಂ ಪ್ರವಿಷ್ಟೋ ವೈಕುಂಠೇ ತತ್ರ ತಸ್ಥೌ ಸುಖಂ ಚಿರಂ ॥ ೩೪ ॥

---

೩೦. ವ್ಯಾಸನು ಹೇಳಿದನು :—ಅವನ ಮಾತನ್ನು ಕೇಳಿ ಅವನಿಗೆ ಕನಕದಿಂದ ನಿರ್ಮಿತವಾದ ಆಸನವನ್ನು ಕೊಟ್ಟು ಅಲ್ಲಿ ಅವನನ್ನು ಕೂರಿಸಿ, ವಿನಯದಿಂದ ನಮಸ್ಕರಿಸಿದನು.

೩೧. ಯಮನು ಹೇಳಿದನು :—ತಮ್ಮ ಪಾದಧೂಳಿ ಬಿದ್ದುದರಿಂದ ನನ್ನ ಮನೆಯು ಪವಿತ್ರವಾಯಿತು. ಕೃತಾರ್ಥನಾದೆ. ಕೃತಾರ್ಥನಾದೆ. ಖಂಡಿತವಾಗಿಯೂ ಕೃತಾರ್ಥನಾದೆ.

೩೨. ನೀನು ಈಗ ನಾನಾ ಭೋಗಗಳಿಂದ ಕೂಡಿದ, ಜನನಮರಣವರ್ಜಿತವಾದ ವೈಕುಂಠಕ್ಕೆ ಹೋಗು ಎಂದನು.

೩೩-೩೪. ವ್ಯಾಸನು ಹೇಳಿದನು:—ಧರ್ಮರಾಜನು ಹೀಗೆಂದು ಹೇಳಿ, ಚಿನ್ನದಿಂದ ಮಾಡಿರುವ ರಾಜಹಂಸಗಳುಳ್ಳ ರಥದಲ್ಲಿ ಕೂರಿಸಿ, ಹರಿಯ ಸ್ಥಾನಕ್ಕೆ ಕಳುಹಿಸಿದನು. ಹೀಗೆ ಹೋದವನು ವೈಕುಂಠದಲ್ಲಿ ಬಹುಕಾಲವಿದ್ದನು.

**ಲೇಪನಂ ಯೇ ಪ್ರಕುರ್ವಂತಿ ಭಕ್ತ್ಯಾ ತು ಹರಿಮಂದಿರೇ ।**
**ತೇಷಾಂ ಕಿಂ ವಾ ಭವಿಷ್ಯತಿ ನ ಜಾನೇಽಹಂ ದ್ವಿಜೋತ್ತಮ ॥ ೩೫ ॥**

**ಯ ಇದಂ ಶೃಣುಯಾದ್ಭಕ್ತ್ಯಾ ಪಠೇದ್ಯೋ ವಾ ಸಮಾಹಿತಃ ।**
**ಕೋಟಿಜನ್ಮಾರ್ಜಿತಂ ಪಾಪಂ ನಶ್ಯತೇ ಚ ನ ಸಂಶಯಃ ॥ ೩೬ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಹರಿಮಂದಿರ ಲೇಪನಮಾಹಾತ್ಮ್ಯವರ್ಣನಂನಾಮ ದ್ವಿತಿಯೋಽಧ್ಯಾಯಃ**

---

೩೫. ಭಕ್ತಿಯಿಂದ ಹರಿಮಂದಿರದಲ್ಲಿ ಸುಣ್ಣ ಮುಂತಾದುವುಗಳನ್ನು ಬಳಿದರೆ ಅವರಿಗೆ ಯಾವ ಫಲ ಬರುವುದೆಂದು ಹೇಗೆ ಹೇಳಲು ಸಾಧ್ಯ?

೩೬. ಭಕ್ತಿಯಿಂದ ಇದನ್ನು ಓದಿದರೂ ಕೇಳಿದರೂ ಇವನ ಕೋಟಿಜನ್ಮಗಳ ಪಾಪವು ಹೋಗುತ್ತದೆ. ಸಂಶಯವಿಲ್ಲ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಹರಿಮಂದಿರಲೇಪನ ಮಾಹಾತ್ಮ್ಯವರ್ಣನವೆಂಬ ಎರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ತೃತೀಯೋಽಧ್ಯಾಯಃ



॥ ಶೌನಕ ಉವಾಚ ॥

ಕಾರ್ತಿಕಸ್ಯ ಚ ಮಾಹಾತ್ಮ್ಯಂ ಬ್ರೂಹಿ ಸೂತ ಮಮಾಗ್ರತಃ ।
ತದ್ವ್ರತಸ್ಯ ಫಲಂ ಕಿಂ ವಾ ದೋಷಃ ಕಿಂ ತದಕುರ್ವತಃ ॥ ೧ ॥

॥ ಸೂತ ಉವಾಚ ॥

ಪುರೈಕದಾ ಮುನಿಶ್ರೇಷ್ಠ ವ್ಯಾಸಂ ಸತ್ಯವತೀಸುತಂ ।
ಜೈಮಿನಿಃ ಪೃಷ್ಟವಾನೇತದಾರಂಭೇ ಕಥಿತಂ ಮುನಿಃ ॥ ೨ ॥

॥ ವ್ಯಾಸ ಉವಾಚ ॥

ತಿಲತೈಲಂ ಮೈಥುನಂ ಯಃ ಶುಭದೇ ಕಾರ್ತಿಕೇ ತ್ಯಜೇತ್ ।
ಬಹುಜನ್ಮಕೃತೈಃ ಪಾಪೈರ್ಮುಕ್ತೋ ಯಾತಿ ಹರೇರ್ಗೃಹಂ ॥ ೩ ॥

---

## ಮೂರನೆಯ ಅಧ್ಯಾಯವು

೧. ಶೌನಕನು ಹೇಳಿದನು:—ಕಾರ್ತಿಕಮಾಸದ ಮಾಹಾತ್ಮ್ಯವನ್ನು ಹೇಳು. ಆ ವ್ರತವನ್ನು ಮಾಡಿದರೆ ಫಲವೇನು? ಮಾಡದಿದ್ದರೆ ಅದರಿಂದ ದೋಷವೇನು? ಎಂಬುವನ್ನು ಎಲೈ! ಸೂತನೇ, ನೀನು ಹೇಳು.

೨. ಸೂತನು ಹೇಳಿದನು:—ಪೂರ್ವದಲ್ಲಿ ಜೈಮಿನಿಯು ಸತ್ಯವತಿಯ ಮಗನಾದ ವ್ಯಾಸನನ್ನು ಕಾರ್ತಿಕಮಾಸದ ಆರಂಭದಲ್ಲಿ ಕೇಳಲು ಆತನು ಹೇಳಿದನು.

೩. ವ್ಯಾಸನು ಹೇಳಿದನು:—ಎಳ್ಳೆಣ್ಣೆಯನ್ನೂ, ಮೈಥುನಕಾರ್ಯವನ್ನೂ ಕಾರ್ತೀಕಮಾಸದಲ್ಲಿ ಬಿಟ್ಟರೆ ಬಹುಜನ್ಮಗಳಿಂದಲೂ ಮಾಡಿದ ಪಾಪವು ನಾಶವಾಗಿ ವೈಕುಂಠವನ್ನು ಹೊಂದುತ್ತಾನೆ.

**ಮತ್ಸ್ಯಂ ಚ ಮೈಥುನಂ ಯೋ ವೈ ಕಾರ್ತಿಕೇ ನ ಪರಿತ್ಯಜೇತ್ ।**
**ಪ್ರತಿಜನ್ಮನಿ ಸಂಮೂಢಃ ಸೂಕರಶ್ಚ ಭವೇದ್ಧ್ರುವಂ ॥ ೪ ॥**

**ಕಾರ್ತಿಕೇ ತುಳಸೀಪತ್ರೈಃ ಪೂಜಯೇದ್ವೈ ಜನಾರ್ದನಂ ।**
**ಪತ್ರೇಽಪತ್ರೇ ಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೫ ॥**

**ಕಾರ್ತಿಕೇ ಮುನಿಶಾಕಂ ವೈ ಯೋಽಶ್ನಾತಿ ಚ ನರೋತ್ತಮಃ ।**
**ಸಂವತ್ಸರಕೃತಂ ಪಾಪಂ ಶಾಕೇನೈಕೇನ ನಶ್ಯತಿ ॥ ೬ ॥**

**ಕಾರ್ತಿಕೇ ಮುನಿಪುಷ್ಪೈರ್ಯಃ ಪೂಜಯೇನ್ಮಧುಸೂದನಂ ।**
**ದೇವಾನಾಂ ದುರ್ಲಭಂ ಮೋಕ್ಷಂ ಪ್ರಾಪ್ನೋಂತಿ ಕೃಪಯಾ ಹರೇಃ ॥ ೭ ॥**

**ಫಲಂ ತಸ್ಯ ನಚೋಽಶ್ನಾತಿ ಚೋರ್ಜೇ ಯೋ ವೈ ಹರಿಪ್ರಿಯೇ ।**
**ಪ್ರದಾಯ ತು ಹರೇರ್ಬ್ರಹ್ಮನ್ಸ್ವೃಜಿನಂ ಕೋಟಿಜನ್ಮಜಂ ॥ ೮ ॥**

**ಸುರಸಂ ಸರ್ಪಿಷಾ ಯುಕ್ತಂ ದದ್ಯಾದ್ಯೋ ಹರಯೇಽಪಿ ಚ ।**
**ಸರ್ವಪಾಪೈರ್ವಿನಿರ್ಮುಕ್ತಃ ಸ ಗಚ್ಛೇದ್ಧರಿಮಂದಿರಂ ॥ ೯ ॥**

---

೪. ಮಾಂಸ ತಿನ್ನುವುದು, ಮೈಥುನಕಾರ್ಯ ಇವುಗಳನ್ನು ಕಾರ್ತಿಕದಲ್ಲಿ ಬಿಡದಿದ್ದರೆ ಅನೇಕ ಜನ್ಮಗಳವರೆಗೂ ದಡ್ಡನಾಗಿ ಹಂದಿಯಾಗಿ ಹುಟ್ಟುವನು.

೫. ಕಾರ್ತಿಕಮಾಸದಲ್ಲಿ ತುಲಸೀದಳಗಳಿಂದ ವಿಷ್ಣುವನ್ನು ಪೂಜಿಸಿದರೆ ಒಂದೊಂದು ದಳಕ್ಕೂ ಒಂದೊಂದು ಅಶ್ವಮೇಧಫಲವನ್ನು ಹೊಂದುತ್ತಾನೆ.

೬. ಕಾರ್ತಿಕಮಾಸದಲ್ಲಿ ಅಗಸೇಸೊಪ್ಪನ್ನು ತಿಂದರೆ ಒಂದು ಎಲೆಯಿಂದಲೇ ಒಂದು ವರ್ಷಮಾಡಿದ ಪಾಪವು ನಾಶವಾಗುತ್ತದೆ.

೭. ಕಾರ್ತಿಕಮಾಸದಲ್ಲಿ ಅಗಸೇಹೂವಿನಿಂದ ವಿಷ್ಣುವನ್ನು ಪೂಜಿಸಿದರೆ ದೇವತೆಗಳಿಗೂ ದುರ್ಲಭವಾದ ಮೋಕ್ಷವನ್ನು ಹೊಂದುತ್ತಾನೆ.

೮. ಕಾರ್ತಿಕದಲ್ಲಿ ಆ ಅಗಸೆಯ ಕಾಯನ್ನು ತಿಂದರೆ, ದಾನಮಾಡಿದರೆ ಕೋಟಿ ಜನ್ಮದ ಪಾಪವು ನಾಶವಾಗುತ್ತದೆ.

೯. ತುಪ್ಪದಿಂದ ಒಳ್ಳೆಯ ರಸವತ್ತಾದ ಅನ್ನವನ್ನು ಕೊಟ್ಟರೆ ಪಾಪಗಳೆಲ್ಲಾ ಹೋಗಿ ವೈಕುಂಠಕ್ಕೆ ಹೋಗುತ್ತಾನೆ.

ಕಾರ್ತಿಕೇ ಯೋ ನರೋ ದದ್ಯಾದೇಕಪದ್ಮಂ ಹರಾವಪಿ ।
ಅಂತೇ ವಿಷ್ಣುಪದಂ ಗಚ್ಛೇತ್ಸರ್ವಪಾಪವಿವರ್ಜಿತಃ ॥ ೧೦ ॥

ಪ್ರಾತಃಸ್ನಾನಂ ನರೋ ಯೋ ವೈ ಕಾರ್ತಿಕೇ ಶ್ರೀಹರಿಪ್ರಿಯೇ ।
ಕರೋತಿ ಸರ್ವತೀರ್ಥೇಷು ಯಃ ಸ್ನಾತ್ವಾ ತತ್ಫಲಂ ಲಭೇತ್ ॥ ೧೧ ॥

ಕಾರ್ತಿಕೇ ಯೋ ನರೋ ದದ್ಯಾತ್ಪ್ರದೀಪಂ ನಭಸಿ ದ್ವಿಜಃ ।
ವಿಪ್ರಹತ್ಯಾದಿಭಿಃ ಪಾಪೈರ್ಮುಕ್ತೋ ಗಚ್ಛೇದ್ಧರೇರ್ಗೃಹಂ ॥ ೧೨ ॥

ಮುಹೂರ್ತಮಪಿ ಯೋ ದದ್ಯಾತ್ಕಾರ್ತಿಕೇ ಪ್ರೀತಯೇ ಹರೇಃ ।
ದೀಪಂ ನಭಸಿ ವಿಪ್ರೇಂದ್ರ ತಸ್ಮಿಂಸ್ತುಷ್ಟಸ್ಸದಾ ಹರಿಃ ॥ ೧೩ ॥

ಯೋ ದದ್ಯಾಚ್ಚ ಗೃಹೇ ದೀಪಂ ಕೃಷ್ಣಸ್ಯ ಸಘೃತಂ ದ್ವಿಜ ।
ಕಾರ್ತಿಕೇ ಚಾಶ್ವಮೇಧಸ್ಯ ಫಲಂ ಸ್ಯಾದ್ವೈ ದಿನೇ ದಿನೇ ॥ ೧೪ ॥

ಪ್ರದೀಪಸ್ಯ ಚ ಮಾಹಾತ್ಮ್ಯಂ ವಿಶೇಷಮುಚ್ಯತೇ ಮಯಾ ।
ನಿಶಾಮಯ ದ್ವಿಜಶ್ರೇಷ್ಠ ಸೇತಿಹಾಸಂ ಸಮಾಹಿತಃ ॥ ೧೫ ॥

---

೧೦. ಕಾರ್ತೀಕಮಾಸದಲ್ಲಿ ಹರಿಗೆ ಒಂದು ಪದ್ಮವನ್ನು ಪೂಜೆಮಾಡಿದರೂ ಕೂಡ ಸರ್ವಪಾಪಗಳಿಂದಲೂ ಮುಕ್ತನಾಗಿ ಕೊನೆಗೆ ವೈಕುಂಠಕ್ಕೆ ಹೋಗುತ್ತಾನೆ.

೧೧. ಕಾರ್ತೀಕದಲ್ಲಿ ಪ್ರಾತಃಸ್ನಾನಮಾಡಿದರೆ ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವು ಬರುತ್ತದೆ.

೧೨. ಕಾರ್ತೀಕಮಾಸದಲ್ಲಿ ಕಂಬ ನೆಟ್ಟು ಅಂತರಿಕ್ಷದಲ್ಲಿ ದೀಪವನ್ನು ಹಚ್ಚಿದರೆ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗಿ ವೈಕುಂಠಕ್ಕೆ ಹೋಗುತ್ತಾನೆ.

೧೩. ಒಂದು ಕ್ಷಣವಾದರೂ ಅಂತರಿಕ್ಷದಲ್ಲಿ ಕಂಬ ನೆಟ್ಟು ದೀಪ ಹಚ್ಚಿದರೆ ಅವನಲ್ಲಿ ಹರಿಯು ಪ್ರೀತಿಯನ್ನು ಸದಾ ಇಡುತ್ತಾನೆ.

೧೪. ಕೃಷ್ಣನಿಗೆ ಕಾರ್ತಿಕಮಾಸದಲ್ಲಿ ತುಪ್ಪದ ದೀಪವನ್ನು ಹಚ್ಚಿದರೆ ಅವನು ಅಶ್ವಮೇಧಫಲವನ್ನು ಹೊಂದುತ್ತಾನೆ.

೧೫. ದೊಡ್ಡದೀಪವನ್ನು ಹಚ್ಚುವುದರ ಮಾಹಾತ್ಮ್ಯವನ್ನು ಹೇಳುತ್ತೇನೆ, ಕೇಳು. ಅದಕ್ಕೆ ಒಂದು ಪೂರ್ವಕಥೆಯನ್ನು ಹೇಳುತ್ತೇನೆ, ಕೇಳು.

ಪೂರ್ವಂ ತ್ರೇತಾಯುಗೇ ವಿಪ್ರೋ ವೈಕುಂಠೋ ನಾಮತಃ ಶುಚಿಃ ।
ಯಸ್ಯ ಸಂಗಪ್ರಭಾವೇನ ಮುಕ್ತೋ ಭವತಿ ಪಾತಕೀ ॥ ೧೬ ॥

ಏಕದಾ ಕಾರ್ತಿಕೇ ಸೋಽಪಿ ಪ್ರದೀಪಂ ಪುರತೋ ಹರೇಃ ।
ದತ್ವಾ ದೀಪಂ ಗತೋ ವಿಪ್ರೋ ಘೃತಪೂರ್ಣಂ ದ್ವಿಜರ್ಷಭ ॥ ೧೭ ॥

ಸರ್ಪಿಸ್ತತ್ಖಾದಿತಂ ಚಾಖುರಾಗತೋಽಪಿ ಪ್ರದೀಪತಃ ।
ಯಾವತ್ಖಾದಿತುಮಾರೇಭೇ ಬೋಧಿತೋಽಸೌ ಪ್ರದೀಪಕಃ ।
ಮೂಷಕೋಽಗ್ನಿಭಯಾತ್ತತ್ರ ವೇಗೇನಾಪಿ ಪಲಾಯಿತಃ ॥ ೧೮ ॥

ಆಖೋಶ್ಚ ಸಕಲಂ ಪಾಪಂ ವಿನಷ್ಟಂ ಕೃಪಯಾ ಹರೇಃ ।
ಸರ್ಪೇಣ ದಂಶಿತಶ್ಚಾಖುಃ ಪ್ರಾಣತ್ಯಾಗಂ ಚಕಾರ ಹ ॥ ೧೯ ॥

ತತೋ ಯಮಾಜ್ಞಯಾ ದೂತಾಃ ಪಾಶಮುದ್ಗರಪಾಣಯಃ ।
ಆಗತಾಸ್ತಂ ಸಮಾನೇತುಂ ಬಬಂಧುಶ್ಚರ್ಮರಜ್ಜುಭಿಃ ॥ ೨೦ ॥

---

೧೬. ಪೂರ್ವದಲ್ಲಿ ತ್ರೇತಾಯುಗದಲ್ಲಿ ವೈಕುಂಠನೆಂಬ ಶುಚಿಯಾದ ಬ್ರಾಹ್ಮಣನಿದ್ದನು. ಅವನ ಕಥೆಯನ್ನು ಕೇಳಿದರೂ ಕೂಡ ಪಾಪವು ಹೋಗುತ್ತದೆ.

೧೭. ಅವನು ಒಂದು ಸಾರಿ ಕಾರ್ತಿಕಮಾಸದಲ್ಲಿ ತುಪ್ಪದ ದೊಡ್ಡದೀಪವನ್ನು ಹರಿಯಮುಂದೆ ಹತ್ತಿಸಿಹೋದನು.

೧೮. ಅದರಲ್ಲಿದ್ದ ತುಪ್ಪವನ್ನು ತಿನ್ನಲು ಒಂದು ಇಲಿಯು ಅಲ್ಲಿಗೆ ಬಂದು ತಿನ್ನುವುದಕ್ಕೆ ಮೊದಲುಮಾಡಲು ಅದರಿಂದ ಅಲುಗಿದ ಆ ದೀಪವು ದೊಡ್ಡದಾಯಿತು. ಅದರಿಂದ ಹೆದರಿ ಆ ಇಲಿಯು ಓಡಿಹೋಯಿತು.

೧೯. ಇದರಿಂದ ಆ ಇಲಿಯ ಪಾಪವೆಲ್ಲವೂ ಹೋಯಿತು. ಅನಂತರ ಒಂದು ಹಾವು ಅದನ್ನು ಕಚ್ಚಲು ಆ ಇಲಿಯು ಸತ್ತಿತು.

೨೦. ಆ ಮೇಲೆ ಯಮನ ಅಪ್ಪಣೆಯಿಂದ ಪಾಶಮುದ್ಗರಗಳನ್ನು ಹಿಡಿದ ಯಮನ ದೂತರು ಬಂದು ಅದನ್ನು ಕೊಂಡೊಯ್ಯಲು ಚರ್ಮದ ಹಗ್ಗಗಳಿಂದ ಕಟ್ಟಿಹಾಕಿದರು.

ಯಾವನ್ನೇತುಂ ಮನಶ್ಚಕ್ರುಃ ಶಂಖಚಕ್ರಗದಾಧರಾಃ ।
ಆಗತಾ ಗರುಡಾರೂಢಾಃ ವಿಷ್ಣುದೂತಾಶ್ಚತುರ್ಭುಜಾಃ ॥ ೨೧ ॥

ವಿಮಾನಂ ಗಗನೇ ಚೈವ ರಾಜಹಂಸಯುತಂ ಶುಭಂ ।
ನಿರ್ಮಿತಂ ಕನಕೈಶ್ಶುದ್ಧೈಃ ಕಾಮಗಂ ಕೃಪಯಾ ಹರೇಃ ॥ ೨೨ ॥

ಪಾಶಂ ಛಿತ್ವಾ ತತೋ ದೂತಾಃ ಪ್ರೋಚುಸ್ತೇ ಯಮಕಿಂಕರಾನ್ ।
ವಿಷ್ಣುಭಕ್ತೋಽಪ್ಯಸೌ ಮೂಢಾ ವ್ಯರ್ಥಂ ತು ಬಂಧನಂ ಕೃತಂ ॥ ೨೩ ॥

ಗಚ್ಛಧ್ವಂ ಶಮನಪ್ರೇಷ್ಯಾ ಯದಿ ವಾಂಛಾಸ್ತಿ ಜೀವಿತುಂ ।
ಶ್ರುತ್ವಾ ಪ್ರಕಂಪಿತಾಸ್ತೇಽವ್ಯೈ ಪೃಚ್ಛಂತಿ ವಿನಯಾನ್ವಿತಾಃ ॥ ೨೪ ॥

ಕೇನ ಪುಣ್ಯಪ್ರಭಾವೇನ ಯುಷ್ಮಾಭಿರ್ನೀಯತೇ ಪುರಂ ।
ಅಸೌ ವಿಷ್ಣೋರ್ಮಹಾಪಾಪೀ ಯೂಯಂ ತದ್ವಕ್ತುಮರ್ಹಥ ॥ ೨೫ ॥

॥ ವಿಷ್ಣುದೂತಾ ಊಚುಃ ॥

ಪುರತೋ ವಾಸುದೇವಸ್ಯ ಪ್ರದೀಪಂ ಬೋಧನಂ ಕೃತಂ ।
ತೇನೈವ ಕರ್ಮಣಾ ದೂತಾ ನಯಾಮೋ ವಿಷ್ಣುಮಂದಿರಂ ॥ ೨೬ ॥

---

೨೧. ಇವರು ಕೊಂಡೊಯ್ಯಲು ಮನಸ್ಸುಮಾಡುವಷ್ಟರಲ್ಲಿ, ಶಂಖಚಕ್ರಗದೆಗಳನ್ನು ಧರಿಸಿ ಚತುರ್ಭುಜರಾದ ವಿಷ್ಣುದೂತರು ಗರುಡನಮೇಲೆ ಕುಳಿತು ಅಲ್ಲಿಗೆ ಬಂದರು.

೨೨. ರಾಜಹಂಸದಿಂದ ಕೂಡಿದ ಚಿನ್ನದ ಪತ್ರೆಗಳುಳ್ಳ, ಇಷ್ಟಬಂದಂತೆ ಹೋಗುವ ವಿಮಾನವು ಅಂತರಿಕ್ಷದಲ್ಲಿ ಬಂದು ನಿಂತಿತು.

೨೩. ಆ ದೂತರು ಹಗ್ಗವನ್ನು ಕಿತ್ತು ಬಿಸುಟು, ಇವನು ವಿಷ್ಣುಭಕ್ತನು. ನಿಮ್ಮ ಬಂಧನವು ವ್ಯರ್ಥವಾದುದೆಂದರು.

೨೪. ಎಲೈ! ಯಮನ ಆಳುಗಳೇ, ನಿಮಗೆ ಜೀವದಮೇಲೆ ಆಸೆ ಇದ್ದರೆ ಇಲ್ಲಿಂದ ಹೊರಡಿ ಎಂದರು. ಅದನ್ನು ಕೇಳಿದ ಅವರು ನಡುಗುತ್ತಾ ಇಂತೆಂದರು.

೨೫. ಯಾವ ಪುಣ್ಯದ ಪ್ರಭಾವದಿಂದ ನೀವು ಇದನ್ನು ವೈಕುಂಠಕ್ಕೊಯ್ಯುವಿರಿ? ಇದು ಮಹಾಪಾಪಿಯು. ಅದನ್ನು ನೀವು ಹೇಳಿ, ಎನ್ನಲು,

೨೬. ವಿಷ್ಣುದೂತರು ಹೇಳಿದರು:—ಇದು ವಾಸುದೇವನ ಮುಂದಿನ ದೀಪವನ್ನು ದೊಡ್ಡದು ಮಾಡಿತು. ಆ ಕೆಲಸದಿಂದಲೇ ಇದನ್ನು ವೈಕುಂಠಕ್ಕೆ ಒಯ್ಯುತ್ತೇವೆ.

ಅನಿಚ್ಛಯಾಪಿ ಯಃ ಕುರ್ಯಾದ್ವಿಷ್ಣೋರ್ದೀಪಸ್ಯ ಬೋಧನಂ ।
ಕೋಟಿಜನ್ಮಾರ್ಜಿತಂ ಪಾಪಂ ತ್ಯಕ್ತ್ವಾ ಯಾತಿ ಹರೇರ್ಗೃಹಂ ॥ ೨೭ ॥

ಭಕ್ತ್ಯಾ ಪ್ರದೀಪಂ ಯೋ ದದ್ಯಾತ್ಕಾರ್ತಿಕೇ ತು ಹರೇರ್ದಿನೇ ।
ತಸ್ಯ ಪುಣ್ಯಂ ಸಮಾಖ್ಯಾತುಂ ನ ಶಕ್ತೋ ಹರಿಣಾ ವಿನಾ ॥ ೨೮ ॥

ಘೃತಪೂರ್ಣಪ್ರದೀಪಂ ಯೋ ಭಕ್ತ್ಯಾ ದದ್ಯಾದ್ಧರೇರ್ಗೃಹೇ ।
ಅಶ್ವಮೇಧಸಹಸ್ರೇಣ ತಸ್ಯ ಕಿಂ ವಾ ಪ್ರಯೋಜನಂ ॥ ೨೯ ॥

ಅಶ್ವಮೇಧಪ್ರಕರ್ತಾ ಯಃ ಸ್ವರ್ಗಂ ಯಾತಿ ಹರೇರ್ದಿನೇ ।
ಕಾರ್ತಿಕೇ ದೀಪದಾತಾ ಚ ಸ ಗಚ್ಛೇದ್ಧರಿಮಂದಿರಂ ॥ ೩೦ ॥

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ತತೋ ದೂತಾ ಗತಾಸ್ತೇ ವೈ ಯಥಾಗತಾಃ ।
ವಿಷ್ಣುದೂತಾ ರಥೇ ಕೃತ್ವಾ ಗತಾಸ್ತಂ ವಿಷ್ಣುಮಂದಿರಂ ॥ ೩೧ ॥

---

೨೭. ಇಚ್ಛೆಯಿಲ್ಲದಿದ್ದರೂ ವಿಷ್ಣುವಿನ ದೀಪವನ್ನು ಹಚ್ಚಿಸಿದವನು ಕೋಟಿ ಜನ್ಮದ ಪಾಪಗಳನ್ನು ಕಳೆದುಕೊಂಡು ವೈಕುಂಠಕ್ಕೆ ಹೋಗುತ್ತಾನೆ.

೨೮. ಕಾರ್ತಿಕದಲ್ಲಿ ಹರಿದಿನದಲ್ಲಿ ಭಕ್ತಿಯಿಂದ ದೀಪ ಹಚ್ಚಿದವನ ಅದರ ಪುಣ್ಯವನ್ನು ಹೇಳುವುದಕ್ಕೆ ಅಸಾಧ್ಯವು.

೨೯. ತುಪ್ಪದ ದೀಪವನ್ನು ಹರಿಯ ಮುಂದೆ ಹಚ್ಚಿಸಿದರೆ ಸಾವಿರ ಅಶ್ವಮೇಧ ಗಳಿಂದಲಾದರೂ ಪ್ರಯೋಜನವೇನು ?

೩೦. ಹರಿದಿನದಲ್ಲಿ ಅಶ್ವಮೇಧಯಾಗವನ್ನು ಮಾಡಿದರೆ ಅವನು ಸ್ವರ್ಗ ವನ್ನು ಹೊಂದುತ್ತಾನೆ. ಕಾರ್ತಿಕದಲ್ಲಿ ದೀಪದಾನಮಾಡಿದರೆ ವೈಕುಂಠಕ್ಕೆ ಹೋಗು ತ್ತಾನೆ.

೩೧. ವ್ಯಾಸನು ಹೇಳಿದನು :- ಇದನ್ನು ಕೇಳಿ ಯಮದೂತರು ಹೊರಟು ಹೋದರು. ವಿಷ್ಣುದೂತರು ಆ ಇಲಿಯನ್ನು ರಥದಲ್ಲಿ ಕೂರಿಸಿ ವೈಕುಂಠಕ್ಕೆ ಒಯ್ದರು.

ವಿಷ್ಣುಸಾನ್ನಿಧ್ಯ ಏವಾಸ್ಯ ಮನ್ವಂತರಶತಂ ಗತಂ ।
ತತೋ ಮರ್ತ್ಯೇ ರಾಜಕನ್ಯಾ ಬಭೂವ ಕೃಪಯಾ ಹರೇಃ ॥ ೩೨ ॥

ಪುತ್ರಪೌತ್ರಸಮಾಯುಕ್ತಾ ಚಿರಂ ಭೋಗಂ ಚಕಾರ ಸಾ ।
ಇತಃ ಪುನರ್ಗತಾ ಸಾ ತು ಗೋಲೋಕಂ ಹರಿಸೇವಯಾ ॥ ೩೩ ॥

॥ ಸೂತ ಉವಾಚ ॥

ಭಕ್ತ್ಯಾ ಶೃಣೋತಿ ಯೋ ಮರ್ತ್ಯೋ ದೀಪಮಾಹಾತ್ಮ್ಯಮುತ್ತಮಂ ।
ಸರ್ವಪಾಪವಿನಿರ್ಮುಕ್ತಃ ಸ ಯಾತಿ ವಿಷ್ಣುಮಂದಿರಂ ॥ ೩೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ದೀಪದಾನ
ಮಹಾತ್ಮ್ಯಂ ನಾಮ ತೃತೀಯೋಽಧ್ಯಾಯಃ

---

೩೨. ಇದಕ್ಕೆ ವಿಷ್ಣುವಿನ ಸಮೀಪದಲ್ಲಿಯೇ ನೂರು ಮನ್ವಂತರಗಳು ಕಳೆದುವು. ಆ ಮೇಲೆ ಹರಿಯ ಕೃಪೆಯಿಂದ ರಾಜಪುತ್ರಿಯಾಗಿ ಹುಟ್ಟಿತು.

೩೩. ಮಕ್ಕಳು, ಮೊಮ್ಮಕ್ಕಳೊಡನೆ ಬಹುಕಾಲ ಸುಖವಾಗಿದ್ದಳು. ಆಮೇಲೆ ಗೋಸೇವೆಯಿಂದ ಗೋಲೋಕವನ್ನು ಹೊಂದಿದಳು.

೩೪. ಸೂತನು ಹೇಳಿದನು:—ಈ ದೀಪಮಾಹಾತ್ಮ್ಯವನ್ನು ಯಾವನು ಭಕ್ತಿಯಿಂದ ಕೇಳುತ್ತಾನೋ ಅವನು ಸರ್ವಪಾಪಗಳನ್ನು ಕಳೆದುಕೊಂಡು ವೈಕುಂಠಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ದೀಪದಾನ
ಮಾಹಾತ್ಮೆಯೆಂಬ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ಚತುರ್ಥೋಽಧ್ಯಾಯಃ

॥ ಶೌನಕ ಉವಾಚ ॥

ಜಯಂತ್ಯಾಸ್ಸೂತ ಮಾಹಾತ್ಮ್ಯಂ ಕದಾ ಸಾ ಕ್ರಿಯತೇ ಜನೈಃ ।
ಕಥಯಸ್ವ ಮಮ ತ್ವಂ ವೈ ಪೋತಃ ಸಂಸಾರಸಾಗರೇ ॥ ೧ ॥

॥ ಸೂತ ಉವಾಚ ॥

ಶೃಣು ವಿಪ್ರ ಪ್ರವಕ್ಷ್ಯಾಮಿ ಯತ್ಪೃಷ್ಟೋ ಮುನಿಸತ್ತಮ ।
ಪುರಾ ಬ್ರಹ್ಮಾ ನಾರದೇನ ಪೃಷ್ಟ ಏತತ್ಸುರಾಲಯೇ ॥ ೨ ॥

ಜಯಂತ್ಯಾಶ್ಚೈವ ಮಾಹಾತ್ಮ್ಯಂ ಕಥಯಸ್ವ ಪಿತಾಮಹ ।
ಯಚ್ಛ್ರುತ್ವಾಹಂ ಗಮಿಷ್ಯಾಮಿ ತದ್ವಿಷ್ಣೋಃ ಪರಮಂ ಪದಂ ॥ ೩ ॥

---

## ನಾಲ್ಕನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಎಲೈ! ಸೂತನೇ, ಜಯಂತಿಯ ಮಾಹಾತ್ಮ್ಯವನ್ನು ಹೇಳು. ಅದನ್ನು ಯಾವಾಗ ಮಾಡಬೇಕು? ನೀನು ಸಂಸಾರಸಾಗರಕ್ಕೆ ದೋಣಿಯಂತಿರುವನಷ್ಟೆ.

೨. ಸೂತನು ಹೇಳಿದನು :—ಎಲೈ! ಬ್ರಾಹ್ಮಣನೇ, ಹೇಳುತ್ತೇನೆ, ಕೇಳು. ನೀನು ಕೇಳಿದುದನ್ನೇ ಪೂರ್ವದಲ್ಲಿ ಸ್ವರ್ಗದಲ್ಲಿ ನಾರದನು ಬ್ರಹ್ಮನನ್ನು ಕೇಳಿದನು.

೩. ನಾರದನು ಹೇಳಿದನು :—ಎಲೈ! ಪಿತಾಮಹನೇ, ಜಯಂತಿಯ ಮಹಿಮೆಯನ್ನು ಹೇಳು. ಅದನ್ನು ಕೇಳುವುದರಿಂದ ವೈಕುಂಠವನ್ನು ಹೊಂದುತ್ತೇನೆ.

॥ ಬ್ರಹ್ಮೋವಾಚ ॥

ಶೃಣುಷ್ವಾವಹಿತೋ ವಿಪ್ರ ತವಾಗ್ರೇ ಕಥಯಾಮ್ಯಹಂ ।
ಜಯಂತ್ಯಾ ಉಪವಾಸೇನ ವಿಷ್ಣುಲೋಕಂ ಸ ಗಚ್ಛತಿ ॥ ೪ ॥

ಸ್ಮರಣಾತ್ಕೀರ್ತನಾತ್ಪಾಪಂ ಸಪ್ತಜನ್ಮಾರ್ಜಿತಂ ಮುನೇ ।
ಜಯಂತೀ ದಹತೇ ಚೈವ ಕಿಂ ಪುನಃ ಸೋಪವಾಸಕೃತ್ ॥ ೫ ॥

ಜನ್ಮಾಷ್ಟಮೀ ಚ ನವಮೀ ಚೈತ್ರೇ ಮಾಸಿ ಸಿತಾ ಶುಭಾ ।
ಕೃಷ್ಣಾ ಚತುರ್ದಶೀ ಕುಂಭೇ ಮೇಷೇ ಶುಕ್ಲಾ ಚತುರ್ದಶೀ ॥ ೬ ॥

ದುರ್ಗಾಷ್ಟಮ್ಯಾಶ್ವಿನೇ ಶುಕ್ಲಾ ದ್ವಾದಶೀ ಶ್ರವಣಾನ್ವಿತಾ ।
ಮಹಾಪುಣ್ಯಾ ಚ ಶುಭದಾ ಜಯಂತ್ಯಃ ಷಟ್ಪ್ರಕೀರ್ತಿತಾಃ ॥ ೭ ॥

ಕೃಷ್ಣಜನ್ಮಾಷ್ಟಮೀ ಪೂರ್ವಾ ಪ್ರಸಿದ್ಧಾ ಪಾಪನಾಶನೀ ।
ಕ್ರತುಕೋಟಿಸಮಾ ಹ್ಯೇಷಾ ತೀರ್ಥಾನಾಮಯುತೈಸ್ಸಮಾ ॥ ೮ ॥

ಕರ್ತಾ ಗವಾಂ ಸಹಸ್ರಂ ತು ಯೋ ದದಾತಿ ದಿನೇ ದಿನೇ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೯ ॥

---

೪. ಬ್ರಹ್ಮನು ಹೇಳಿದನು :—ಎಲೈ ವಿಪ್ರನೇ, ಹೇಳುವೆನು, ಕೇಳು. ಜಯಂತಿಯ ಉಪವಾಸದಿಂದ ವಿಷ್ಣುಲೋಕವನ್ನು ಹೊಂದುತ್ತಾನೆ.

೫. ಜಯಂತಿಯನ್ನು ಸ್ಮರಿಸುತ್ತ ಹೇಳುವುದರಿಂದ ಏಳು ಜನ್ಮಗಳ ಪಾಪವು ಹೋಗುತ್ತವೆ. ಉಪವಾಸ ಮಾಡಿದರೆ ಹೇಳತಕ್ಕದ್ದೇನಿದೆ ?

೬-೭. ಕೃಷ್ಣಜನ್ಮಾಷ್ಟಮೀ, ಚೈತ್ರ ಶುದ್ಧ ನವಮೀ (ರಾಮನವಮಿ) ಕುಂಭ ಕೃಷ್ಣ ಚತುರ್ದಶಿ, ಮೇಷ ಶುಕ್ಲ ಚತುರ್ದಶಿ, ಆಶ್ವಯುಜದಲ್ಲಿ ದುರ್ಗಾಷ್ಟಮೀ, ಶ್ರವಣ ನಕ್ಷತ್ರದಿಂದ ಕೂಡಿದ ಕೃಷ್ಣದ್ವಾದಶಿ, ಇವು ಆರೂ ಜಯಂತೀ ಎಂದು ಎನಿಸಿಕೊಳ್ಳುತ್ತವೆ. ಇವು ಪುಣ್ಯ ಜನಕಗಳು.

೮. ಕೃಷ್ಣಜನ್ಮಾಷ್ಟಮಿಯು ಪೂರ್ವದಿಂದಲೂ ಪ್ರಸಿದ್ಧವಾಗಿದೆ. ಪಾಪನಾಶಕವಾದುದು. ಕೋಟಿ ಯಾಗಗಳಿಗೆ ಸಮವಾದುದು. ಹತ್ತು ಸಾವಿರ ತೀರ್ಥಗಳಿಗೆ ಸಮವಾದುದು.

೯. ಪ್ರತಿ ದಿನವೂ ಸಾವಿರ ಗೋವುಗಳನ್ನು ದಾನಮಾಡಿದರೆ ಬರುವ ಪುಣ್ಯವನ್ನು ಜಯಂತಿಯ ದಿನ ಉಪವಾಸ ಮಾಡಿದ ಮನುಷ್ಯನು ಹೊಂದುತ್ತಾನೆ.

ಹೇಮಭಾರಸಹಸ್ರಂ ತು ಕುರುಕ್ಷೇತ್ರೇ ರವಿಗ್ರಹೇ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೦ ॥

ಕೃಷ್ಣಾಜಿನಸಹಸ್ರಾಣಿ ತಿಲಧೇನುಶತಾನಿಚ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೧ ॥

ಸಸಾಗರಮಿಮಾಂ ಪೃಥ್ವೀಂ ದತ್ವಾ ಯಲ್ಲಭತೇ ಫಲಂ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೨ ॥

ಕನ್ಯಾಕೋಟಿಸಹಸ್ರಾಣಾಂ ದಾನೇ ಭವತಿ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೩ ॥

ವಾಪೀಕೂಪತಟಾಗಾದಿ ಕರ್ತವ್ಯಂ ದೇವತಾಲಯೇ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೪ ॥

ಮಾತಾಪಿತ್ರೋರ್ಗುರೂಣಾಂ ಚ ಭಕ್ತಿಯುಕ್ತಂ ಕರೋತಿ ಯಃ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೫ ॥

---

೧೦ ಕುರುಕ್ಷೇತ್ರವಲ್ಲಿ ಸೂರ್ಯಗ್ರಹಣಕಾಲದಲ್ಲಿ ಸಾವಿರ ಮಣ ಚಿನ್ನವನ್ನು ದಾನ ಮಾಡಿದ ಪುಣ್ಯವನ್ನು ಜಯಂತಿಯ ದಿನ ಉಪವಾಸಮಾಡಿದವನು ಹೊಂದುತ್ತಾನೆ.

೧೧. ಸಾವಿರ ಕೃಷ್ಣಾಜಿನಗಳನ್ನು ನೂರು ತಿಲಧೇನುಗಳನ್ನು ಕೊಟ್ಟ ಪುಣ್ಯವನ್ನು ಜಯಂತಿಯ ದಿನ ಉಪವಾಸ ಮಾಡಿದವನು ಹೊಂದುತ್ತಾನೆ.

೧೨. ಸಮುದ್ರದೊಡನೆ ಕೂಡಿರುವ ಭೂಮಿಯನ್ನು ದಾನಮಾಡಿದರೆ ಬರುವ ಪುಣ್ಯವನ್ನು ಜಯಂತೀ ಉಪವಾಸಿಯು ಹೊಂದುತ್ತಾನೆ.

೧೩. ಕೋಟಿ ಕನ್ಯೆಯರನ್ನು ದಾನಮಾಡಿದರೆ ಬರುವ ಫಲವನ್ನು ಜಯಂತ್ಯುಪವಾಸಿಯು ಹೊಂದುತ್ತಾನೆ.

೧೪. ದೇವಸ್ಥಾನದಲ್ಲಿ ಕೆರೆ, ಕೊಳ, ಭಾವಿಗಳನ್ನು ಕಟ್ಟಿಸಿದ ಪುಣ್ಯವನ್ನು ಜಯಂತ್ಯುಪವಾಸಿಯು ಹೊಂದುತ್ತಾನೆ.

೧೫. ಭಕ್ತಿಯಿಂದ ತಾಯಿ, ತಂದೆ, ಗುರುಗಳ ಶುಶ್ರೂಷೆ ಮಾಡಿದ ಫಲವು ಜಯಂತಿಯ ಉಪವಾಸಿಗೆ ಬರುತ್ತದೆ.

ಆಪದಾಹರಣಾರ್ಥಾಯ ತೀರ್ಥಸೇವಾಕೃತಾತ್ಮನಾಂ ।
ಸತ್ಯವ್ರತಾನಾಂ ಯತ್ಪುಣ್ಯಂ ಜಯಂತ್ಯಾಂ ಸಮುಪೋಷಣೇ ॥ ೧೬ ॥

ಗಂಗಾಯಾಂ ನರ್ಮದಾಯಾಂ ಯತ್ಪುಣ್ಯೇ ಸಾರಸ್ವತೇ ಜಲೇ ।
ಸ್ನಾತ್ವಾ ಪುಣ್ಯಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೭ ॥

ಯತ್ಪುಣ್ಯಂ ಶ್ರಾದ್ಧಕರ್ತೄಣಾಂ ಪಿತೄಣಾಮಿಂದುಸಂಕ್ಷಯೇ ।
ತತ್ಫಲಂ ಸಮವಾಪ್ನೋತಿ ಜಯಂತ್ಯಾಂ ಸಮುಪೋಷಣೇ ॥ ೧೮ ॥

॥ ನಾರದ ಉವಾಚ ॥

ಕೇನ ಕೇನ ಕೃತಾ ಪೂರ್ವಂ ಕಥಯಸ್ವ ಪಿತಾಮಹ ।

॥ ಬ್ರಹ್ಮೋವಾಚ ॥

ಕಾರ್ತವೀರ್ಯೇಣ ಕರ್ಣೇನ ಕುಮಾರೇಣ ಚ ಧೀಮತಾ ।
ಸಗರೇಣ ದಿಲೀಪೇನ ಕಾಕುತ್ಸ್ಥೇನ ಕೃತಾ ಪುರಾ ॥ ೧೯ ॥

ಗೌತಮೇನ ಚ ಗಾರ್ಗ್ಯೇನ ಜಾಮದಗ್ನ್ಯೇನ ಧೀಮತಾ ।
ವಾಲ್ಮೀಕಿನಾ ಕೃತಾ ಪೂರ್ವಂ ದ್ರೌಪದೇಯೇನ ಸಾಧುನಾ ॥ ೨೦ ॥

---

೧೬. ಆಪತ್ತನ್ನು ತಪ್ಪಿಸಿದವನಿಗೆ, ತೀರ್ಥಸೇವೆಮಾಡಿದ ಪುಣ್ಯಾತ್ಮನಿಗೆ ಬರುವ ಪುಣ್ಯವೂ, ಸತ್ಯವಂತನಿಗೆ ಬರುವ ಪುಣ್ಯವೂ, ಈ ಜಯಂತಿ ಉಪವಾಸಿಗೆ ಲಭಿಸುತ್ತದೆ.

೧೭. ಗಂಗೆ, ಯಮುನೆ, ಸರಸ್ವತಿ, ಇವುಗಳಲ್ಲಿ ಸ್ನಾನಮಾಡಿದ ಪುಣ್ಯವನ್ನು ಜಯಂತಿಯ ಉಪವಾಸದಿಂದ ಹೊಂದುತ್ತಾನೆ.

೧೮. ಅಮಾವಾಸ್ಯೆಯ ದಿನ ಪಿತೃಶ್ರಾದ್ಧಮಾಡಿದವನಿಗೆ ಬರತಕ್ಕ ಪುಣ್ಯವು, ಜಯಂತಿಯ ಉಪವಾಸದಿಂದ ಬರುತ್ತದೆ.

೧೯. ನಾರದನು ಕೇಳಿದನು:—ಎಲೈ ಪಿತಾಮಹನೇ ಹಿಂದೆ ಇದನ್ನು ಯಾರು ಯಾರು ಆಚರಿಸಿದರು ? ಹೇಳು ಎನ್ನಲು,

೨೦. ಬ್ರಹ್ಮನು ಹೇಳಿದನು :—ಕಾರ್ತವೀರ್ಯ, ಕರ್ಣ, ಕುಮಾರಸ್ವಾಮಿ, ಸಗರ, ದಿಲೀಪ, ರಾಮಚಂದ್ರ, ಗೌತಮ, ಗರ್ಗ, ಜಾಮದಗ್ನಿರಾಮ, ವಾಲ್ಮೀಕಿ, ದ್ರುಪದ ಇವರು ಆಚರಿಸಿದ್ದಾರೆ.

ದದಾತಿ ವಾಂಛಿತಾನ್ ಕಾಮಾನ್ ಭಾದ್ರಪದಸ್ಯ ಸಿತಾಷ್ಟಮೀ ।
ಪ್ರಾಜಾಪತ್ಯರ್ಕ್ಷಸಂಯುಕ್ತಾ ವಿಶೇಷೇಣ ಮತಾಷ್ಟಮೀ ॥ ೨೦ ॥

ವರ್ಷೇ ವರ್ಷೇ ಪ್ರಕರ್ತವ್ಯಾ ಪ್ರೀತ್ಯರ್ಥೇ ಚಕ್ರಪಾಣಿನಃ ।
ಕೋಟಿಜನ್ಮಾರ್ಜಿತಂ ಪಾಪಂ ಮುಹೂರ್ತೇನ ವಿಲೀಯತೇ ॥ ೨೧ ॥

ರಾತ್ರೌ ಜಾಗರಣಂ ಕೃತ್ವಾ ನಿಷ್ಠಾಪೂರ್ವಂ ಜಿತೇಂದ್ರಿಯಃ ।
ಗಂಧಪುಷ್ಪಾದಿನೈವೇದ್ಯೈಃ ಪೂಜನೀಯಃ ಪೃಥಕ್ಪೃಥಕ್ ॥ ೨೨ ॥

ಏವಂ ಯಃ ಕುರುತೇ ವಿಪ್ರ ಜಯಂತೀಸಮುಪೋಷಣಂ ।
ಕೋಟಿಜನ್ಮಾರ್ಜಿತಂ ಪಾಪಂ ಜ್ಞಾನತೋಽಜ್ಞಾನತಃ ಕೃತಂ ॥ ೨೩ ॥

ಪ್ರಸಾದಾದ್ದೇವಕೀಸೂನೋರ್ಯಾಮಾರ್ಧೇನ ವಿಲೀಯತೇ ।
ಜಯಂತೀತಿಥಿಸಂಪ್ರಾಪ್ತೇ ಭುಂಜತೇ ಯೇ ನರಾಧಮಾಃ ।
ತ್ರೈಲೋಕ್ಯಸಂಭವಂ ಪಾಪಂ ಭುಂಜತೇ ತೇ ನ ಸಂಶಯಃ ॥ ೨೪ ॥

---

೨೦. ಭಾದ್ರಪದಮಾಸದ ಶುದ್ಧ ಅಷ್ಟಮಿಯು ಇಷ್ಟಾರ್ಥಗಳನ್ನೆಲ್ಲಾ ಕೊಡುತ್ತದೆ. ಶ್ರವಣನಕ್ಷತ್ರದಿಂದ ಕೂಡಿದ್ದರೆ ಅದು ಬಹು ಉತ್ತಮವಾದುದು.

೨೧. ವಿಷ್ಣು ಪ್ರೀತಿಗೋಸ್ಕರವಾಗಿ ಪ್ರತಿ ವರ್ಷವೂ ಮಾಡಬೇಕು. ಹಾಗೆ ಮಾಡಿದರೆ ಕೋಟಿ ಜನ್ಮಗಳ ಪಾಪವೂ ನಾಶವಾಗುತ್ತದೆ.

೨೨. ರಾತ್ರಿಯಲ್ಲಿ ಜಾಗರಣೆಮಾಡುತ್ತಾ ನಿಯಮದಿಂದ ಗಂಧಪುಷ್ಪಾದಿಗಳಿಂದಲೂ ನೈವೇದ್ಯದಿಂದಲೂ ಪೂಜಿಸಬೇಕು.

೨೩. ಈ ರೀತಿ ಜಯಂತಿಯ ಉಪವಾಸಮಾಡಿದರೆ ಜ್ಞಾನ ಅಜ್ಞಾನಗಳಿಂದ ಮಾಡಿದ ಕೋಟಿ ಜನ್ಮಗಳ ಪಾಪವೂ ವಿಷ್ಣುವಿನ ಅನುಗ್ರಹದಿಂದ ಒಂದು ಕ್ಷಣದಲ್ಲಿಯೇ ನಾಶವಾಗುತ್ತದೆ.

೨೪. ಜಯಂತೀ ತಿಥಿಯು ಬಂದಾಗ ಊಟಮಾಡಿದರೆ ಮೂರು ಲೋಕದ ಪಾಪವನ್ನು ಅವನು ಊಟಮಾಡಿದಂತಾಗುತ್ತದೆ.

ಸಾಗರಾದ್ಯಾನಿ ಪುಣ್ಯಾನಿ ಮುಕ್ತಿಸ್ಥಾನಾನಿ ಸರ್ವಶಃ ।
ಗೃಹೇ ತಿಷ್ಠಂತಿ ಸರ್ವಾಂಗೇ ಜಯಂತೀವ್ರತಕಾರಿಣಃ ॥ ೨೬ ॥

ತಸ್ಯ ಸರ್ವಾಣಿ ತೀರ್ಥಾನಿ ದೇಹೇ ತಿಷ್ಠಂತಿ ದೇವತಾಃ ।
ಕರೋತಿ ಯೋ ನರೋ ಭಕ್ತ್ಯಾ ಜಯಂತೀಂ ಕೃಷ್ಣವಲ್ಲಭಾಂ ॥ ೨೭ ॥

ನ ವೇದೇನ ಪುರಾಣೇನ ಮಯಾ ದೃಷ್ಟಂ ಮಹಾಮುನೇ ।
ತತ್ಸಮಂ ನಾಧಿಕಂ ವಾಪಿ ಕೃಷ್ಣರಾಧಾಷ್ಟಮೀವ್ರತಂ ॥ ೨೮ ॥

ನ ಕರೋತಿ ನರೋ ಭಕ್ತ್ಯಾ ಸ ಭವೇತ್ಕ್ರೂರರಾಕ್ಷಸಃ ।
ಯೋ ನರೋಽಶ್ನಾತಿ ಮೂಢಾತ್ಮಾ ಜಯಂತೀವಾಸರೇ ದ್ವಿಜ ।
ಮಹಾನರಕಮಶ್ನಾತಿ ಯಥಾ ಚ ಹರಿವಾಸರೇ ॥ ೨೯ ॥

ಅತೀತಮನಾಗತಂ ಯಸ್ತು ಕುಲಮೇಕೋತ್ತರಂ ಶತಂ ।
ಪತೇತ್ತು ನರಕೇ ಘೋರೇ ಜಯಂತ್ಯಾಂ ಭೋಜನೇನ ವೈ ॥ ೩೦ ॥

---

೨೬. ಸಮುದ್ರವೇ ಮುಂತಾದ ಮುಕ್ತಿಸ್ಥಾನಗಳು ಜಯಂತಿ ಮಾಡುವವನ ಮನೆಯಲ್ಲಿ ಎಲ್ಲೆಲ್ಲಿಯೂ ಇರುತ್ತವೆ.

೨೭. ಎಲ್ಲಾ ತೀರ್ಥಗಳೂ ದೇವತೆಗಳೂ ಜಯಂತಿವ್ರತಮಾಡುವವನ ದೇಹದಲ್ಲಿ ಇರುತ್ತವೆ.

೨೮. ವೇದಪುರಾಣಗಳಲ್ಲಿ ಇದರ ಸಮವಾದ ವ್ರತವನ್ನು ಕಂಡಿಲ್ಲ. ಕೃಷ್ಣ ರಾಧಾಷ್ಟಮೀ ವ್ರತವೂ ಇದರ ಸಮವಾದುದೇ. ಅದನ್ನು ಮಾಡದಿದ್ದರೆ ರಾಕ್ಷಸನಾಗಿ ಹುಟ್ಟುತ್ತಾನೆ.

೨೯: ಜಯಂತಿಯ ದಿನ ಊಟಮಾಡಿದರೆ ಹರಿವಾಸರದಂತೆ ದೋಷ ಹೊಂದಿ ನರಕಭಾಗಿಯಾಗುತ್ತಾನೆ.

೩೦. ಹಿಂದಿನ ಹತ್ತು ತಲೆ, ಮುಂದಿನ ಹತ್ತು ತಲೆ, ತನ್ನದೊಂದು ತಲೆ, ಇವರಿಷ್ಟು ಜನರೂ ಜಯಂತಿಯ ದಿನದ ಊಟದಿಂದ ನಾಶವಾಗಿ ನರಕಭಾಗಿಗಳಾಗುತ್ತಾರೆ.

ಜಯಂತೀ ಬುಧವಾರೇ ಚ ರೋಹಿಣ್ಯಾ ಸಹಿತಾ ಯದಾ ।
ಭವೇಚ್ಚ ಮುನಿಶಾರ್ದೂಲ ಕಿಂಕೃತೈರ್ವ್ರತಕೋಟಿಭಿಃ ॥ ೩೧ ॥

ಕೃತೇ ತ್ರೇತಾಯುಗೇ ಚೈವ ದ್ವಾಪರೇ ಚ ಕಲೌ ಯುಗೇ ।
ಕೃತಾ ಸಮ್ಯಗ್ವಿಧಾನೇನ ಜಯಂತೀ ಪಾಪನಾಶಿನೀ ॥ ೩೨ ॥

ಜಾಗರೇ ಪದ್ಮನಾಭಸ್ಯ ಪುರಾಣಂ ಪಾಠಯೇತ್ತು ಯಃ ।
ಆಜನ್ಮೋಪಾರ್ಜಿತಂ ಪಾಪಂ ದಹತೇ ತೂಲರಾಶಿವತ್ ॥ ೩೩ ॥

ಯಃ ಶೃಣೋತಿ ನರೋ ಭಕ್ತ್ಯಾ ಪುರಾಣಂ ಹರಿವಾಸರೇ ।
ಕೋಟಿಜನ್ಮಾರ್ಜಿತಂ ತಸ್ಯ ಪಾಪಂ ನಶ್ಯತಿ ತತ್ಕ್ಷಣಾತ್ ॥ ೩೪ ॥

ವಾಸರೇ ಪದ್ಮನಾಭಸ್ಯ ಪೂಜಯೇದ್ವಾಚಕಂ ಮುನೇ ।
ಕುಲಕೋಟಿಂ ಸಮುದ್ಧೃತ್ಯ ವಿಷ್ಣುಲೋಕೇ ಸ ಪೂಜ್ಯತೇ ॥ ೩೫ ॥

ಜಯಂತ್ಯಾಮುಪವಾಸೇ ಚ ಯೋ ನರೋಽತ್ರ ಪರಾಙ್ಮುಖಃ ।
ಸರ್ವಧರ್ಮವಿನಿರ್ಮುಕ್ತೋ ಯಾತ್ಯಸೌ ನರಕಂ ಧ್ರುವಂ ॥ ೩೬ ॥

---

೩೧. ರೋಹಿಣೀ ಬುಧವಾರದ ದಿನ ಜಯಂತಿಯು ಬಂದರೆ ಅದನ್ನು ಆಚರಿಸಿದರೆ ಕೋಟ್ಯಂತರ ವ್ರತಗಳಿಂದೇನು ಪ್ರಯೋಜನ?

೩೨. ಕೃತ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಜಯಂತಿಯನ್ನು ವಿಧಿಪೂರ್ವಕವಾಗಿ ಮಾಡಿದರೆ ಪಾಪನಾಶವಾಗುತ್ತದೆ.

೩೩. ಜಯಂತಿಯ ಜಾಗರಣದಲ್ಲಿ ಪುರಾಣವನ್ನು ಹೇಳಿದರೆ ಆ ಜನ್ಮದ ಪಾಪವೆಲ್ಲವೂ ಅಗ್ನಿಯು ಹತ್ತಿಯ ರಾಶಿಯನ್ನು ನಾಶಮಾಡುವಂತೆ ನಾಶವಾಗುತ್ತವೆ.

೩೪. ಹರಿವಾಸರದ ದಿನ ಭಕ್ತಿಯಿಂದ ಪುರಾಣವನ್ನು ಕೇಳಿದರೆ ಕೋಟಿಜನ್ಮದ ಪಾಪವು ನಾಶವಾಗುತ್ತದೆ.

೩೫. ಆ ಜಯಂತಿಯ ದಿನದಲ್ಲಿ ಪುಸ್ತಕವನ್ನು ಪೂಜಿಸಿದರೆ ಕುಲಕೋಟಿಯನ್ನು ಉದ್ಧರಿಸಿ ವೈಕುಂಠದಲ್ಲಿ ಪೂಜ್ಯನಾಗುತ್ತಾನೆ.

೩೬. ಜಯಂತಿಯ ದಿನ ಉಪವಾಸಮಾಡದಿದ್ದರೆ ಮನುಜನು ಸರ್ವಧರ್ಮಗಳನ್ನೂ ನಾಶಮಾಡಿಕೊಂಡು ಖಂಡಿತವಾಗಿಯೂ ನರಕವನ್ನು ಹೊಂದುತ್ತಾನೆ.

ಗಂಧಪುಷ್ಪೈಶ್ಚ ಧೂಪೈಶ್ಚ ಘೃತಪೂರ್ಣಪ್ರದೀಪಕೈಃ ।
ಪೂಜಯೇದ್ಭಕ್ತಿಭಾವೈಶ್ಚ ದದ್ಯಾದ್ವಿಪ್ರಾಯ ದಕ್ಷಿಣಾಂ ॥ ೩೭ ॥

ವಿಧಿನಾನೇನ ಯೋ ವಿಪ್ರ ಜಯಂತೀಂ ಪ್ರಕರೋತಿ ಚ ।
ನರೋ ವೈ ತಾರಯೇದ್ಭಕ್ತ್ಯಾ ಪುರುಷಾನೇಕವಿಂಶತಿಂ ॥ ೩೮ ॥

ನ ದೌರ್ಭಾಗ್ಯಂ ನ ವೈಧವ್ಯಂ ನ ಭವೇತ್ಕಲಹೋ ಗೃಹೇ ।
ಸಂತತೇರ್ನ ವಿರೋಧಂ ಚ ನ ಪಶ್ಯತಿ ಧನಕ್ಷಯಂ ॥ ೩೯ ॥

ಯಾನ್ಯಾಂಶ್ಚಿಕೀರ್ಷತೇ ಕಾಮಾನ್ ಜಯಂತೀಸಮುಪೋಷಕಃ ।
ತಾಂಸ್ತಾನ್ಪ್ರಾಪ್ನೋತಿ ಸಕಲಾನ್ ವಿಷ್ಣುಲೋಕಂ ಚ ಗಚ್ಛತಿ ॥ ೪೦ ॥

ವಿಷ್ಣುಭಕ್ತಿಪರಾ ನಿತ್ಯಂ ಜಯಂತೀವ್ರತಮಾನಸಾಃ ।
ತೇ ಧನ್ಯಾಸ್ತೇ ಕುಲೀನಾಸ್ತ ಈಶ್ವರಾಸ್ತೇ ಚ ಪಂಡಿತಾಃ ॥ ೪೧ ॥

ಯಾನಿ ಕಾನಿ ಚ ತೀರ್ಥಾನಿ ವ್ರತಾನಿ ನಿಯಮಾನಿ ಚ ।
ಜಯಂತೀವಾಸರಸ್ಯೈವ ಕಲಾಂ ನಾರ್ಹಂತಿ ಷೋಡಶೀಂ ॥ ೪೨ ॥

---

೩೭. ಗಂಧ, ಪುಷ್ಪ, ಧೂಪ, ದೀಪಗಳಿಂದ ಹರಿಯನ್ನು ಪೂಜಿಸಿ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡಬೇಕು.

೩೮. ಈ ವಿಧಿಯಿಂದ ಜಯಂತಿಯನ್ನು ಮಾಡಿದರೆ ಇಪ್ಪತ್ತೊಂದು ತಲೆಗಳನ್ನು ಉದ್ಧರಿಸುತ್ತಾನೆ.

೩೯. ಹೀಗೆ ಮಾಡಿದರೆ ದೌರ್ಭಾಗ್ಯ, ವೈಧವ್ಯ, ಜಗಳ, ಸಂತತಿಬಂಧನ ದಾರಿದ್ರ್ಯಗಳೊಂದೂ ಬರುವುದಿಲ್ಲ,

೪೦. ಜಯಂತಿಯು ಉಪವಾಸಿಯು ಅಪೇಕ್ಷೆಯನ್ನೆಲ್ಲಾ ಹೊಂದಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

೪೧. ವಿಷ್ಣುವಿನಲ್ಲಿ ಭಕ್ತಿಯಿಟ್ಟು ಜಯಂತೀ ವ್ರತ ಮಾಡಿದರೆ ಅವರೇ ಧನ್ಯರು, ಕುಲೀನರು, ಪ್ರಭುಗಳು, ಪಂಡಿತರು, ಆಗಿರುತ್ತಾರೆ.

೪೨. ಎಲ್ಲಾ ತೀರ್ಥಗಳೂ ವ್ರತಗಳೂ ನಿಯಮಗಳೂ ಒಟ್ಟಾಗಿ ಸೇರಿದರೂ ಜಯಂತಿಯ ಹದಿನಾರರ ಒಂದು ಭಾಗವನ್ನೂ ಹೋಲುವುದಿಲ್ಲ.

ಭಾದ್ರೇ ವೈ ಚೋಭಯೋ ಪಕ್ಷೇ ಯಃ ಕರೋತಿ ಸಭಾರ್ಯಕಃ ।
ರಾಧಾಕೃಷ್ಣಾಷ್ಟಮೀಂ ವತ್ಸ ಪ್ರಾಪ್ನೋತಿ ಹರಿಸಂನಿಧಿಂ ॥ ೪೩ ॥

ವ್ರತಂ ಚ ಪುಣ್ಯಕಾರಂ ಚ ಯಃ ಕರೋತಿ ಸದಾ ಹರೇಃ ।
ಸ ಯಾತಿ ವಿಷ್ಣೋರ್ವೈಕುಂಠಂ ಜಯಂತೀಸಮುಪೋಷಕಃ ॥ ೪೪ ॥

ಆಚಾರಹೀನಂ ಕುಲಭ್ರಷ್ಟಂ ಕೀರ್ತಿಹೀನಂ ಕುಯೋನಿಜಂ ।
ನಾಶಯತ್ಯಾಶು ಪಾಪಂ ಚ ಜಯಂತೀ ಹರಿವಲ್ಲಭಾ ॥ ೪೫ ॥

ಮೇರುತುಲ್ಯಾನಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ಸ ನಿರ್ದಹತಿ ಸರ್ವಾಣಿ ಜಯಂತ್ಯಾಂ ಸಮುಪೋಷಕಃ ॥ ೪೬ ॥

ಪುತ್ರಾರ್ಥೀ ಲಭತೇ ಪುತ್ರಂ ಧನಾರ್ಥೀ ಲಭತೇ ಧನಂ ।
ಮೋಕ್ಷಾರ್ಥೀ ಲಭತೇ ಮೋಕ್ಷಂ ಜಯಂತ್ಯಾಂ ಸಮುಪೋಷಕಃ ॥ ೪೭ ॥

ಜಯಂತೀಕರಣೇ ಚಿತ್ತಂ ಯೇಷಾಂ ಭವತಿ ತತ್ಪರಂ ।
ಯಮೋಽಪಿ ಶಂಕತೇ ನಿತ್ಯಂ ತೇ ಯಾಂತಿ ಪರಮಾಂ ಗತಿಂ ॥ ೪೮ ॥

---

೪೩. ಭಾದ್ರಪದದಲ್ಲಿ ಬರುವ ಎರಡು ಅಷ್ಟಮಿಗಳಲ್ಲಿ ರಾಧಾಕೃಷ್ಣಾಷ್ಟಮಿಯ ವ್ರತವನ್ನು ಮಾಡಿದರೆ ಹರಿಸಾನ್ನಿಧ್ಯವನ್ನು ಹೊಂದುತ್ತಾನೆ.

೪೪. ಹರಿಯ ಈ ಪುಣ್ಯಪ್ರದವಾದ ವ್ರತವನ್ನು ಮಾಡಿದರೆ ವೈಕುಂಠವನ್ನು ಹೊಂದುತ್ತಾನೆ.

೪೫. ಇದನ್ನು ಮಾಡುವವನು ಆಚಾರಹೀನನಾಗಲಿ ಕುಲಭ್ರಷ್ಟನಾಗಲಿ, ಅಯೋಗ್ಯರಲ್ಲಿ ಹುಟ್ಟಿರಲಿ ಅವನ ಪಾಪವನ್ನೆಲ್ಲಾ ನಾಶವಾಗುತ್ತದೆ.

೪೬. ಮೇರುವಿನಷ್ಟು ಪಾಪವಿದ್ದರೂ ಜಯಂತಿಯ ಉಪವಾಸವು ಅದನ್ನು ಬ್ರಹ್ಮಹತ್ಯಾದಿ ಪಾಪಗಳನ್ನೂ ದಹಿಸುತ್ತದೆ.

೪೭. ಜಯಂತಿಯಲ್ಲಿ ಉಪವಾಸಮಾಡಿದರೆ ಪುತ್ರಾರ್ಥಿಯು ಮಗನನ್ನೂ, ಧನಾರ್ಥಿಯು ಧನವನ್ನೂ, ಮೋಕ್ಷಾರ್ಥಿಯು ಮೋಕ್ಷವನ್ನೂ ಹೊಂದುತ್ತಾನೆ.

೪೮. ಜಯಂತಿಯನ್ನು ಮಾಡುವುದರಲ್ಲಿ ಮನಸ್ಸಿದ್ದಮಾತ್ರಕ್ಕೆ ತನಗೆ ಯಮನು ಹೆದರುತ್ತಾನೆ. ಅವರು ಉತ್ತಮಗತಿಯನ್ನು ಹೊಂದುತ್ತಾರೆ.

॥ ಸೂತ ಉವಾಚ ॥

ಕಥಯಿತ್ವಾ ನಾರದಂ ತು ಯಯೌ ಸ ಚ ಯಥಾಗತಃ ।
ಮಯಾಪಿ ಕಥಿತಂ ಬ್ರಹ್ಮನ್ ಯತ್ಪೃಷ್ಟೋಽಹಂ ತ್ವಯಾ ಮುನೇ ॥ ೪೯ ॥

ಮಾಹಾತ್ಮ್ಯಂ ಚ ಜಯಂತ್ಯಾ ಯೇ ಶೃಣ್ವಂತಿ ಭಕ್ತಿಭಾವತಃ ।
ತೇಽಪಿ ಯಾಂತಿ ಪರಂ ಧಾಮ ವಿಮುಕ್ತಾಸ್ಸರ್ವಪಾತಕೈಃ ॥ ೫೦ ॥

ಪುರಾಣವಾಚಕಂ ಬ್ರಹ್ಮನ್ ಜಯಂತೀವ್ರತಿನಂ ತಥಾ ।
ಯೇ ಪಶ್ಯಂತಿ ನರಾಃ ಪಾಪಾಸ್ತೇ ಯಾಂತಿ ಪರಮಾಂ ಗತಿಂ ॥ ೫೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಬ್ರಹ್ಮನಾರದ
ಸಂವಾದೇ ಜಯಂತೀ ವ್ರತಮಾಹಾತ್ಮ್ಯಂ ನಾಮ
ಚತುರ್ಥೋಽಧ್ಯಾಯಃ

---

೪೯. ಸೂತನು ಹೇಳಿದನು :—ಎಲೈ ನಾರದನೇ, ನೀನು ಕೇಳಿರುವುದನ್ನು ಹೇಳಿದ್ದೇನೆಂದು ಹೇಳಿ ಬ್ರಹ್ಮನು ಹೊರಟುಹೋದನು.

೫೦. ಜಯಂತಿಯ ಮಹಿಮೆಯನ್ನು ಭಕ್ತಿಯಿಂದ ಕೇಳಿದರೆ ಅವರು ಪಾಪಗಳಿಂದ ವರ್ಜಿತರಾಗಿ ಉತ್ತಮಗತಿಯಿಂದ ಹೊಂದುತ್ತಾರೆ.

೫೧. ಪುರಾಣ ಹೇಳುವವನನ್ನೂ, ಜಯಂತಿಯನ್ನು ಮಾಡುವವನನ್ನೂ ಪಾಪಿಗಳು ನೋಡಿದರೆ ಅವರ ಪಾಪವೆಲ್ಲಾ ನಾಶವಾಗುತ್ತದೆ. ಅವರು ಉತ್ತಮಗತಿಯನ್ನು ಹೊಂದುವರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಬ್ರಹ್ಮನಾರದ ಸಂವಾದದಲ್ಲಿ
ಜಯಂತೀಮಹಾತ್ಮೆಯೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ॥ ಪಂಚಮೋಽಧ್ಯಾಯಃ ॥



॥ ಶೌನಕ ಉವಾಚ ॥

ಕಥಯಸ್ವ ಮಹಾಪ್ರಾಜ್ಞ ಪುತ್ರಹೀನೋ ಜನೋ ಭವೇತ್ ।
ಕರ್ಮಣಾ ಕೇನ ವೈ ಸೂತ ಪುತ್ರೋ ಭವತಿ ಕೇನ ಚ ॥ ೧ ॥

॥ ಸೂತ ಉವಾಚ ॥

ಏತತ್ಪೃಷ್ಟಃ ಪುರಾ ಬ್ರಹ್ಮಾ ನಾರದೇನ ಮಹಾತ್ಮನಾ ।
ಸ ಯದಾಹ ತದಾ ತಂ ಚ ಶೃಣುಷ್ವ ಮುನಿಪುಂಗವ ॥ ೨ ॥

॥ ನಾರದ ಉವಾಚ ॥

ಪಿತಾಮಹ ಮಹಾಪ್ರಾಜ್ಞ ಸರ್ವತತ್ತ್ವಾರ್ಥಪಾರಗ ।
ಅಪುತ್ರೋ ವೈ ಭವೇನ್ಮರ್ತ್ಯಃ ಕರ್ಮಣಾ ಕೇನ ಪದ್ಮಜ ॥ ೩ ॥

---

## ಐದನೆಯ ಅಧ್ಯಾಯವು.

೧. ಶೌನಕನು ಹೇಳಿದನು:—ಎಲೈ ! ಪುಣ್ಯಾತ್ಮನೇ, ಮಕ್ಕಳಿಲ್ಲದವರು ಯಾವ ವ್ರತವನ್ನು ಮಾಡಿದರೆ ಮಕ್ಕಳಾಗುತ್ತಾರೆ ? ಹೇಳು.

೨. ಸೂತನು ಹೇಳಿದನು:—ಹಿಂದೆ ನಾರದನು ಬ್ರಹ್ಮನನ್ನು ಇದನ್ನೇ ಕೇಳಿದನು. ಅವನು ಆಗ ಹೇಳಿದುದನ್ನೇ ಹೇಳುತ್ತೇನೆ, ಕೇಳು.

೩. ನಾರದನು ಹೇಳಿದನು:—ಎಲೈ ಪ್ರಾಜ್ಞನಾದ ಪಿತಾಮಹನೇ, ಮನುಜನು ಯಾವ ಪಾಪದಿಂದ ಅಪುತ್ರನಾಗುವನು ?

ವಂಧ್ಯಾ ಸ್ತ್ರೀ ವಾ ಭವೇತ್ಕೇನ ವೃಜಿನೇನ ಮಮಾಗ್ರತಃ ।
ಕಥಯ ಶೃಣ್ವತೋ ಮೇ ಸರ್ವಪ್ರಾಣಿಹಿತೇ ರತ ॥ ೪ ॥

ದುಹಿತಾ ಜಾಯತೇ ಕೇನ ಕರ್ಮಣಾ ವಾ ನಪುಂಸಕಃ ।
ಮೃತವತ್ಸೋ ಭವೇತ್ಕೇನ ಮೃತವತ್ಸಾತಿದುಃಖಿತಾ ॥ ೫ ॥

ಕೇನ ಪುಣ್ಯೇನ ಭೋ ಬ್ರಹ್ಮನ್ ಪುನಃ ಪುತ್ರೋ ಭವೇದ್ವದ ।

॥ ಬ್ರಹ್ಮೋವಾಚ ॥

ಕಥಯಾಮಿ ಸಮಾಸೇನ ಸಾವಧಾನೇನ ತಚ್ಛೃಣು ।
ವೃತ್ತಾಂತಂ ಪೃಚ್ಛಸಿ ತ್ವಂ ವೈ ಶೃಣ್ವತಾಂ ವಿಸ್ಮಯಪ್ರದಂ ॥ ೬ ॥

ಪೂರ್ವಜನ್ಮನಿ ಯೋ ಮರ್ತ್ಯೋ ವರ್ತನಂ ಬ್ರಾಹ್ಮಣಸ್ಯ ಚ ।
ಹರೇದ್ವಾ ಹಾರಯೇದತ್ರ ಪುತ್ರಹೀನೋ ಭವೇತ್ಕಿಲ ॥ ೭ ॥

ಇಹ ಜನ್ಮನಿ ಯೋ ಮರ್ತ್ಯಃ ಪುರಾಣಶ್ರವಣಂ ಹಿ ಚ ।
ಭೂಮಿಂ ಸಸಸ್ಯಾಂ ದಾನಂ ಚ ದದ್ಯಾದ್ವೈ ಶ್ರವಣಾನ್ವಿತಃ । ॥ ೮ ॥

ಧೇನುಂ ಬಹುಗುಣಾಂ ಹೈಮೀಂ ಬಹುದುಗ್ಧಾಂ ಸದಕ್ಷಿಣಾಂ ।
ಸುವರ್ಣಪ್ರತಿಮಾಂ ಚೈವ ತಸ್ಯ ಪುತ್ರೋ ಭವೇದ್ಧ್ರುವಂ ॥ ೯ ॥

---

೪. ಹೆಂಗಸು ಯಾವ ಪಾಪದಿಂದ ಬಂಜೆಯಾಗುವಳು? ಅದೆಲ್ಲವನ್ನೂ ದಯೆಯಿಟ್ಟು ಹೇಳು.

೫. ಯಾವ ಕರ್ಮದಿಂದ ಹೆಣ್ಣುಮಗು ಮತ್ತು ನಪುಂಸಕಮಗುಗಳಾಗುತ್ತವೆ. ಹುಟ್ಟಿದ ಮಗು ಸಾಯುವುದಕ್ಕೂ ಮಗು ಸತ್ತೇ ಹುಟ್ಟುವುದಕ್ಕೂ ಕಾರಣವೇನು? ಯಾವ ಪುಣ್ಯದಿಂದ ಮಗನು ಹುಟ್ಟುವನು? ಹೇಳು ಎಂದನು.

೬. ಬ್ರಹ್ಮನು ಹೇಳಿದನು:—ಎಲೈ! ನಾರದನೇ, ಸಂಗ್ರಹವಾಗಿ ಹೇಳುತ್ತೇನೆ. ಕೇಳು. ಇದು ಕೇಳುವವರಿಗೆ ಆಶ್ಚರ್ಯವನ್ನುಂಟುಮಾಡುತ್ತದೆ.

೭. ಯಾವನು ಪೂರ್ವಜನ್ಮದಲ್ಲಿ ಬ್ರಾಹ್ಮಣಸ್ವತ್ತನ್ನು ಕದ್ದಿರುವನೋ ಅಥವಾ ಅದಕ್ಕೆ ಸಹಾಯಕನಾಗಿರುವನೋ ಅವನು ಪುತ್ರಹೀನನಾಗುವನು.

೮-೯. ಈ ಜನ್ಮದಲ್ಲಿ ಪುರಾಣಶ್ರವಣಮಾಡುತ್ತಾ ಅವನಿಗೆ ಸಸ್ಯಸಹಿತವಾದ ಭೂಮಿಯನ್ನು ಶಾಸ್ತ್ರೋಕ್ತವಾದ ರೀತಿಯಲ್ಲಿ ದಕ್ಷಿಣೆಯೊಡನೆ ಗೋವನ್ನೂ, ಸುವರ್ಣ ಪ್ರತಿಮೆಯನ್ನೂ ದಾನಮಾಡಿದರೆ ಮಕ್ಕಳಾಗುತ್ತವೆ.

ಪೂರ್ವಜನ್ಮನಿ ಯಾ ನಾರೀ ಪರಬಾಲಕಘಾತನಂ ।
ಕರೋತಿ ಕಪಟೇನೈವ ಬಾಲಹೀನಾ ಭವೇದ್ಧ್ರುವಂ ॥ ೧೦ ॥

ಸೌವರ್ಣಪ್ರತಿಮಾದಾನಂ ಯಾ ನಾರೀ ಶ್ರದ್ಧಯಾನ್ವಿತಾ ।
ಕುರ್ಯಾತ್ಪಾನಂ ಬ್ರಾಹ್ಮಣಸ್ಯ ಭಕ್ತ್ಯಾ ವೈ ಚರಣೋದಕಂ ॥ ೧೧ ॥

ಪುರಾಣಶ್ರವಣೇ ಚೈವ ದದ್ಯಾದ್ಗೌ ಬಹುದಕ್ಷಿಣಾಂ ।
ಬಹ್ವಪತ್ಯಾ ಜೀವವತ್ಸಾ ಭವೇನ್ನಾಸ್ತ್ಯತ್ರ ಸಂಶಯಃ ॥ ೧೨ ॥

ಜಲೇ ನಿಮಗ್ನಂ ಬಾಲಂ ಯೋ ದೃಷ್ಟ್ವಾ ಯಾ ನ ಸಮುದ್ಧರೇತ್ ।
ಇಹ ಜನ್ಮನ್ಯಪುತ್ರೋ ವೈ ಸಾಽಪುತ್ರೀ ಚ ಭವೇದ್ಧ್ರುವಂ ॥ ೧೩ ॥

ವೃಷಭಂ ಚೈವ ಕೂಷ್ಮಾಂಡಂ ಸಸುವರ್ಣಂ ಸವಸ್ತ್ರಕಂ ।
ದದ್ಯಾದ್ದಾನಂ ಬ್ರಾಹ್ಮಣಸ್ಯ ಕುರ್ಯಾದ್ಬಾಲವ್ರತಂ ತಥಾ ॥ ೧೪ ॥

---

೧೦. ಪೂರ್ವಜನ್ಮದಲ್ಲಿ ಹೆಂಗಸು ಇತರರ ಮಕ್ಕಳನ್ನು ಕಪಟದಿಂದ ಕೊಂದಿದ್ದರೆ ಆಕೆಗೆ ಮಕ್ಕಳಾಗುವುದಿಲ್ಲ.

೧೧. ಯಾವ ಹೆಂಗಸು ಬ್ರಾಹ್ಮಣನಿಗೆ ಸುವರ್ಣಪ್ರತಿಮಾದಾನಮಾಡಿ ಶ್ರದ್ಧೆಯಿಂದ ಆತನ ಪಾದೋದಕವನ್ನು ಪಾನಮಾಡುವಳೋ ಅವಳಿಗೆ ಮಕ್ಕಳಾಗಿ ಬದುಕುತ್ತವೆ.

೧೨. ಪುರಾಣಶ್ರವಣಮಾಡಿದರೆ ಆತನಿಗೆ ಬಹಳ ದಕ್ಷಿಣೆಗಳಿಂದ ಕೂಡಿದ, ಬಹು ಕರುಗಳನ್ನು ಹಾಕಿರುವ, ಸದ್ಯದಲ್ಲಿ ಕರುವು ಬದುಕಿಕೊಂಡು ಕರೆಯುತ್ತಿರುವ, ಹಸುವನ್ನು ದಾನಕೊಡಬೇಕು.

೧೩. ನೀರಿನಲ್ಲಿ ಮುಳುಗಿದ ಮಕ್ಕಳನ್ನು ಮೇಲಕ್ಕೆತ್ತದಿದ್ದರೆ ಈ ಜನ್ಮದಲ್ಲಿ ಅಪುತ್ರರಾಗುತ್ತಾರೆ.

೧೪. ಹೋರಿಗರುವನ್ನೂ, ಕುಂಬಳಕಾಯನ್ನೂ, ವಸ್ತ್ರ ಮತ್ತು ದಕ್ಷಿಣೆಗಳೊಡನೆ ಬ್ರಾಹ್ಮಣನಿಗೆ ದಾನಮಾಡಿ ಬಲಿವ್ರತವನ್ನು ಮಾಡಬೇಕು.

ಗೌರೀಂ ಕನ್ಯಾಂ ತಥಾ ಕುರ್ಯಾತ್ಪುರಾಣಶ್ರವಣಾಂ ಹಿ ಯಃ ।
ಪುತ್ರೋ ವೈ ಜಾಯತೇ ತಸ್ಯ ಸರ್ವಪಾತಕನಾಶನಂ ॥ ೧೫ ॥

ಪೂರ್ವಜನ್ಮನಿ ಯೋ ಮರ್ತ್ಯೋ ನಿರಾಶಂ ಚಾತಿಥಿಂ ದ್ವಿಜ ।
ಕುರ್ಯಾತ್ಕ್ರೋಧೇನ ದಂಡಂ ಚ ಪುತ್ರಹೀನೋ ಭವೇದ್ಧ್ರುವಂ ॥ ೧೬ ॥

ಬ್ರಾಹ್ಮಣಂ ಚಾತಿಥಿಂ ಚೈವ ಕುರ್ಯಾದ್ಭಕ್ತ್ಯಾ ಪ್ರಪೂಜನಂ ।
ಅನ್ನದಾನಂ ಜಲಂ ಚೈವ ತಥಾ ದೇವಾಲಯಂ ಶುಭಂ ॥ ೧೭ ॥

ಪೂರ್ವಜನ್ಮನಿ ಯಾ ನಾರೀ ಭ್ರೂಣಹತ್ಯಾಂ ಚ ಯೋ ನರಃ ।
ಕುರ್ಯಾತ್ಸಾ ಮೃತವತ್ಸಾ ಚ ಮೃತವತ್ಸೋ ಭವೇದ್ಧ್ರುವಂ ॥ ೧೮ ॥

ಯಾ ನಾರೀ ಸ್ವಾಮಿಸಹಿತಾ ಕುರ್ಯಾಚ್ಚ ಹರಿವಾಸರಂ ।
ಸುಪುತ್ರಾ ಭರ್ತೃಸುಭಗಾ ಭವೇತ್ಸಾ ಪ್ರತಿಜನ್ಮನಿ ॥ ೧೯ ॥

---

೧೫. ಪುರಾಣ ಕೇಳುತ್ತ ಎಂಟು ವರ್ಷದ ಹುಡುಗಿಯನ್ನು ಸಾಲಂಕಾರವಾಗಿ ದಾನಮಾಡಿದರೆ ಪಾಪನಾಶವಾಗಿ ಮಕ್ಕಳಾಗುತ್ತವೆ.

೧೬. ಪೂರ್ವಜನ್ಮದಲ್ಲಿ ಯಾವನು ಅತಿಥಿಯ ಆಶೆಯನ್ನು ಪೂರ್ತಿಮಾಡದೆ ಕೋಪದಿಂದ ಶಿಕ್ಷಿಸಿದ್ದರೆ ಅಪುತ್ರನಾಗುವನು.

೧೭. ಬ್ರಾಹ್ಮಣನು ಅತಿಥಿಯಾಗಿ ಬಂದರೆ ಭಕ್ತಿಯಿಂದ ಪೂಜಿಸಿ ಅನ್ನದಾನ ಮಾಡಬೇಕು. ಕೊಳ, ಕಟ್ಟೆಗಳನ್ನು ಕಟ್ಟಿಸಬೇಕು. ದೇವಾಲಯಗಳನ್ನು ನಿರ್ಮಿಸಬೇಕು.

೧೮. ಪೂರ್ವಜನ್ಮದಲ್ಲಿ ಯಾವ ಗಂಡಸು, ಹೆಂಗಸು, ಗರ್ಭಪತನವನ್ನು ಮಾಡಿರುವರೋ ಅವರ ಮಕ್ಕಳು ಸಾಯುತ್ತಾರೆ.

೧೯. ದಂಪತಿಗಳು ಹರಿವಾಸರವನ್ನು ಆಚರಿಸಿದರೆ ಅವರು ಒಳ್ಳೆಯ ಮಕ್ಕಳನ್ನು ಹೊಂದುವರು. ಆಕೆಯು ಪ್ರತಿ ಜನ್ಮದಲ್ಲಿಯೂ ಉತ್ತಮ ಪತಿಯನ್ನು ಹೊಂದುವಳು.

**ಯೋ ನರೋ ಗೋದಮಂ ಕುರ್ಯಾಚ್ಛೂದ್ರಃ ಕುರ್ಯಾದ್ವಿಮೋಹಿತಃ ।**
**ಬ್ರಾಹ್ಮಣೀಹರಣಂ ವಾಪಿ ಕರ್ಮಣಾ ಸ ನಪುಂಸಕಃ ॥ ೨೦ ॥**

**ಇದಂ ತು ವೃಜಿನಂ ಕುರ್ಯಾತ್ಪಶ್ಚಾತ್ಪುಣ್ಯಂ ಕರೋತಿ ಯಃ ।**
**ಇಹ ಪುಣ್ಯಪ್ರಭಾವೇನ ದುಹಿತಾ ಜಾಯತೇ ದ್ವಿಜ ॥ ೨೧ ॥**

**ಆಸಿತ್ತ್ರೇತಾಯುಗೇ ರಾಜಾ ಶ್ರೀಧರೋ ನಾಮತೋ ದ್ವಿಜ ।**
**ಅಪುತ್ರೋ ಧನವಾಂಸ್ತಸ್ಯ ಜಾಯಾ ಹೇಮಪ್ರಭಾವತೀ ॥ ೨೨ ॥**

**ವ್ಯಾಸಂ ಸಕಲಶಾಸ್ತ್ರಜ್ಞಂ ಸರ್ವಲೋಕಹಿತೈಷಿಣಂ ।**
**ಆಗತಂ ಚೈವ ಪ್ರಪಚ್ಛ ಚಾಽಪುತ್ರೋಽಹಂ ಕಥಂ ವದ ॥ ೨೩ ॥**

**ಉವಾಚ ನೃಪತೇಃ ಶ್ರುತ್ವಾ ವಚನಂ ವಿನಯಾನ್ವಿತಂ ।**
**ರಾಜ್ಞಾ ದತ್ತೇ ಚ ಪೀಠೇ ಚ ನಿರ್ಮಿತೇ ಕನಕಾದಿಭಿಃ ॥ ೨೪ ॥**

**ರಾಜಾ ರಾಜ್ಞೀ ತಸ್ಯ ಪಾದೌ ಧೌತಂ ಕೃತ್ವಾ ತು ಹರ್ಷಿತೌ ।**
**ಪೀತ್ವಾ ಪಾದೋದಕಂ ದ್ವೌ ಚ ಸರ್ವಪಾತಕನಾಶನಂ ॥ ೨೫ ॥**

---

೨೦. ಯಾವನು ಗೋವನ್ನು ಶಿಕ್ಷಿಸುವನೋ, ಶೂದ್ರನು ಮೋಹದಿಂದ ಬ್ರಾಹ್ಮಣ ಸ್ತ್ರೀಯನ್ನು ಕದಿಯುತ್ತಾನೋ ಅವರು ನಪುಂಸಕರಾಗುವರು.

೨೧. ಮೊದಲು ಪಾಪಮಾಡಿ ಆ ಮೇಲೆ ಪುಣ್ಯಮಾಡಿದರೆ ಆ ಪುಣ್ಯಪ್ರಭಾವ ದಿಂದ ಹೆಣ್ಣು ಮಗು ಆಗುತ್ತದೆ.

೨೨. ತ್ರೇತಾಯುಗದಲ್ಲಿ ಶ್ರೀಧರನೆಂಬ ರಾಜನಿದ್ದನು. ಅವನಿಗೆ ಹೇಮ ಪ್ರಭಾವತೀ ಎಂಬ ಹೆಂಡತಿಯಿದ್ದಳು. ಅವರಿಗೆ ಮಕ್ಕಳಿರಲಿಲ್ಲ.

೨೩. ಒಂದು ಕಾಲದಲ್ಲಿ ಸಕಲ ಶಾಸ್ತ್ರಜ್ಞನೂ ಸರ್ವಲೋಕ ಹಿತೈಷಿಯೂ ಆದ ವ್ಯಾಸನು ಬರಲು ಈ ರಾಜನು ನಾನೇಕೆ ಅಪುತ್ರನಾಗಿದ್ದೇನೆಂದು ಅವನನ್ನು ಕೇಳಿದನು.

೨೪. ರಾಜನು ಕನಕನಿರ್ಮಿತವಾದ ಪೀಠವನ್ನು ಕೊಡಲು ಅದರಲ್ಲಿ ಕುಳಿತುಕೊಂಡು ವಿನಯದಿಂದ ಇರುವ ರಾಜನನ್ನು ಕುರಿತು ಹೇಳಿದನು.

೨೫. ರಾಣಿಯೂ ರಾಜನೂ ಅವನ ಪಾದವನ್ನು ತೊಳೆದು ಸಂತೋಷಿಸಿ ಆ ಪಾದೋದಕವನ್ನು ಕುಡಿದು ಸರ್ವ ಪಾಪಗಳನ್ನು ನಾಶಮಾಡಿಕೊಂಡರು.

॥ ವ್ಯಾಸ ಉವಾಚ ॥

ರಾಜರ್ಷೇ ಶೃಣುಷ್ವ ಯತ್ತ್ವಪೃಷ್ಟಮಪುತ್ರೋ ಯೇನ ಕರ್ಮಣಾ ।
ತವೇಯಂ ರಾಜ್ಞೀ ಚಾಪುತ್ರೀ ಚೈಕಪತ್ನೀವ್ರತಸ್ತಥಾ ॥ ೨೬ ॥

ಪೂರ್ವಜನ್ಮನಿ ಚಂದ್ರಸ್ತ್ವಂ ನಾಮ್ನಾ ವರತನುಸ್ಸ್ಮೃತಃ ।
ಭಾರ್ಯಾ ತವಾಪಿ ಶುಭ್ರಾಂಗೀ ನಾಮ್ನಾ ವೈ ಶಂಕರೀ ಸ್ಮೃತಾ ॥ ೨೭ ॥

ಏಕದಾ ಪಥಿ ಯಾತೌ ಚ ನೀಚಪುತ್ರಂ ಜಲೇಽಪಿ ಚ ।
ಮಗ್ನಂ ದೃಷ್ಟ್ವಾ ಹೇಲಯಾ ಚ ಗತೌ ಚ ಪಂಚತಾಂ ಗತಃ ॥ ೨೮ ॥

ಬಹುಪುಣ್ಯಪ್ರಭಾವೇನ ರಾಜ್ಞೀ ರಾಜಾ ಚ ತೌ ಯುವಾಂ ।
ತೇನ ಕರ್ಮವಿಪಾಕೇನ ಯುವಯೋರ್ನ ಭವೇತ್ಸುತಃ ॥ ೨೯ ॥

॥ ರಾಜೋವಾಚ ॥

ಇದಾನೀಂ ಕೇನ ಪುಣ್ಯೇನ ಸುತೋ ವೈ ಜಾಯತೇ ಪ್ರಭೋ ।
ಅಪುತ್ರಸ್ಯ ಮನುಷ್ಯಾಣಾಂ ಜೀವನಂ ಹಿ ನಿರರ್ಥಕಂ ॥ ೩೦ ॥

---

೨೬. ವ್ಯಾಸನು ಹೇಳಿದನು :—ಎಲೈ ! ರಾಜನೇ, ನಾನೇಕೆ ಅಪುತ್ರನಾಗಿರುವೆನೆಂದೂ ಅದರ ಪಾಪವೇನೆಂದೂ ಕೇಳಿದೆ. ನಿನ್ನ ಹೆಂಡತಿಯು ಅಪುತ್ರಿಯು ನೀನೂ ಕೂಡ ಏಕಪತ್ನೀ ವ್ರತದವನು.

೨೭. ಎಲೈ ! ರಾಜನೇ, ಪೂರ್ವ ಜನ್ಮದಲ್ಲಿ ನೀನು ವರತನುವೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೆ. ನಿನ್ನ ಹೆಂಡತಿಯು ಶಂಕರಿ ಎಂಬ ಹೆಸರಿನವಳಾಗಿದ್ದಳು.

೨೮. ಒಂದು ಸಾರಿ ನೀವಿಬ್ಬರೂ ದಾರಿಯಲ್ಲಿ ಹೋಗುತ್ತಿದ್ದಾಗ ಒಬ್ಬ ಕೀಳು ಜಾತಿಯ ಮಗುವು ನೀರಿನಲ್ಲಿ ಬಿದ್ದುದನ್ನು ನೋಡಿದರೂ ನೀವಿಬ್ಬರೂ ಲಕ್ಷಿಸದೆ ಹೊರಟುಹೋದಿರಿ. ಆ ಮಗುವು ಸತ್ತುಹೋಯಿತು.

೨೯. ನೀವಿಬ್ಬರೂ ಬಹು ಪುತ್ರಯೋಗವನ್ನು ಹೊಂದಿದ್ದರೂ ಆ ಕರ್ಮ ಶೇಷದಿಂದ ಮಕ್ಕಳನ್ನು ಹೊಂದಿಲ್ಲ.

೩೦. ರಾಜನು ಕೇಳಿದನು :—ಈವಾಗ ಯಾವ ಪುಣ್ಯವನ್ನು ಮಾಡಿದರೆ ಮಕ್ಕಳಾಗುತ್ತವೆ? ಮಕ್ಕಳಿಲ್ಲದಿದ್ದ ಮನುಷ್ಯರ ಜೀವನವು ಸಾರ್ಥಕವಿಲ್ಲವಾಗಿರುತ್ತದಷ್ಟೆ.

॥ ವ್ಯಾಸ ಉವಾಚ ॥

ಸವಸ್ತ್ರಂ ಚೈವ ಕೂಷ್ಮಾಂಡಂ ವೃಷಭಂ ಸಸುವರ್ಣಕಂ ।
ದೇಹಿ ದಾನಂ ಬ್ರಾಹ್ಮಣಸ್ಯ ಕುರು ಬಾಲವ್ರತಂ ತಥಾ ॥ ೩೧ ॥

ಗೌರೀಂ ಕನ್ಯಾಂ ತಥಾ ದೇಹಿ ಪುರಾಣಶ್ರವಣಂ ಕುರು ।
ಪುತ್ರೋ ವೈ ಜಾಯತೇ ತತ್ರ ಸರ್ವಪಾತಕನಾಶನಂ ॥ ೩೨ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ತತೋ ರಾಜಾ ವ್ಯಾಸೋಕ್ತಂ ದಾನಮುತ್ತಮಂ ।
ಪುರಾಣಶ್ರವಣಂ ಚೈವ ಚಕಾರ ಗತಕಿಲ್ಬಿಷಃ ॥ ೩೩ ॥

ತತಃ ಪುತ್ರೋ ವರ್ಷಮಧ್ಯೇ ಬಭೂವ ಸರ್ವಪೂಜಿತಃ ।
ಅಭೂದ್ರಾಜಾ ಸಾರ್ವಭೌಮಃ ಸುಂದರಃ ಕುಲನಾಯಕಃ ॥ ೩೪ ॥

॥ ಸೂತ ಉವಾಚ ॥

ಯ ಇದಂ ಶೃಣುಯಾದ್ಭಕ್ತ್ಯಾ ಕರೋತಿ ದಾನಮುತ್ತಮಂ ।
ಅಪುತ್ರಾ ಲಭತೇ ಪುತ್ರಂ ಸಂಕ್ಷೇಪಾತ್ಕಥಿಕಂ ಮಯಾ ॥ ೩೫ ॥

---

೩೧. ವ್ಯಾಸನು ಹೇಳಿದನು :—ಬಟ್ಟೆಯಿಂದ ಕೂಡಿದ ಕುಂಬಳಕಾಯನ್ನು ಚಿನ್ನದಿಂದ ಕೂಡಿದ ಹೋರಿಗರುವನ್ನು ಬ್ರಾಹ್ಮಣನಿಗೆ ದಾನಕೊಟ್ಟು ಬಾಲವ್ರತವನ್ನು ಮಾಡು.

೩೨. ಎಂಟು ವರ್ಷದ ಹುಡುಗಿಯನ್ನು ಕನ್ಯಾದಾನಮಾಡು. ಪುರಾಣವನ್ನು ಕೇಳು. ಆಗ ಸರ್ವಪಾತಕಗಳು ಹೋಗಿ ಮಗುವು ಹುಟ್ಟುತ್ತದೆ.

೩೩. ಬ್ರಹ್ಮನು ಹೇಳಿದನು :--ಇದನ್ನು ಕೇಳಿ ರಾಜನು ವ್ಯಾಸನು ಹೇಳಿದಂತೆ ದಾನವನ್ನು ಮಾಡಿ ಪುರಾಣಶ್ರವಣವನ್ನು ಮಾಡಿದನು. ಪಾಪವು ಹೋಯಿತು.

೩೪. ಆ ಮೇಲೆ ವರ್ಷವಾಗುವುದರೊಳಗೆ ಉತ್ತಮನಾದ ಮಗನು ಹುಟ್ಟಿ ರಾಜನೂ ಚಕ್ರವರ್ತಿಯೂ ಆಗಿ ಕುಲನಾಯಕನಾದನು.

೩೫. ಸೂತನು ಹೇಳಿದನು :—ಯಾರು ಇದನ್ನು ಭಕ್ತಿಯಿಂದ ಕೇಳುತ್ತಾರೆಯೋ, ಉತ್ತಮವಾದ ದಾನವನ್ನು ಮಾಡುತ್ತಾರೋ ಅವರು ಮಕ್ಕಳನ್ನು ಹೊಂದುತ್ತಾರೆ. ಸಂಕ್ಷೇಪವಾಗಿ ಹೇಳಿದ್ದೇನೆ.

ಭಕ್ತ್ಯಾ ಶ್ರುತ್ವಾ ತು ಯಾ ನಾರೀ ಕುರ್ಯಾದ್ಬ್ರಾಹ್ಮಣಪೂಜನಂ ।
ಸುಪುತ್ರಾ ಸಾ ಭವೇನ್ನಿತ್ಯಂ ಶಾಸ್ತ್ರೋಕ್ತವಿಧಿನಾ ದ್ವಿಜ ॥ ೩೬ ॥

ಸುವರ್ಣಂ ರಜತಂ ವಸ್ತ್ರಂ ಪುಷ್ಪಮಾಲ್ಯಂ ಚ ಚಂದನಂ ।
ಯೋ ದದ್ಯಾತ್ಪುಸ್ತಕೇ ಭಕ್ತ್ಯಾ ಸರ್ವಪಾಪಪ್ರಣಾಶನಂ ॥ ೩೭ ॥

ಪೂರ್ವಜನ್ಮನಿ ಯೋ ಮೂಢೋ ಬ್ರಹ್ಮಬಾಲಕಘಾತಕಃ ।
ತಸ್ಯ ಕ್ರೂರೋ ಭವೇತ್ಪುತ್ರಃ ಸಪ್ತಜನ್ಮಾಂತರೈರ್ದ್ವಿಜ ॥ ೩೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಬ್ರಹ್ಮನಾರದ
ಸಂವಾದೇ ಕರ್ಮವಿಪಾಕಕಥನಂ ನಾಮ
ಪಂಚಮೋಽಧ್ಯಾಯಃ



---

೩೬. ಭಕ್ತಿಯಿಂದ ಕೇಳಿ ಬ್ರಾಹ್ಮಣನ ಪೂಜೆ ಮಾಡಿದ ಸ್ತ್ರೀಯು ಒಳ್ಳೆಯ ಮಗುವನ್ನು ಹೊಂದುತ್ತಾಳೆ.

೩೭. ಚಿನ್ನ, ಬೆಳ್ಳಿ, ಬಟ್ಟೆ, ಹೂವು, ಗಂಧ ಪುಸ್ತಕ ಇವನ್ನು ದಾನಮಾಡಿದರೆ ಸರ್ವ ಪಾಪವೂ ಹೋಗುತ್ತದೆ.

೩೮. ಪೂರ್ವ ಜನ್ಮದಲ್ಲಿ ಬ್ರಾಹ್ಮಣನನ್ನೂ ಬಾಲಕನನ್ನೂ ಕೊಂದಿದ್ದರೆ ಅವರಿಗೆ ಕ್ರೂರನಾದ ಮಗನು ಹುಟ್ಟುವುದಲ್ಲದೆ ಏಳು ಜನ್ಮಗಳವರೆಗೂ ಅಂತಹ ಮಗನನ್ನೇ ಹೊಂದುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದ ಬ್ರಹ್ಮನಾರದ ಸಂವಾದದಲ್ಲಿ
ಕರ್ಮವಿಪಾಕ ಕಥನವೆಂಬ ಐದನೆಯ ಅಧ್ಯಾಯವುಮುಗಿದುದು.

---

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ಷಷ್ಠೋಽಧ್ಯಾಯಃ



॥ ಶೌನಕ ಉವಾಚ ॥

ಕೇನ ಪುಣ್ಯೇನ ಭೋ ಸೂತ ವೈಕುಂಠಂ ಸಮವಾಪ್ಯತೇ ।
ತದ್ವದಸ್ವ ಶೃಣ್ವತೋ ಮೇ ಪೋತೋ ಹಿ ಭವಸಾಗರೇ ॥ ೧ ॥

॥ ಸೂತ ಉವಾಚ ॥

ಸಾಧು ಸಾಧು ಮುನಿಶ್ರೇಷ್ಠ ಸರ್ವಮಂಗಳಕಾರಕ ।
ಕಥಯಾಮಿ ಸಮಾಸೇನ ಶೃಣ್ವತಾಂ ಪಾಪನಾಶನಂ ॥ ೨ ॥

ವಿಷ್ಣವೇ ಬ್ರಾಹ್ಮಣಾಯೈವ ಮೃದಾ ವೇಶ್ಮ ವಿನಿರ್ಮಿತಂ ।
ಯೋ ವೈ ದದ್ಯಾದ್ದ್ವಿಜಶ್ರೇಷ್ಠ ತಸ್ಯ ಪುಣ್ಯಂ ನಿಶಾಮಯ ॥ ೩ ॥

---

## ಆರನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಎಲೈ ! ಸೂತನೇ, ಯಾವ ಪುಣ್ಯವನ್ನು ಮಾಡಿದರೆ ವೈಕುಂಠವು ಸಿಕ್ಕುತ್ತದೆ ಅದನ್ನು ಹೇಳು. ನೀನು ಸಂಸಾರವೆಂಬ ಸಮುದ್ರವನ್ನು ದಾಟಿಸುವ ನಾವೆಯಲ್ಲವೇ ?

೨. ಸೂತನು ಹೇಳಿದನು :—ಮಂಗಳಪ್ರದನಾದ ಎಲೈ ! ಮುನಿಯೇ, ಸಂಗ್ರಹವಾಗಿ ಹೇಳುತ್ತೇನೆ. ಕೇಳಿದವರ ಪಾಪವೆಲ್ಲವೂ ನಾಶವಾಗುತ್ತದೆ.

೩. ಮನೆಯನ್ನು ಕಟ್ಟಿ ವಿಷ್ಣುಸ್ವರೂಪನಾದ ಬ್ರಾಹ್ಮಣನಿಗೆ ದಾನಮಾಡಿದವರ ಪುಣ್ಯವನ್ನು ಹೇಳುತ್ತೇನೆ. ಕೇಳು.

ವಿಷ್ಣುಲೋಕೇ ಚ ಸ ವಿಪ್ರಃ ಸರ್ವಪಾಪವಿವರ್ಜಿತಃ ।
ಸೌಧವಾಸೀ ಭವೇನ್ನಿತ್ಯಂ ವಿಷ್ಣುಲೋಕೇ ಪ್ರಪೂಜ್ಯತೇ ॥ ೪ ॥

ವಿಷ್ಣವೇ ಸೌಧಗೇಹಂ ಯೋ ದದ್ಯಾದ್ವೈ ಬ್ರಾಹ್ಮಣಾಯ ಚ ।
ಹರೇರ್ನಿಕೇತನಂ ಪ್ರಾಪ್ಯ ಸ್ವರ್ಗವಾಸೀ ಭವೇದ್ಧ್ರುವಂ ॥ ೫ ॥

ಅಂತೇ ವಿಷ್ಣುಪುರಂ ಗತ್ವಾ ಯುಕ್ತಃ ಕೋಟಿಕುಲೈರ್ದ್ವಿಜ ।
ಸ್ವರ್ಣಸೌಧೇ ಗೃಹೇ ಸ್ಥಿತ್ವಾ ಕುರ್ಯಾದ್ಭೋಗಂ ಯಥಾಸುಖಂ ॥ ೬ ॥

ಬ್ರಾಹ್ಮಣಸ್ಥಾಪನೇ ಪುಣ್ಯಂ ಯದ್ದ್ವೈ ಭವತಿ ಭೋ ಮುನೇ ।
ಸಂಖ್ಯಾಂ ಕರ್ತುಮಶಕ್ತಸ್ತದ್ವೇಧಾಃ ಸರ್ವಕಾರಕಃ ॥ ೭ ॥

ಗಣ್ಯಂತೇ ರೇಣವಶ್ಚೈವ ಗಣ್ಯಂತೇ ವೃಷ್ಟಿಬಿಂದವಃ ।
ನ ಗಣ್ಯಂತೇ ವಿಧಾತ್ರಾಪಿ ಬ್ರಹ್ಮಸಂಸ್ಥಾಪನೇ ಫಲಂ ॥ ೮ ॥

ನಾರದೇನ ಪುರಾ ಬ್ರಹ್ಮಾ ಪೃಷ್ಟಸ್ಸಂಸಾರಸಂಭವಃ ।
ವೇಧಾಸ್ತಂ ಕಥಯಾಮಾಸ ತಚ್ಛೃಣುಷ್ವ ಮಹಾಮುನೇ ॥ ೯ ॥

---

೪. ಅವನಿಗೆ ಸರ್ವ ಪಾಪಗಳೂ ಹೋಗಿ ಮಹಡಿ ಮನೆಗಳಲ್ಲೇ ವಾಸ ಮಾಡುತ್ತ ವಿಷ್ಣುಲೋಕಕ್ಕೆ ಹೋಗುತ್ತಾನೆ.

೫. ವಿಷ್ಣುರೂಪಿಯಾದ ಬ್ರಾಹ್ಮಣನಿಗೆ ಮಹಡಿಮನೆಯನ್ನು ದಾನಮಾಡಿದರೆ ಹರಿಯ ಮನೆಯನ್ನು ಹೊಂದಿ ಸ್ವರ್ಗಕ್ಕೆ ಹೋಗುತ್ತಾನೆ.

೬. ಅನೇಕ ವಂಶಗಳನ್ನು ಹೊಂದಿ ಕೊನೆಯಲ್ಲಿ ವೈಕುಂಠಕ್ಕೆ ಹೋಗಿ ಸ್ವರ್ಗದಲ್ಲಿಯೂ ಮಹಡಿ ಮನೆಯಲ್ಲಿಯೇ ಇದ್ದುಕೊಂಡು ಸುಖಪಡುತ್ತಾನೆ.

೭. ಬ್ರಾಹ್ಮಣನಿಗೆ ವೃತ್ತಿಯನ್ನು ಕಲ್ಪಿಸಿ ಸ್ಥಾಪಿಸಿದರೆ, ಬ್ರಹ್ಮನು ಕೂಡ ಎಣಿಸಲಸದಳವಾದ ಪುಣ್ಯವು ಬರುತ್ತದೆ.

೮. ರೇಣುಗಳನ್ನೂ ಮಳೆಯ ಹನಿಗಳನ್ನೂ ಎಣಿಸಬಹುದು. ಬ್ರಾಹ್ಮಣನನ್ನು ವೃತ್ತಿಕಲ್ಪಿಸಿ ನಿಲ್ಲಿಸಿದರೆ, ಬ್ರಹ್ಮನು ಕೂಡ ಆ ಪುಣ್ಯವನ್ನು ಎಣಿಸಲಾರನು.

೯. ಪೂರ್ವದಲ್ಲಿ ನಾರದನು ಬ್ರಹ್ಮನನ್ನು ಕುರಿತು ಸಂಸಾರದಲ್ಲಿ ಹುಟ್ಟುವಿಕೆಯನ್ನು ಕುರಿತು ಕೇಳಲು ಬ್ರಹ್ಮನು ಹೇಳಿದುದನ್ನು ಹೇಳುತ್ತೇನೆ. ಕೇಳು.

ಪುರಾಸೀದ್ದ್ವಾಪರೇ ಬ್ರಹ್ಮನ್ ವಾರನಾರೀ ಸುಶೋಭನಾ ।
ಸುಕೇಶೀ ಹರಿಣೀನೇತ್ರಾ ಸುಮಧ್ಯಾ ಚಾರುಹಾಸಿನೀ ॥ ೧೦ ॥

ನಾಮ್ನಾ ಸಾ ಚಂಚಲಾಪಾಂಗೀ ಯಯೌ ದೇಶಾಂತರಂ ಕದಾ ।
ಸರ್ವಪಾಪಸಮಾಯುಕ್ತಾ ನರಕೇ ಪಾತಯತ್ತಥಾ ॥ ೧೧ ॥

ಸಂಗೇನ ಸಾ ಧನಾಕಾಂಕ್ಷೀ ಜನಾನ್ದೇವಾಲಯಂ ಗತಾ ।
ತತ್ರ ಕ್ಷಣಂ ಸೋಪವಿಷ್ಟಾ ತಾಂಬೂಲಭಕ್ಷಣಂ ಕೃತಂ ॥ ೧೨ ॥

ಶೇಷಂ ಚೂರ್ಣಂ ಸೌಧಭಿತ್ತೌ ದದೌ ನಿಮ್ನೇ ಕುತೂಹಲಾತ್ ।
ತತೋ ಗತಾ ಜಾರಕಾಂಕ್ಷೀ ಧನಾರ್ಥಂ ನಗರಂ ಪ್ರತಿ ॥ ೧೩ ॥

ಜಾರೇಣ ಕೇನಚಿತ್ಸಾರ್ಥಂ ಸಂಕೇತಸ್ಸಹಸಾ ಕೃತಃ ।
ಸಂಕೇತಂ ತು ಗತಾ ವೇಶ್ಯಾ ವನಂ ರಾತ್ರೌ ವಿಮೋಹಿತಾ ॥ ೧೪ ॥

---

೧೦. ಎಲೈ ಬ್ರಹ್ಮನೇ, ಪೂರ್ವದಲ್ಲಿ ಎಂದರೆ ದ್ವಾಪರಯುಗದಲ್ಲಿ ಸುಂದರಿಯಾದ ಓರ್ವ ಸೂಳೆಯಿದ್ದಳು. ಅವಳಿಗೆ ಕಪ್ಪಾದ ಕೇಶರಾಶಿಗಳೂ ಜಿಂಕೆಯಂತೆ ಸುಂದರವಾದ ಕಣ್ಣುಗಳೂ ಸಣ್ಣ ನಡುವೂ ಇದ್ದುವು. ಯಾವಾಗಲೂ ಮಂದಹಾಸದಿಂದ ಇರುತ್ತಿದ್ದಳು.

೧೧. ಅವಳ ಹೆಸರು ಚಂಚಲಾಪಾಂಗಿಯು. ಒಂದು ಸಾರಿ ದೇಶಾಂತರಕ್ಕೆ ಹೋಗಿ ಬಹು ಪಾಪಿಯಾದಳು. ಸತ್ತಮೇಲೆ ಅವಳನ್ನು ನರಕಕ್ಕೆ ತಳ್ಳಿದರು.

೧೨. ಆಕೆಯು ಪುರುಷ ಸಂಗದಿಂದ ದುಡ್ಡನ್ನು ಅಪೇಕ್ಷಿಸುವಳಾಗಿ ಜನಗಳನ್ನು ಆಕರ್ಷಿಸಲು ದೇವಾಲಯಕ್ಕೆ ಹೋದಳು. ಅಲ್ಲಿ ಒಂದು ಕ್ಷಣ ಕುಳಿತಿದ್ದು ತಾಂಬೂಲವನ್ನು ಹಾಕಿಕೊಂಡಳು.

೧೩. ಉಳಿದ ಸುಣ್ಣವನ್ನು ಒಂದು ಗೋಡೆಯಲ್ಲಿದ್ದ ಸಂದು ಮುಚ್ಚುವಂತೆ ಬಳಿದು ಅನಂತರ ಜನಗಳನ್ನು ಹುಡುಕುವ ಅಪೇಕ್ಷೆಯಿಂದ ಹಣ ಸಂಪಾದಿಸಲು ಪಟ್ಟಣಕ್ಕೆ ಹೊರಟಳು.

೧೪. ಅಲ್ಲಿ ಒಬ್ಬ ಜಾರನು ಸಂಕೇತಮಾಡಲು ಆ ಸಂಕೇತದಿಂದ ವನಕ್ಕೆ ಹೋದಳು.

ಸಂಕೇತಂ ನಾಽಽಗತೋ ವೈಶ್ಯೋ ವ್ಯಶಂಕಿಷ್ಟ ವಿಲೋಕಿತಾ ।
ಕಥಂ ಕಾಂತೋಽನಾಗತೋ ಮೇ ಸರ್ಪವ್ಯಾಘ್ರೈಶ್ಚ ಭಕ್ಷಿತಃ ॥ ೧೫ ॥

ಸಂಕೇತನಂ ಕಥಂ ಹಿತ್ವಾ ಗತಃ ಕಿಂ ಕಾಮವಿಹ್ವಲಃ ।
ಅನ್ಯಯಾ ಜ್ಞಾತಯಾ ಸಾರ್ಧಮಭಿಲಾಷೀ ಭವೇತ್ಕಿಮು ॥ ೧೬ ॥

ಪರಾಮೃಶ್ಯೇತಿ ಹೃದ್ಯಂತಃ ಕೋಟಪಾಲಭಯಾದ್ದ್ವಿಜ ।
ನಗರಂ ನಾಗತಾ ಸಾ ಹಿ ರುದ್ಧೇ ಲೋಕಪಥೇ ತಮ್ಯೈಃ ॥ ೧೭ ॥

ಏತಸ್ಮಿನ್ನಂತರೇ ವ್ಯಾಘ್ರಃ ಕಾಮರೂಪೀ ಬಲಾತ್ ಕ್ಷುಧೀ ।
ಪ್ರೇಷಿತಃ ಕಾಲದೇವೇನಾಗ್ರಸದಾಗತ್ಯ ತಾಂ ದ್ವಿಜ ॥ ೧೮ ॥

ತತಸ್ತು ಯಮುನಾಭ್ರಾತುರ್ದೂತಾಸ್ತೇ ಭೀಮವರ್ಷ್ಮಿಣಃ ।
ಆಗತಾ ಗಿರಿಕೂಟಾಂಗಾ ನೇತುಂ ತಾಂ ಪಾಪಕರ್ಮಣಾ ॥ ೧೯ ॥

ವಕ್ರಪಾದಾ ವಕ್ರಮುಖಾ ಉನ್ನಾಸಾ ಬೃಹದ್ದಂಷ್ಟ್ರಿಣಃ ।
ಚರ್ಮರಜ್ಜುಂ ಮುದ್ಗರಾಂಶ್ಚ ಗೃಹೀತ್ವಾ ಪಾಂಶುಲಾಂ ದ್ವಿಜ ॥ ೨೦ ॥

---

೧೫. ಆ ಜಾರನಾದ ವೈಶ್ಯನು ಬಾರದಿರಲು ಸಂದೇಹಪಟ್ಟು ಅವನನ್ನು ಹುಲಿಯಾಗಲಿ, ಹಾವಾಗಲಿ ಕಚ್ಚಿರಬಹುದೇ ಎಂದು ನೋಡಿದಳು.

೧೬. ಆ ಕಾಮಿಯು ಸಂಕೇತಸ್ಥಾನಕ್ಕೆ ಏಕೆ ಬಾರದೆ ಹೋದನು? ಅಥವಾ ಮತ್ತೊಬ್ಬಳು ನೋಡಿ ಆತನನ್ನು ಕಾಮಿಸಿರಬಹುದೇ?

೧೭. ಮನಸ್ಸಿನಲ್ಲಿ ಹೀಗೆ ಯೋಚಿಸುತ್ತ ಗ್ರಾಮಪಾಲಕನ ಭಯದಿಂದ ಕತ್ತಲೆಯಾಗಿರುವ ದಾರಿಯಲ್ಲಿ ಊರಿಗೆ ಬಾರದೆ ಹೋದಳು.

೧೮. ಅಷ್ಟರೊಳಗೆ ಹಸಿದಿದ್ದ ಒಂದು ಹುಲಿಯು ಯಮನಿಂದ ಕಳುಹಿಸಿ ದಂತೆ ಬಂದು ಆಕೆಯನ್ನು ತಿಂದುಬಿಟ್ಟಿತು.

೧೯. ಆಮೇಲೆ ಭಯಂಕರರಾದ ಯಮದೂತರು ಆ ಪಾಪಿನಿಯನ್ನು ಕರೆದು ಕೊಂಡು ಹೋಗಲು ಬಂದರು.

೨೦. ಸೊಟ್ಟಗಾಲು, ಸೊಟ್ಟಮುಖ, ಎತ್ತರವಾದ ಮೂಗು, ದೊಡ್ಡ ಹಲ್ಲು ಗಳುಳ್ಳ ಅವರು ಚರ್ಮದ ಹಗ್ಗವನ್ನೂ ಮುದ್ಗರಗಳನ್ನೂ ಹಿಡಿದು ಆ ಪಾಪಿನಿ ಯನ್ನು ಕೊಂಡೊಯ್ಯಲು ಬಂದರು.

ಬಂಧಯಾಮಾಸುರುನ್ಮತ್ತಾ ಗಣಿಕಾಂ ಚರ್ಮರಜ್ಜುಭಿಃ ।
ಶಂಖಚಕ್ರಗದಾಪದ್ಮಧಾರಿಣೋ ವನಮಾಲಿನಃ ॥ ೨೦ ॥

ಪ್ರೇಷಿತಾ ದೇವದೇವೇನ ತದ್ಭಕ್ತವತ್ಸಲೇನ ಚ ।
ಕೃಷ್ಣಜೀಮೂತಸಂಕಾಶಾಃ ಸ್ಫುರದ್ವದನಪಂಕಜಾಃ ॥ ೨೨ ॥

ಶ್ರೇಣೀಧರಾಶ್ಚಾರುನಾಸಾ ದಿವ್ಯಕುಂಡಲಭೂಷಿತಾಃ ।
ದದೃಶುಃ ಪಥಿ ಗಚ್ಛಂತೋ ವಿಷ್ಣೋರ್ದೂತಾ ಮಹಾತ್ಮನಃ ॥ ೨೩ ॥

॥ ವಿಷ್ಣುದೂತಾ ಊಚುಃ ॥

ಕೇ ಯೂಯಂ ವಿಕೃತಾಕಾರಾ ಲಕ್ಷ್ಯಧ್ವೇ ಕರ್ಬುರಾ ಇವ ।
ಇಮಾಂ ವಿಷ್ಣೋಃ ಪ್ರಿಯತಮಾಂ ನೀತ್ವಾ ಕ್ವ ವ್ರಜಥೋತ್ತಮಾಂ ॥೨೪॥

ಇದಂ ವಚನಮಾಕರ್ಣ್ಯ ತೇಷಾಂ ತೇ ತು ದ್ರುತಂ ಯಯುಃ ।
ಅಥ ತೇ ಕ್ರೋಧಸಂಪನ್ನಾ ವಿಷ್ಣೋರ್ದೂತಾ ಮಹಾಬಲಾಃ ॥ ೨೫ ॥

ಜಘ್ನುಸ್ತೇ ಸಂದೇಶಹರಾನ್ ಯಮಸ್ಯ ಜಗತಃ ಪ್ರಭೋಃ ।
ಚಕ್ರಾದಿಶಸ್ತ್ರಸಂಘೈಶ್ಚ ಸೂರ್ಯಕೋಟಿಸಮಪ್ರಭೈಃ ॥ ೨೬ ॥

---

೨೧. ಆ ಯಮನ ಆಳುಗಳು ಚರ್ಮದ ಹಗ್ಗಗಳಿಂದ ಆಕೆಯನ್ನು ಕಟ್ಟಿದರು. ಆಗ ದೇವದೇವನಾದ ವಿಷ್ಣುವು ಶಂಖಚಕ್ರಗದಾಧಾರಿಗಳಾದ ದೂತರನ್ನು ಕಳುಹಿಸಿದನು.

೨೨ ೨೩. ಕೃಷ್ಣಮೇಘದಂತಿರುವ, ಹಸನ್ಮುಖರಾದ, ಒಳ್ಳೆಯ ಮೋಟನ್ನುಳ್ಳ, ಕರ್ಣಾಭರಣಗಳನ್ನು ಧರಿಸಿರುವ, ಆ ವಿಷ್ಣುದೂತರು ದಾರಿಯಲ್ಲಿ ಹೋಗುತ್ತ ಇವನ್ನು ಕಂಡರು.

೨೪. ವಿಷ್ಣುದೂತರು ಹೇಳಿದರು :—ನೀವು ಯಾರು ? ನಿಮ್ಮನ್ನು ನೋಡಿದರೆ ಒಂದು ಬಣ್ಣದವರಾದ ರಾಕ್ಷಸರಂತೆ ಕಾಣುತ್ತೀರಿ ? ವಿಷ್ಣುವಿಗೆ ಪ್ರೀತಿಪಾತ್ರಳಾದ ಈಕೆಯನ್ನು ಎಲ್ಲಿಗೆ ಕರೆದೊಯ್ಯುತ್ತಿರುವಿರಿ ಎಂದರು ?

೨೫-೨೬. ಈ ಮಾತನ್ನು ಕೇಳಿ ಯಮದೂತರು ಓಡಿದರು. ಈ ವಿಷ್ಣುದೂತರು ಕೋಪಗೊಂಡು ಅವರನ್ನು ಹೊಡೆದರು.

ಕೃತಾಂತಸ್ಯ ಭಟಾಸ್ಸರ್ವೇ ರುದಂತಸ್ತೇ ಪಲಾಯಿತಾಃ ।
ಯಮಂ ಪ್ರೋಚುಸ್ಸುಭೀತಾಶ್ಚ ವೃತ್ತಾಂತಂ ಸಕಲಂ ದ್ವಿಜ ॥ ೨೭ ॥

ಯಮೋಽಪಿ ತತ್ಕಥಾಂ ಶ್ರುತ್ವಾ ಚಿತ್ರಗುಪ್ತಮುವಾಚ ಹ ॥ ೨೮ ॥

॥ ಧರ್ಮರಾಜ ಉವಾಚ ॥

ಕೇನ ಪುಣ್ಯೇನ ಭೋ ಮಂತ್ರಿನ್ ವೇಶ್ಯಾ ವಿಮುಕ್ತಿಮಾಗತಾ ।
ಏತನ್ಮೇ ಪೃಚ್ಛತಸ್ಸರ್ವಂ ಕಥಯಸ್ವ ಯಥಾರ್ಥತಃ ॥ ೨೯ ॥

॥ ಚಿತ್ರಗುಪ್ತ ಉವಾಚ ॥

ತಯಾ ಪಾಪಾನ್ಯರ್ಜಿತಾನಿ ಜನ್ಮತಃ ಸುಬಹೂನ್ಯಪಿ ।
ಕಿಂ ತ್ವಾಕರ್ಣಯ ಲೋಕೇಶ ಯದಸ್ಯಾಃ ಪುಣ್ಯಮಸ್ತಿ ತತ್ ॥ ೩೦ ॥

ಗಣಿಕೈಕದಾ ಧರ್ಮರಾಜ ಸರ್ವಾಲಂಕಾರಭೂಷಿತಾ ।
ಕಾಂಚಿತ್ಪುರೀಂ ಜಗಾಮಾಶು ಜಾರಕಾಂಕ್ಷೀ ಧನಾರ್ಥಿನೀ ॥ ೩೧ ॥

---

೨೭-೨೮. ಯಮಭಟರು ಅಳುತ್ತಾ ಯಮನ ಬಳಿಗೆ ಓಡಿಹೋಗಿ ಯಮನಿಗೆ ಈ ವಿಷಯವೆಲ್ಲವನ್ನೂ ತಿಳಿಸಿದರು. ಯಮನು ಈ ಕಥೆಯೆಲ್ಲವನ್ನೂ ಕೇಳಿ ಚಿತ್ರಗುಪ್ತನನ್ನು ಕುರಿತು ಇಂತೆಂದನು.

೨೯. ಧರ್ಮರಾಜನು ಹೇಳಿದನು :—ಯಾವ ಪುಣ್ಯದಿಂದ ಆ ಸೂಳೆಯು ಮುಕ್ತಿಯನ್ನು ಹೊಂದಿದಳು? ಅದನ್ನು ಸರಿಯಾಗಿ ಹೇಳು.

೩೦. ಚಿತ್ರಗುಪ್ತನು ಹೇಳಿದನು :—ಅವಳು ಜನ್ಮದ ಮೊದಲಿನಿಂದಲೂ ಬಹು ಪಾಪಗಳನ್ನೇ ಮಾಡಿದ್ದಾಳೆ. ಆದರೆ ಆಕೆಯು ಮಾಡಿರುವ ಪುಣ್ಯವನ್ನು ಕೇಳು.

೩೧. ಒಂದು ಸಾರಿ ಈಕೆಯು ಅಲಂಕೃತಳಾಗಿ ಜಾರನನ್ನೂ ಅವನ ಮೂಲಕ ಹಣವನ್ನೂ ಅಪೇಕ್ಷಿಸಿ ಒಂದು ಊರಿಗೆ ಹೋದಳು.

ತತ್ರ ದೇವಾಲಯೇ ತಸ್ಮಿನ್ ಸ್ಥಿತಾ ತಾಂಬೂಲಭಕ್ಷಣಂ ।
ಕೃತ್ವಾ ತಚ್ಛೇಷಚೂರ್ಣಂ ತು ದದೌ ಭಿತ್ತೌ ತು ಕೌತುಕಾತ್ ॥ ೩೨ ॥

ತೇನ ಪುಣ್ಯಪ್ರಭಾವೇನ ಗಣಿಕಾ ಗತಪಾತಕಾ ।
ವೈಕುಂಠಂ ಪ್ರತಿ ಸಾ ಯಾತಿ ನಿರ್ಗತಾ ತವ ದಂಡತಃ ॥ ೩೩ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ತತೋ ದೂತಾ ಯಮೋಽಪಿ ವಚನಂ ದ್ವಿಜ ।
ವ್ಯಾಪಾರೇ ಚಾನ್ಯತಶ್ಚಿತ್ತಂ ದದುಃ ಸಾ ಗಣಿಕಾ ಪಿ ಚ ॥ ೩೪ ॥

ಆರೂಢಾ ಸ್ಯಂದನೇ ದಿವ್ಯೇ ರಾಜಹಂಸಯುತೇ ತಥಾ ।
ವಿಷ್ಣುಲೋಕಂ ಯಯೌ ಸಾ ಚ ವೇಷ್ಟಿತಾ ವಿಷ್ಣುಕಿಂಕರೈಃ ॥ ೩೫ ॥

ಶ್ರೀ ವಿಷ್ಣೋರಾಜ್ಞಯಾ ಸಾಥ ಕುಲಕೋಟಿಯುತಾಪಿ ಚ ।
ತಸ್ಥೌ ಸೌಧಗೃಹೇ ವಿಪ್ರ ನಾನಾಭೋಗಂ ಚಕಾರ ಹ ॥ ೩೬ ॥

ಭಕ್ತ್ಯಾ ಯೋ ವೈ ಹರೇರ್ಗೇಹೇ ದದ್ಯಾಚ್ಚೂರ್ಣಂ ಪ್ರಯತ್ನತಃ ।
ಪುಣ್ಯಂ ಕಿಂ ವಾ ಭವೇತ್ತಸ್ಯ ನ ಜಾನೇ ದ್ವಿಜಪುಂಗವ ॥ ೩೭ ॥

---

೩೨. ಅಲ್ಲಿ ದೇವಸ್ಥಾನದಲ್ಲಿದ್ದು ತಾಂಬೂಲವನ್ನು ಹಾಕಿಕೊಂಡು, ಉಳಿದ ಸುಣ್ಣವನ್ನು ಹುಡುಗಾಟದಿಂದ ಗೋಡೆಯಲ್ಲಿದ್ದ ಒಂದು ತೂತಿಗೆ ಬಳಿದಳು.

೩೩. ಆ ಪುಣ್ಯದಿಂದ ಅವಳ ಪಾಪವೆಲ್ಲವೂ ನಾಶವಾಗಿ ವೈಕುಂಠಕ್ಕೆ ಹೋದಳು. ನಿನ್ನ ದಂಡವು ತಪ್ಪಿತು.

೩೪-೩೫. ಸೂತನು ಹೇಳಿದನು :—ಇದನ್ನು ಕೇಳಿ ಆ ಯಮನು ಬೇರೆ ಕೆಲಸಕ್ಕೆ ಪ್ರಾರಂಭಿಸಿದನು. ಇತ್ತ ಈ ಸೂಳೆಯು ವಿಮಾನದಲ್ಲಿ ಕುಳಿತು ವಿಷ್ಣು ಕಿಂಕರೊಡನೆ ವಿಷ್ಣುಲೋಕಕ್ಕೆ ಹೋದಳು.

೩೬. ಅಲ್ಲಿ ಶ್ರೀ ವಿಷ್ಣುವಿನ ಆಜ್ಞೆಯಿಂದ ಅನೇಕರೊಡನೆ ಮಹಡಿಯ ಮನೆಯಲ್ಲಿದ್ದುಕೊಂಡು ನಾನಾ ಭೋಗಗಳನ್ನು ಅನುಭವಿಸಿದಳು.

೩೭. ಭಕ್ತಿಯಿಂದ ದೇವಸ್ಥಾನಕ್ಕೆ ಸುಣ್ಣಹಚ್ಚಿದರೆ ಅವನಿಗೆ ಎಷ್ಟು ಪುಣ್ಯ ಒದಗುತ್ತದೆಂಬುದನ್ನು ನಾನು ಕಾಣೆ.

**ಭಕ್ತ್ಯಾಽಧ್ಯಾಯಂ ಪಠೇದ್ಯೋಽನ್ಯೈ ಶೃಣೋತಿ ಸಾದರಂ ಸ ಚ ।**
**ಸರ್ವಪಾಪವಿನಿರ್ಮುಕ್ತೋ ಯಾತ್ಯಸೌ ಹರಿಮಂದಿರಂ ॥ ೩೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕ**
**ಸಂವಾದೇ ದೇವಮಂದಿರಚೂರ್ಣಲೇಪದಾನಮಾಹಾತ್ಮ್ಯಂ**
**ನಾಮ ಷಷ್ಠೋಽಧ್ಯಾಯಃ**

---

೩೮. ಭಕ್ತಿಯಿಂದ ಯಾವನು ಈ ಅಧ್ಯಾಯವನ್ನು ಓದುತ್ತಾನೋ ಅವನು ಪಾಪಗಳಿಂದ ಮುಕ್ತನಾಗಿ ಹರಿಯ ಮಂದಿರಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕ
ಸಂವಾದದಲ್ಲಿ ದೇವಮಂದಿರಚೂರ್ಣಲೇಪದಾನಮಾಹಾತ್ಮ್ಯ
ವೆಂಬ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥



# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ಸ ಪ್ತ ಮೋऽ ಧ್ಯಾ ಯಃ



॥ ಶೌನಕ ಉವಾಚ ॥

ಕಥಯಸ್ವ ಮಹಾಪ್ರಾಜ್ಞ ಗೋಲೋಕಂ ಯಾತಿ ಕರ್ಮಣಾ ।
ಸುಮತೇ ದುಸ್ತರಾತ್ಕೇನ ಜನಸ್ಸಂಸಾರಸಾಗರಾತ್ ॥ ೧ ॥

॥ ಸೂತ ಉವಾಚ ॥

ಬ್ರಹ್ಮಾಣಂ ನಾರದೋऽಪೃಚ್ಛತ್ಪುರಾ ಚೈತನ್ಮಹಾಮತೇ ।
ತಚ್ಛೃಣುಷ್ವ ಸಮಾಸೇನ ಪೃಷ್ಟವಾನ್ಸ ಇತಿ ದ್ವಿಜ ॥ ೨ ॥

॥ ನಾರದ ಉವಾಚ ॥

ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿದಾಂ ವರ ।
ರಾಧಾಜನ್ಮಾಷ್ಟಮೀಂ ತಾತ ಕಥಯಸ್ವ ಮಮಾಗ್ರತಃ ॥ ೩ ॥

---

### ಏಳನೆಯ ಅಧ್ಯಾಯವು

೧. ಶೌನಕನು ಕೇಳಿದನು:—ಎಲೈ! ಪುಣ್ಯಾತ್ಮನೇ, ಗೋಲೋಕವನ್ನು ಯಾವ ಪುಣ್ಯದಿಂದ ಹೊಂದುತ್ತಾನೆ? ರಾಧಾಷ್ಟಮಿಯ ಮಹಿಮೆಯೇನು? ದಯ ಇಟ್ಟು ಇದನ್ನು ಹೇಳು.

೨. ಸೂತನು ಹೇಳಿದನು:—ಇದನ್ನು ನಾರದನು ಪೂರ್ವದಲ್ಲಿ ಬ್ರಹ್ಮನನ್ನು ಕೇಳಿದನು. ಆದನ್ನೇ ಸಂಗ್ರಹವಾಗಿ ಹೇಳುತ್ತೇನೆ, ಕೇಳು.

೩. ನಾರದನು ಹೇಳಿದನು:—ಎಲೈ! ಸರ್ವಜ್ಞನಾದ ಪಿತಾಮಹನೇ, ರಾಧಾಜನ್ಮಾಷ್ಟಮಿಯನ್ನು ಹೇಳು.

ತಸ್ಯಾಃ ಪುಣ್ಯಫಲಂ ಕಿಂ ವಾ ಕೃತಂ ಕೇನ ಪುರಾ ವಿಭೋ ।
ಅಕುರ್ವತಾಂ ಜನಾನಾಂ ಹಿ ಕಿಲ್ಬಿಷಂ ಕಿಂ ಭವೇದ್ದ್ವಿಜ ॥ ೪ ॥

ಕೇನೈವ ತು ವಿಧಾನೇನ ಕರ್ತವ್ಯಂ ತದ್ವ್ರತಂ ಕದಾ ।
ಕಸ್ಮಾಜ್ಜಾತಾ ಚ ಸಾ ರಾಧಾ ತನ್ಮೇ ಕಥಯ ಮೂಲತಃ ॥ ೫ ॥

॥ ಬ್ರಹ್ಮೋವಾಚ ॥

ರಾಧಾಜನ್ಮಾಷ್ಟಮೀಂ ವತ್ಸ ಶೃಣುಷ್ವ ಸುಸಮಾಹಿತಃ ।
ಕಥಯಾಮಿ ಸಮಾಸೇನ ಸಮಗ್ರಂ ಹರಿಣಾ ವಿನಾ ।
ಕಥಿತುಂ ತತ್ಫಲಂ ಪುಣ್ಯಂ ನ ಶಕ್ಯೋತ್ಯಪಿ ನಾರದ ॥ ೬ ॥

ಕೋಟಿಜನ್ಮಾರ್ಜಿತಂ ಪಾಪಂ ಬ್ರಹ್ಮಹತ್ಯಾದಿಕಂ ಮಹತ್ ।
ಕುರ್ವಂತಿ ಯೇ ಸಕೃದ್ಭಕ್ತ್ಯಾ ತೇಷಾಂ ನಶ್ಯತಿ ತತ್ಕ್ಷಣಾತ್ ॥ ೭ ॥

ಏಕಾದಶ್ಯಾಸ್ಸಹಸ್ರೇಣ ಯತ್ಫಲಂ ಲಭತೇ ನರಃ ।
ರಾಧಾಜನ್ಮಾಷ್ಟಮೀಪುಣ್ಯಂ ತಸ್ಮಾಚ್ಛತಗುಣಾಧಿಕಂ ॥ ೮ ॥

---

೪. ಆದರಿಂದ ಯಾವ ಪುಣ್ಯ ಲಭಿಸುತ್ತದೆ ? ಯಾರು ಮಾಡಿದ್ದಾರೆ ? ಮಾಡದಿದ್ದರೆ ದೋಷವೇನು ?

೫. ಆ ವ್ರತವನ್ನು ಮಾಡತಕ್ಕ ಬಗೆ ಹೇಗೆ ? ಆ ರಾಧೆಯು ಹೇಗೆ ಹುಟ್ಟಿದಳು ? ಇದನ್ನೆಲ್ಲಾ ಹೇಳು ಎನ್ನಲು,

೬. ಬ್ರಹ್ಮನು ಹೇಳಿದನು :—ರಾಧಾಜನ್ಮಾಷ್ಟಮಿಯನ್ನು ಸಂಗ್ರಹವಾಗಿ ಹೇಳುತ್ತೇನೆ. ಕೇಳು. ಅದರ ಫಲವನ್ನು ಹರಿಯು ಹೊರತಾಗಿ ಬೇರೆ ಯಾವನಿಂದಲೂ ಹೇಳಲಸಾಧ್ಯವು.

೭. ಅದನ್ನು ಒಂದು ಸಾರಿ ಭಕ್ತಿಯಿಂದ ಮಾಡಿದರೂ ಕೋಟಿ ಜನ್ಮಗಳ ಪಾಪವು ಹೋಗುತ್ತದೆ.

೮. ಸಾವಿರ ಏಕಾದಶೀ ವ್ರತಗಳಿಂದ ಯಾವ ಪುಣ್ಯವು ಬರುತ್ತದೆಯೋ ಅದರ ನೂರರಷ್ಟು ಪುಣ್ಯವು ರಾಧಾಷ್ಟಮೀ ಮಾಡುವುದರಿಂದ ಲಭಿಸುತ್ತದೆ.

**ಮೇರುತುಲ್ಯಸುವರ್ಣಾನಿ ದತ್ವಾ ಯತ್ಫಲಮಾಪ್ಯತೇ ।**
**ಸಕೃದ್ರಾಧಾಷ್ಟಮೀಂ ಕೃತ್ವಾ ತಸ್ಮಾಚ್ಛತಗುಣಾಧಿಕಂ ॥ ೯ ॥**

**ಕನ್ಯಾದಾನಸಹಸ್ರೇಣ ಯತ್ಪುಣ್ಯಂ ಪ್ರಾಪ್ಯತೇ ಜನೈಃ ।**
**ವೃಷಭಾನುಸುತಾಷ್ಟಮ್ಯಾ ತತ್ಫಲಂ ಪ್ರಾಪ್ಯತೇ ಜನೈಃ ॥ ೧೦ ॥**

**ಗಂಗಾದಿಷು ಚ ತೀರ್ಥೇಷು ಸ್ನಾತ್ವಾ ತು ಯತ್ಫಲಂ ಲಭೇತ್ ।**
**ಕೃಷ್ಣಪ್ರಾಣಪ್ರಿಯಾಷ್ಟಮ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥ ೧೧ ॥**

**ಏತದ್ವ್ರತಂ ತು ಯಃ ಪಾಪೀ ಹೇಲಯಾ ಶ್ರದ್ಧಯಾಽಪಿ ವಾ ।**
**ಕರೋತಿ ವಿಷ್ಣುಸದನಂ ಗಚ್ಛೇತ್ಕೋಟಿಕುಲಾನ್ವಿತಃ ॥ ೧೨ ॥**

**ಪುರಾ ಕೃತಯುಗೇ ವತ್ಸ ವಾರನಾರೀ ಸುಶೋಭನಾ ।**
**ಸುಮಧ್ಯಾ ಹರಿಣೀನೇತ್ರಾ ಶುಭಾಂಗೀ ಚಾರುಹಾಸಿನೀ ॥ ೧೩ ॥**

**ಸುಕೇಶೀ ಚಾರುಕರ್ಣೀ ಚ ನಾಮ್ನಾ ಲೀಲಾವತೀ ಸ್ಮೃತಾ ।**
**ತಯಾ ಬಹೂನಿ ಪಾಪಾನಿ ಕೃತಾನಿ ಸುದೃಢಾನಿ ಚ ॥ ೧೪ ॥**

---

೯. ಮೇರುವಿನಷ್ಟು ಚಿನ್ನವನ್ನು ದಾನಮಾಡಿದರೆ ಬರುವ ಪುಣ್ಯವು ರಾಧಾಕೃಷ್ಣಾಷ್ಟಮಿಯನ್ನು ಆಚರಿಸುವುದರಿಂದ ಬರುತ್ತದೆ.

೧೦. ಕನ್ಯಾದಾನಗಳನ್ನು ಸಾವಿರಮಾಡಿದರೆ ಬರುವ ಪುಣ್ಯವು ರಾಧಾಕೃಷ್ಣಾಷ್ಟಮಿಯಿಂದ ಬರುತ್ತದೆ.

೧೧. ಗಂಗಾದಿತೀರ್ಥಗಳಲ್ಲಿ ಸ್ನಾನಮಾಡಿದರೆ ಬರುವ ಫಲವು ರಾಧಾಕೃಷ್ಣಾಷ್ಟಮಿಯ ಆಚರಣೆಯಿಂದ ಬರುತ್ತದೆ.

೧೨. ಈ ರಾಧಾಕೃಷ್ಣಾಷ್ಟಮಿಯನ್ನು ಯಾವನು ಶ್ರದ್ಧೆಯಿಂದಲಾಗಲಿ ಉದಾಸೀನದಿಂದಲಾಗಲಿ ಮಾಡುತ್ತಾನೆಯೋ ಅವನು ತನ್ನ ಕೋಟಿ ಕುಲದೊಡನೆ ವಿಷ್ಣುವಿನ ಸ್ಥಳವನ್ನು ಹೊಂದುತ್ತಾನೆ.

೧೩. ಪೂರ್ವದಲ್ಲಿ ಕೃತಯುಗದಲ್ಲಿ ಲಕ್ಷಣವತಿಯೂ ಸುಂದರಿಯೂ ಆದ ಲೀಲಾವತಿಯೆಂಬ ಸೂಳೆಯೊಬ್ಬಳಿದ್ದಳು.

೧೪—೧೫. ಅವಳು ಅನೇಕವಾಗಿ ದೊಡ್ಡದಾದ ಪಾಪಗಳನ್ನೇ ಮಾಡಿದ್ದಳು.

ಏಕದಾ ಸಾ ಧನಾಕಾಂಕ್ಷೀ ನಿಸ್ಸೃತ್ಯ ಪುರತಃ ಸ್ಥಿತಾ ।
ಗತಾನ್ಯನಗರಂ ತತ್ರ ದದರ್ಶ ಚ ಜನಾನ್ಬಹೂನ್ ॥ ೧೫ ॥

ರಾಧಾಷ್ಟಮೀವ್ರತಪರಾನ್ ಸುಂದರೇ ದೇವತಾಲಯೇ ।
ಗಂಧಪುಷ್ಪೈರ್ಧೂಪದೀಪೈರ್ವಸ್ತ್ರೈರ್ನಾನಾವಿಧೈಃ ಫಲೈಃ ॥ ೧೬ ॥

ಭಕ್ತಿಭಾವೈಃ ಪೂಜಯತೋ ರಾಧಾಯಾ ಮೂರ್ತಿಮುತ್ತಮಾಂ ।
ಕೇಚಿದ್ಗಾಯಂತಿ ನೃತ್ಯಂತಿ ಪಠಂತಿ ಸ್ತವಮುತ್ತಮಂ ।
ತಾಲವೇಣುಮೃದಂಗಾಂಶ್ಚ ವಾದಯಂತಿ ಚ ಕೇ ಮುದಾ ॥ ೧೭ ॥

ತಾಂಸ್ತಾಂಸ್ತಥಾವಿಧಾನ್ದೃಷ್ಟ್ವಾ ಕೌತೂಹಲಸಮನ್ವಿತಾ ।
ಜಗಾಮ ತತ್ಸಮೀಪಂ ಸಾ ಪಪ್ರಚ್ಛ ವಿನಯಾನ್ವಿತಾ ॥ ೧೮ ॥

ಭೋ ಭೋಃ ಪುಣ್ಯಾತ್ಮನೋ ಯೂಯಂ ಕಿಂ ಕುರ್ವಂತೋ ಮುದಾನ್ವಿತಾಃ।
ಕಥಯಧ್ವಂ ಪುಣ್ಯವಂತೋ ಮಾಂ ಚೈವ ವಿನಯಾನ್ವಿತಾಂ ॥ ೧೯ ॥

ತಸ್ಯಾಸ್ತು ವಚನಂ ಶ್ರುತ್ವಾ ಪರಕಾರ್ಯಹಿತೇ ರತಾಃ ।
ಆರೇಭಿತೇ ತತ್ಪ್ರವಕ್ತುಂ ವೈಷ್ಣವಾ ವ್ರತತತ್ಪರಾಃ ॥ ೨೦ ॥

---

ಒಂದು ಸಾರಿ ಹಣಸಂಪಾದನೆಗೋಸ್ಕರ ಊರಿನಿಂದ ಹೊರಟು ಬೇರೆ ಊರಿಗೆ ಹೋಗಿ ಬಹಳ ಜನಗಳಿರುವ ಗುಂಪನ್ನು ನೋಡಿದಳು.

೧೬. ಒಂದು ಸುಂದರವಾದ ದೇವಸ್ಥಾನದಲ್ಲಿ ರಾಧಾಷ್ಟಮೀ ವ್ರತದಲ್ಲಿ ಆಸಕ್ತರಾಗಿ ಗಂಧ, ಹೂ, ಧೂಪ, ದೀಪ, ವಸ್ತ್ರ, ಫಲಗಳಿಂದ ಭಕ್ತಿಯಿಂದ ರಾಧೆಯ ಪ್ರತಿಮೆಯನ್ನು ಪೂಜಿಸುತ್ತಿರುವುದನ್ನು ಕಂಡಳು.

೧೭—೧೮. ಕೆಲವರು ಗಾನಮಾಡುತ್ತಾರೆ. ಕೆಲವರು ಕುಣಿಯುತ್ತಾರೆ. ಕೆಲವರು ಸ್ತೋತ್ರಮಾಡುತ್ತಾರೆ. ಕೆಲವರು ವಾದ್ಯಗಳನ್ನು ಬಾರಿಸುತ್ತಾರೆ. ಅವರೆಲ್ಲರನ್ನೂ ನೋಡಿ ಆಶ್ಚರ್ಯಗೊಂಡು ಅವರ ಹತ್ತಿರಕ್ಕೆ ಹೋಗಿ,

೧೯. ನೀವು ಪುಣ್ಯಾತ್ಮರು. ಸಂತೋಷದಿಂದ ಮಾಡುತ್ತಿರುವ ಈ ಕೆಲಸವೇನು? ವಿನಯದಿಂದ ಕೇಳುತ್ತಿರುವ ನನಗೆ ದಯವಿಟ್ಟು ಹೇಳಿ ಎಂದಳು.

೨೦. ಪರೋಪಕಾರಿಗಳಾದ ಅವರು ಅವಳ ಮಾತನ್ನು ಕೇಳಿ ವೈಷ್ಣವವ್ರತವನ್ನು ಹೇಳತೊಡಗಿದರು.

॥ ರಾಧಾವ್ರತಿನ ಊಚುಃ ॥

ಭಾದ್ರೇ ಮಾಸಿ ಸಿತಾಷ್ಟಮ್ಯಾಂ ಜಾತಾ ಶ್ರೀ ರಾಧಿಕಾ ಯತಃ ।
ಅಷ್ಟಮೀ ಸಾದ್ಯ ಸಂಪ್ರಾಪ್ತಾ ತಾಂ ಕುರ್ವಾಮ ಪ್ರಯತ್ನತಃ ॥ ೨೦ ॥

ಗೋಘಾತಜನಿತಂ ಪಾಪಂ ಸ್ತೇಯಜಂ ಬ್ರಹ್ಮಘಾತಜಂ ।
ಪರಸ್ತ್ರೀಹರಣಾಚ್ಚೈವ ತಥಾ ಚ ಗುರುತಲ್ಪಜಂ ॥ ೨೨ ॥

ವಿಶ್ವಾಸಘಾತಜಂ ಚೈವ ಸ್ತ್ರೀಹತ್ಯಾಜನಿತಂ ತಥಾ ।
ಏತಾನಿ ನಾಶಯತ್ಯಾಶು ಕೃತಾ ಯಾ ಚಾಷ್ಟಮೀ ನೃಣಾಂ ॥ ೨೩ ॥

ತೇಷಾಂ ಚ ವಚನಂ ಶ್ರುತ್ವಾ ಸರ್ವಪಾತಕನಾಶನಂ ।
ಕರಿಷ್ಯಾಮ್ಯಹಮಿತ್ಯೇವಂ ಪರಾಮೃಶ್ಯ ಪುನಃಪುನಃ ॥ ೨೪ ॥

ತತ್ರೈವ ವ್ರತಿಭಿಸ್ಸಾರ್ಧಂ ಕೃತ್ವಾ ವ್ರತಮನುತ್ತಮಂ ।
ದೈವಾತ್ಸಾ ಪಂಚತಾಂ ಯಾತಾ ಸರ್ಪಘಾತೇನ ನಿರ್ಮಲಾ ॥ ೨೫ ॥

ತತೋ ಯಮಾಜ್ಞಯಾ ದೂತಾಃ ಪಾಶಮುದ್ಗರಪಾಣಯಃ ।
ಆಗತಾಸ್ತಾಂ ಸಮಾನೇತುಂ ಬಬಂಧುರತಿಕೃಚ್ಛ್ರತಃ ॥ ೨೬ ॥

---

೨೧. ರಾಧಾವ್ರತವನ್ನು ಮಾಡತಕ್ಕವರು ಹೇಳಿದರು:—ಭಾದ್ರಪದ ಶುದ್ಧ ಅಷ್ಟಮಿಯ ದಿನ ರಾಧೆಯು ಹುಟ್ಟಿದಳು. ಈ ಹೊತ್ತು ಆ ದಿನವು ಪ್ರಾಪ್ತವಾಗಿದೆ. ಅದನ್ನು ಪ್ರಯತ್ನದಿಂದ ಮಾಡುತ್ತಿದ್ದೇವೆ.

೨೨—೨೩. ಗೋಹತ್ಯೆ, ಕಳ್ಳತನ, ಬ್ರಹ್ಮಹತ್ಯೆ, ಪರಸ್ತ್ರೀ ಕಳುವು, ಗುರು ಭಾರ್ಯಾಗಮನ, ವಿಶ್ವಾಸಘಾತಕತನ, ಸ್ತ್ರೀಹತ್ಯೆ, ಇವುಗಳಿಂದುಂಟಾದ ಪಾಪಗಳು ಈ ಅಷ್ಟಮೀ ಆಚರಣೆಯಿಂದ ನಾಶವಾಗುತ್ತವೆ ಎಂದರು.

೨೪—೨೫. ಅವರ ಆ ಮಾತನ್ನು ಕೇಳಿ ಪಾಪಹರವಾದ ಆ ವ್ರತವನ್ನು ಮಾಡುತ್ತೇನೆಂದು ಯೋಚಿಸಿ ಅಲ್ಲಿಯೇ ಅವರೊಡನೆ ವ್ರತವನ್ನು ಮಾಡಿದಳು. ಕೆಲವು ಕಾಲದಮೇಲೆ ನಿಷ್ಪಾಪಳಾದ ಆಕೆಯನ್ನು ಸರ್ಪವು ಕಚ್ಚಲು ಸತ್ತಳು.

೨೬. ಆ ಮೇಲೆ ಯಮನ ಅಪ್ಪಣೆಯಿಂದ ಪಾಶಮುದ್ಗರಗಳನ್ನು ಹಿಡಿದು ಯಮಭಟರು ಅವಳನ್ನು ಕರೆದೊಯ್ಯಲು ಒಂದು ಹಗ್ಗದಿಂದ ಕಟ್ಟಿದರು.

ಯದಾ ನೇತುಂ ಮನಶ್ಚಕ್ರುರ್ಯಮಸ್ಯ ಸದನಂ ಪ್ರತಿ ।
ತದಾಗತಾ ವಿಷ್ಣುದೂತಾ ಶಂಖಚಕ್ರಗದಾಧರಾಃ ॥ ೨೭ ॥

ಹಿರಣ್ಮಯಂ ವಿಮಾನಂ ಚ ರಾಜಹಂಸಯುತಂ ಶುಭಂ ।
ಛೇದನಂ ಚಕ್ರಧಾರಾಭಿಃ ಪಾಶಂ ಕೃತ್ವಾ ತ್ವರಾನ್ವಿತಾಃ ॥ ೨೮ ॥

ರಥೇ ಚಾರೋಪಯಾಮಾಸ್ತುಸ್ತಾಂ ನಾರೀಂ ಗತಕಿಲ್ಬಿಷಾಂ ।
ನಿನ್ಯುರ್ವಿಷ್ಣುಪುರಂ ತೇ ಚ ಗೋಲೋಕಾಖ್ಯಂ ಮನೋಹರಂ ॥ ೨೯ ॥

ಕೃಷ್ಣೇನ ರಾಧಯಾ ತತ್ರ ಸ್ಥಿತಾ ವ್ರತಪ್ರಸಾದತಃ ।
ರಾಧಾಷ್ಟಮೀವ್ರತಂ ತಾತ ಯೋ ನ ಕುರ್ಯಾಚ್ಚ ಮೂಢಧೀಃ ॥ ೩೦ ॥

ನರಕಾನ್ನಿಷ್ಕೃತಿರ್ನಾಸ್ತಿ ಕೋಟಿಕಲ್ಪಶತೈರಪಿ ।
ಸ್ತ್ರಿಯಶ್ಚ ಯಾ ನ ಕುರ್ವಂತಿ ವ್ರತಮೇತಚ್ಛುಭಪ್ರದಂ ॥ ೩೧ ॥

ರಾಧಾವಿಷ್ಣೋಃ ಪ್ರೀತಿಕರಂ ಸರ್ವಪಾಪಪ್ರಣಾಶನಂ ।
ಅಂತೇ ಯಮಪುರಂ ಗತ್ವಾ ಪತಂತಿ ನರಕೇ ಚಿರಂ ।
ಕದಾಚಿಜ್ಜನ್ಮ ಚಾಸಾದ್ಯ ಪೃಥಿವ್ಯಾಂ ವಿಧವಾ ಧ್ರುವಂ ॥ ೩೨ ॥

---

೨೭—೨೯. ಅವರು ಯಮನ ಮನೆಗೆ ಕರೆದೊಯ್ಯಲು ಮನಸ್ಸುಮಾಡು ವಷ್ಟರಲ್ಲಿಯೇ ಶಂಖಚಕ್ರಗದಾಧಾರಿಗಳಾದ ವಿಷ್ಣುದೂತರು ಚಿನ್ನದ ವಿಮಾನ ವನ್ನು ಹಂಸಯುತವಾಗಿರುವಂತೆ ತಂದು ಇವಳನ್ನು ಕಟ್ಟಿದ್ದ ಆ ಪಾಶವನ್ನು ಚಕ್ರದ ತುದಿಯಿಂದ ಕತ್ತರಿಸಿ ನಿಷ್ಪಾಪಳಾದ ಆಕೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಗೋಲೋಕವೆಂಬ ವಿಷ್ಣುಪುರಕ್ಕೆ ಕರೆದುಕೊಂಡು ಹೋದರು.

೩೦. ಅಲ್ಲಿ ವಿಷ್ಣುವಿನ ಪ್ರಸಾದದಿಂದ ರಾಧಾಕೃಷ್ಣರೊಡನೆ ಸುಖವಾಗಿ ಇದ್ದಳು. ರಾಧಾಕೃಷ್ಣಾಷ್ಟಮಿಯನ್ನು ಮಾಡದಿದ್ದರೆ ಅವಳಿಗೆ ಕೋಟಿಕಲ್ಪಗಳವರೆಗೂ ನರಕದಿಂದ ಉದ್ಧಾರವೇ ಇರುತ್ತಿರಲಿಲ್ಲ.

೩೧—೩೨. ಈ ಶುಭವಾದ ವ್ರತವನ್ನು ಯಾವಳು ಮಾಡುವುದಿಲ್ಲವೋ ಆಕೆಯು ಕೊನೆಯಲ್ಲಿ ಯಮನಪಟ್ಟಣದಲ್ಲಿ ನರಕದಲ್ಲಿ ಬೀಳುತ್ತಾಳೆ. ಬಹುಕಾಲದ ಮೇಲೆ ಜನ್ಮತಾಳಿ ವಿಧವೆಯಾಗುತ್ತಾಳೆ.

**ಏಕದಾ ಪೃಥಿವೀ ವತ್ಸ ದುಷ್ಟಸಂಘೈಶ್ಚ ತಾಡಿತಾ ।**
**ಗೌರ್ಭೂತ್ವಾ ಚ ಭೃಶಂ ದೀನಾಽತ್ರಾಽಽಯಯೌ ಸಾ ಮಮಾಂತಿಕಂ ॥೩೩॥**

**ನಿವೇದಯಾಮಾಸ ದುಃಖಂ ರುದಂತೀ ಚ ಪುನಃ ಪುನಃ ।**
**ತದ್ವಾಕ್ಯಂ ಚ ಸಮಾಕರ್ಣ್ಯ ಗತೋಽಹಂ ವಿಷ್ಣುಸಂನಿಧಿಂ ॥ ೩೪ ॥**

**ಕೃಷ್ಣೇ ನಿವೇದಿತಂ ಚಾಶು ಪೃಥಿವ್ಯಾ ದುಃಖಸಂಚಯಃ ।**
**ತೇನೋಕ್ತಂ ಗಚ್ಛ ಭೋ ಬ್ರಹ್ಮನ್ ದೇವೈಸ್ಸಾರ್ಧಂ ಚ ಭೂತಳಂ ॥ ೩೫ ॥**

**ಅಹಂ ತತ್ರಾಪಿ ಗಚ್ಛಾಮಿ ಪಶ್ಚಾನ್ಮಮ ಗಣೈಸ್ಸಹ ।**
**ತಚ್ಛ್ರುತ್ವಾ ಸಹಿತೋ ದೈವೈರಾಗತಃ ಪೃಥಿವೀತಳಂ ॥ ೩೬ ॥**

**ತತಃ ಕೃಷ್ಣಸ್ಸಮಾಹೂಯ ರಾಧಾಂ ಪ್ರಾಣಗರೀಯಸೀಂ ।**
**ಉವಾಚ ವಚನಂ ದೇವಿ ಗಚ್ಛೇಽಹಂ ಪೃಥಿವೀತಳಂ ॥ ೩೭ ॥**

---

೩೩. ಒಂದು ಸಾರಿ ಭೂಮಿಯು ದುಷ್ಟರಿಂದ ಹಿಂಸಿತಳಾಗಿ ಗೋವಿನ ಆಕಾರವನ್ನು ಹೊಂದಿ ನನ್ನ ಬಳಿಗೆ ಅಳುತ್ತಾ ಬಂದು,

೩೪. ತನ್ನ ಕಷ್ಟವನ್ನು ಹೇಳಿಕೊಂಡಳು. ಆ ಮಾತನ್ನು ಕೇಳಿ ನಾನು ವಿಷ್ಣುವಿನ ಬಳಿಗೆ ಹೋದೆನು.

೩೫—೩೬. ಕೃಷ್ಣನಲ್ಲಿ ಪೃಥಿವಿಯ ದುಃಖವನ್ನೆಲ್ಲಾ ಅರಿಕೆಮಾಡಿದೆನು. ಅವನು ನನ್ನನ್ನು ಕುರಿತು ಎಲೈ ! ಬ್ರಹ್ಮನೇ, ನೀನು ದೇವತೆಗಳೊಡನೆ ಭೂಮಿಗೆ ಹೋಗು. ಅಲ್ಲಿಗೆ ನಾನೂ ನನ್ನ ಗಣಗಳೊಡನೆ ಬರುತ್ತೇನೆ ಎಂದನು. ಅದರಂತೆ ನಾನು ದೇವತೆಗಳೊಡನೆ ಭೂಮಿಗೆ ಬಂದೆನು.

೩೭. ಆ ವೇಳೆ ಕೃಷ್ಣನು ಪ್ರಾಣಪ್ರಿಯೆಯಾದ ರಾಧೆಯನ್ನು ಕುರಿತು ನಾನು ಭೂಮಿಗೆ ಹೋಗುತ್ತೇನೆ. ಅಲ್ಲಿ ಭೂಭಾರವನ್ನು ನಾಶಮಾಡಬೇಕು. ನೀನೂ ಭೂತಲಕ್ಕೆ ಹೋಗೆಂದನು.

ಪೃಥಿವೀಭಾರನಾಶಾಯ ಗಚ್ಛ ತ್ವಂ ಮರ್ತ್ಯಮಂಡಲಂ ।
ಇತಿ ಶ್ರುತ್ವಾಪಿ ಸಾ ರಾಧಾಪ್ಯಾಗತಾ ಪೃಥಿವೀಂ ಪ್ರತಿ ॥ ೩೮ ॥

ಭಾದ್ರೇ ಮಾಸಿ ಸಿತೇ ಪಕ್ಷೇ ಅಷ್ಟಮೀಸಂಜ್ಞಿಕೇ ತಿಥೌ ।
ವೃಷಭಾನೋರ್ಯಜ್ಞಭೂಮೌ ಜಾತಾ ಸಾ ರಾಧಿಕಾ ದಿವಾ ॥ ೩೯ ॥

ಯಜ್ಞಾರ್ಥಂ ಶೋಧನಂ ಚಕ್ರುರ್ಯದಾ ಸಾ ದಿವ್ಯರೂಪಿಣೀ ।
ರಾಜಾನಂದಮನಾ ಭೂತ್ವಾ ತಾಂ ಪ್ರಾಪ್ಯ ನಿಜಮಂದಿರಂ ॥ ೪೦ ॥

ಇತಿ ತೇ ಕಥಿತಂ ವತ್ಸ ತ್ವಯಾ ಪೃಷ್ಟಂ ಚ ಯದ್ವಚಃ ।
ಗೋಪನೀಯಂ ಗೋಪನೀಯಂ ಗೋಪನೀಯಂ ಪ್ರಯತ್ನತಃ ॥ ೪೧ ॥

ದತ್ತವಾನ್ಮಹಿಷೀಂ ನೀತ್ವಾ ಸಾ ಚ ತಾಂ ಪರ್ಯಪಾಲಯತ್ ।

॥ ಸೂತ ಉವಾಚ ॥

ಯ ಇದಂ ಶೃಣುಯಾದ್ಭಕ್ತ್ಯಾ ಚತುರ್ವರ್ಗಫಲಪ್ರದಂ ।
ಸರ್ವಪಾಪವಿನಿರ್ಮುಕ್ತಶ್ಚಾಂತೇ ಯಾತಿ ಹರೇರ್ಗೃಹಂ ॥ ೪೨ ॥

ಇತಿ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಬ್ರಹ್ಮನಾರದಸಂವಾದೇ
ಶ್ರೀ ರಾಧಾಷ್ಟಮೀಮಾಹಾತ್ಮ್ಯಂ ನಾಮ ಸಪ್ತಮೋಽಧ್ಯಾಯಃ

---

೩೮—೩೯. ಇದನ್ನು ಕೇಳಿ ರಾಧೆಯು ಭೂಮಿಗೆ ಬಂದು ಭಾದ್ರಪದ ಶುದ್ಧ ಅಷ್ಟಮೀದಿನ ವೃಷಭಾನುವಿನ ಯಜ್ಞಭೂಮಿಯಲ್ಲಿ ಹಗಲಿನಲ್ಲಿ ಹುಟ್ಟಿದಳು.

೪೦—೪೧. ಯಜ್ಞಕ್ಕೋಸ್ಕರ ಭೂಶೋಧನೆಮಾಡಿದಾಗ ಆಕೆಯು ಸಿಕ್ಕಲು ರಾಜನು ಸಂತೋಷದಿಂದ ಮನೆಗೊಯ್ದು ಹೆಂಡತಿಗೆ ಕೊಡಲು ಆಕೆಯು ಅವಳನ್ನು ಕಾಪಾಡಿದಳು. ಈರೀತಿಯಾಗಿ ಈ ಆಖ್ಯಾನವನ್ನು ನಿನಗೆ ಹೇಳಿರುವೆನು. ಇದನ್ನು ಸರ್ವಪ್ರಕಾರದಿಂದಲೂ ಅಪಾತ್ರರಾದವರಿಗೆ ಹೇಳದೆ ಕಾಪಾಡಬೇಕು.

೪೨. ಸೂತನು ಹೇಳಿದನು:— ಈ ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುವ ಈ ರಾಧಾಚರಿತೆಯನ್ನು ಯಾವನು ಕೇಳುತ್ತಾನೋ ಅವನು ತನ್ನ ಪಾಪವನ್ನೆಲ್ಲಾ ಕಳೆದುಕೊಂಡು ಸತ್ತನಂತರ ವೈಕುಂಠವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಬ್ರಹ್ಮಖಂಡದಲ್ಲಿ ಬ್ರಹ್ಮನಾರದಸಂವಾದದಲ್ಲಿ
ಶ್ರೀರಾಧಾಷ್ಟಮೀಮಾಹಾತ್ಮ್ಯವೆಂಬ ಏಳನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ಅಷ್ಟಮೋಽಧ್ಯಾಯಃ



॥ ಶೌನಕ ಉವಾಚ ॥

ಸಮುದ್ರಮಥನಂ ಸೂತ ಪುರಾ ಕಸ್ಮಾತ್ಕೃತಂ ಗುರೋ ।
ಹೃದಯೇ ಕೌತುಕಂ ಜಾತಂ ಶ್ರೋತುಂ ಮೇ ವದ ಚಾಮರೈಃ ॥ ೧ ॥

॥ ಸೂತ ಉವಾಚ ॥

ಬ್ರಹ್ಮನ್ವಚ್ಮಿ ಸಮಾಸೇನ ಸಿಂಧೋರ್ಮಥನಕಾರಣಂ ।
ದೂರ್ವಾಸಸೇಂದ್ರಸಂವಾದಮಿತಿಹಾಸಂ ಶೃಣುಷ್ವ ತತ್ ॥ ೨ ॥

ಮಹಾತಪಾ ಮಹಾತೇಜಾ ದೂರ್ವಾಸಾ ಈಶ್ವರಾಂಶಜಃ ।
ಬ್ರಹ್ಮರ್ಷಿಃ ಪ್ರಯಯೌ ಸ್ವರ್ಗಮಿಂದ್ರಂ ದ್ರಷ್ಟುಂ ಸ ಚೈಕದಾ ॥ ೩ ॥

---

೧. ಶೌನಕನು ಕೇಳಿದನು :—ಎಲೈ ! ಸೂತನೇ, ಪೂರ್ವದಲ್ಲಿ ದೇವತೆಗಳು ಸಮುದ್ರವನ್ನೇಕೆ ಕಡೆದರು ? ಎಂಬುದನ್ನು ಕೇಳಬೇಕೆಂಬ ಆಸೆಯುಂಟಾಗಿದೆ. ಅದನ್ನು ಹೇಳು ಎನ್ನಲು

೨. ಸೂತನು ಹೇಳಿದನು. ಎಲೈ ! ಶೌನಕನೇ, ಸಮುದ್ರಮಥನಕಾರಣಗಳನ್ನು ಹೇಳುತ್ತೇನೆ ಕೇಳು. ಅದು ದೂರ್ವಾಸ ಇಂದ್ರರುಗಳಿಗೆ ಸಂವಾದರೂಪವಾದ ಕಥೆಯು.

೩. ಮಹಾತಪಸ್ವಿಯೂ ಈಶ್ವರಾಂಶಸಂಭೂತನೂ ಆದ ದೂರ್ವಾಸನು ಒಂದುಸಾರಿ ಮಹೇಂದ್ರನನ್ನು ನೋಡಲು ಸ್ವರ್ಗಕ್ಕೆ ಹೋದನು.

ತಸ್ಮಿನ್ ದದರ್ಶ ಕಾಲೇ ತಂ ಗಜಾರೂಢಂ ಶಚೀಪತಿಂ ।
ದೃಷ್ಟ್ವಾ ಸ್ರಜಂ ಪಾರಿಜಾತಾಂ ದದೌ ತಸ್ಮೈ ಮಹಾಮುನಿಃ ॥ ೪ ॥

ಗೃಹೀತ್ವಾ ತಾಂ ಸ್ರಜಂ ಚೈಂದ್ರೋ ವಿನ್ಯಸ್ಯ ಗಜಮೂರ್ಧನಿ ।
ದೇವರಾಟ್ ಪ್ರಯಯೌ ಬ್ರಹ್ಮನ್ ಸಸ್ತ್ರೈನ್ಯೋ ನಂದನಂ ಪ್ರತಿ ॥ ೫ ॥

ಹಸ್ತೀ ಚಾದಾಯ ತಾಂ ಮಾಲಾಂ ಛಿತ್ವಾ ತು ಧರಣೀತಲೇ ।
ಚಿಕ್ಷೇಪ ಚ ಮಹಾಕ್ರುದ್ಧಸ್ತ್ರಮಿತ್ಯಾಹ ಮಹಾಮುನಿಃ ॥ ೬ ॥

ತ್ರೈಲೋಕ್ಯೈಕಶ್ರಿಯಾ ಯುಕ್ತೋ ಯಸ್ಮಾತ್ತ್ವಮವಮನ್ಯಸೇ ।
ತವ ತ್ರೈಲೋಕ್ಯಶ್ರೀರ್ನಷ್ಟಾ ಭವತ್ಯೇವ ನ ಸಂಶಯಃ ॥ ೭ ॥

ತತಶ್ಶಕ್ರೋ ಜಗಾಮಾಶು ಶಪ್ತಶ್ಚ ಸ್ವಪುರಂ ಪುನಃ ।
ದದರ್ಶ ಜಗತಾಂ ಮಾತಾ ಚಾಂತರ್ಧಾನಂ ಗತಾ ಸ್ವಯಂ ॥ ೮ ॥

---

೪. ಈ ದೂರ್ವಾಸನು ಹೋದಾಗ ಆ ಇಂದ್ರನು ಐರಾವತದ ಮೇಲೆ ಕುಳಿತಿದ್ದನು. ಆಗ ಆ ದೂರ್ವಾಸನು ಪಾರಿಜಾತದ ಮಾಲೆಯನ್ನು ಆ ಇಂದ್ರನಿಗೆ ಕೊಟ್ಟನು.

೫. ಆ ಮಾಲೆಯನ್ನು ತೆಗೆದುಕೊಂಡು ಅದನ್ನು ಆನೆಯ ತಲೆಯ ಮೇಲೆ ಇಟ್ಟು ಪರಿವಾರದೊಡನೆ ನಂದನವನಕ್ಕೆ ಹೋದನು.

೬, ಆ ಮಾಲೆಯನ್ನು ಆ ಆನೆಯು ತೆಗೆದುಕೊಂಡು ಚೂರು ಚೂರು ಮಾಡಿ ಭೂಮಿಯಲ್ಲಿ ಎಸೆಯಲು ಅದನ್ನು ನೋಡಿದ ಋಷಿಯು ಕೋಪಗೊಂಡು ಇಂತೆಂದನು.

೭. ನೀನು ಮೂರು ಲೋಕದ ಸಂಪತ್ತಿನಿಂದ ಕೂಡಿದ್ದೇನೆಂದು ಹೀಗೆ ಅವಮಾನಪಡಿಸಿರುವೆಯಾದುದರಿಂದ ನಿನ್ನ ಈ ಮೂರು ಲೋಕದ ಸಂಪತ್ತೂ ಸಂಶಯವಿಲ್ಲದೆ ನಾಶವಾಗುತ್ತದೆ.

೮. ಹೀಗೆ ಶಾಪಗೊಂಡ ಇಂದ್ರನು ಪುನಃ ತನ್ನ ಅಮರಾವತಿಗೆ ಹೋದನು. ಅಲ್ಲಿ ಲೋಕಮಾತೆಯಾದ ಲಕ್ಷ್ಮಿಯು ಅಂತರ್ಧಾನಳಾದುದನ್ನು ತಾನಾಗಿಯೇ ನೋಡಿದನು.

ನಷ್ಟಮಂತರ್ಧಾನವತ್ಯಾಂ ತದಾ ತಸ್ಯಾಂ ಜಗತ್ರಯಂ ।
ಕ್ಷುತ್ಪಿಪಾಸಾನ್ವಿತಾಸ್ಸರ್ವೇ ಚುಕ್ರುಶುರ್ನೈ ನಿರಂತರಂ ॥ ೯ ॥

ನ ವವರ್ಷುರ್ವಾರಿವಾಹಾಃ ಶುಷ್ಕಾಶ್ಚೈವ ಜಲಾಶಯಾಃ ।
ಸರ್ವೇ ತೇ ಶಾಖಿನಶ್ಶುಷ್ಕಾಃ ಫಲಪುಷ್ಪವಿವರ್ಜಿತಾಃ ॥ ೧೦ ॥

ಕ್ಷುತ್ಪಿಪಾಸಾರ್ದಿತಾಸ್ಸರ್ವೇ ಬ್ರಹ್ಮಣಸ್ಸಂನಿಧಿಂ ಯಯುಃ ।
ತಂ ಸರ್ವಂ ಕಥಯಾಮಾಸುಃ ದುಃಖಶೋಕಂ ಪಿತಾಮಹಂ ॥ ೧೧ ॥

ದೇವಾನಾಂ ವಚನಂ ಶ್ರುತ್ವಾ ಧಾತಾ ದೇವಗಣೈಸ್ಸಹ ।
ಭೃಗ್ವಾದಿಮುನಿಭಿಶ್ಚೈವ ಪ್ರಯಯೌ ಕ್ಷೀರಸಾಗರಂ ॥ ೧೨ ॥

ವಿಷ್ಣುಂ ಸಮರ್ಚಯಾಮಾಸ ಕ್ಷೀರಾಬ್ಧೇರುತ್ತರೇ ತಟೇ ।
ಮಂತ್ರಮಷ್ಟಾಕ್ಷರಂ ವೇಧಾ ಜಪನ್ಧ್ಯಾಯಜ್ಜಗತ್ಪತಿಂ ॥ ೧೩ ॥

ತತಃ ಪ್ರಸನ್ನೋ ಭಗವಾನ್ ಸರ್ವೇಷಾಂ ಚ ದಿವೌಕಸಾಂ ।
ವೈನತೇಯಂ ಸಮಾರುಹ್ಯ ಚಾಗತಃ ಸದಯಃ ಪ್ರಭುಃ ॥ ೧೪ ॥

---

೯. ಲೋಕಮಾತೆಯು ಅಂತರ್ಧಾನಳಾಗಲು ಮೂರು ಲೋಕವೂ ಹಸಿವು ಬಾಯಾರಿಕೆಗಳಿಂದ ಯಾವಾಗಲೂ ಅಳಲು ಮೊದಲಿಟ್ಟವು.

೧೦. ಮೋಡಗಳು ಮಳೆ ಸುರಿಸಲಿಲ್ಲ. ಕೆರೆಕಟ್ಟೆಗಳೆಲ್ಲಾ ಒಣಗಿಹೋದವು. ಮರಗಳು ಹೂಹಣ್ಣುಗಳನ್ನು ಬಿಡಲಿಲ್ಲ. ಆಗ ಹಸಿವು ಬಾಯಾರಿಕೆಗಳಿಂದ ಕೂಡಿ ಎಲ್ಲರೂ ಬ್ರಹ್ಮನ ಬಳಿಗೆ ಹೋದರು.

೧೧—೧೨. ಆ ಬ್ರಹ್ಮನೊಡನೆ ಎಲ್ಲರೂ ತಮ್ಮ ದುಃಖವನ್ನು ಹೇಳಿಕೊಂಡರು. ದೇವತೆಗಳ ಮಾತನ್ನು ಕೇಳಿ ಬ್ರಹ್ಮನು ಅವರೊಡನೆಯೂ ಭೃಗುವೇ ಮುಂತಾದ ಋಷಿಗಳೊಡನೆಯೂ ಕ್ಷೀರಸಾಗರಕ್ಕೆ ಹೋದನು.

೧೩. ಆ ಕ್ಷೀರಸಮುದ್ರದ ಉತ್ತರ ದಡದಲ್ಲಿ ವಿಷ್ಣುವನ್ನು ಪೂಜಿಸಿ ಅಷ್ಟಾಕ್ಷರೀಮಂತ್ರವನ್ನು ಜಪಿಸಿ ವಿಷ್ಣುವನ್ನು ಧ್ಯಾನಮಾಡಿದನು.

೧೪. ಆಗ ಪ್ರಸನ್ನನಾದ ಸ್ವಾಮಿಯು ಎಲ್ಲರ ಎದುರಿಗೂ ಗರುಡಾರೂಢನಾಗಿ ಬಂದನು.

ಪೀತವಸ್ತ್ರಂ ಚತುರ್ಬಾಹುಂ ಶಂಖಚಕ್ರಗಧಾಧರಂ ।
ದೃಷ್ಟ್ವಾ ತಂ ಜಗತಾಮೀಶಂ ಪುಂಡರೀಕನಿಭೇಕ್ಷಣಂ ॥೧೫ ॥
ವಿಷ್ಣುಂ ಭವೋದಧೇಃ ಪೋತಂ ವನಮಾಲಾವಿಭೂಷಿತಂ ।
ಶ್ರೀವತ್ಸಕೌಸ್ತುಭೋರಸ್ಕಮಾನಂದಾಶ್ರುಪರಿಪ್ಲುತಾಃ ।
ತುಷ್ಟುವುರ್ಜಯಶಬ್ದೇನ ನಮುಶ್ಚಕ್ರುರ್ನಿರಂತರಂ ॥ ೧೬ ॥

॥ ಶ್ರೀ ಭಗವಾನುವಾಚ ॥

ವರಂ ವೃಣೀಧ್ವಂ ಭೋ ದೇವಾಃ ಕಸ್ಮಾದ್ಯೂಯಂ ಸಮಾಗತಾಃ ।
ವರದೋಽಸ್ಮಿ ತದ್ವದತ ವೋ ದದಾಮಿ ಚ ನಾನ್ಯಥಾ ॥ ೧೭ ॥

॥ ದೇವಾ ಊಚುಃ ॥

ಕೃಪಾಳೋ ಬ್ರಹ್ಮಶಾಪೇನ ಸಂಪದ್ಧೀನಂ ಜಗತ್ತ್ರಯಂ ।
ಕ್ಷುತ್ಪಿಪಾಸಾರ್ದಿತಂ ನಾಥ ಸದೇವಾಸುರಮಾನುಷಂ ।
ರಕ್ಷ ಸರ್ವಾನಿಮಾನ್ ಲೋಕಾನ್ ಯಾತಾಸ್ಸ್ಮ ಶರಣಂ ತವ ॥ ೧೮ ॥

॥ ಶ್ರೀ ಭಗವಾನುವಾಚ ॥

ಇಂದಿರಾ ಬ್ರಹ್ಮಶಾಪೇನ ಚಾಂತರ್ಧಾನಂ ಗತಾ ಶುಭಾ ।
ಯಸ್ಯಾಃ ಕಟಾಕ್ಷಮಾತ್ರೇಣ ಜಗದೈಶ್ವರ್ಯಸಂಯುತಂ ॥ ೧೯ ॥

---

೧೫—೧೬. ಪೀತವಸ್ತ್ರನೂ ನಾಲ್ಕು ತೋಳುಳ್ಳವನೂ ಶಂಖಚಕ್ರಗದಾಧರನೂ ಪುಂಡರೀಕಾಕ್ಷನೂ ಸಂಸಾರವೆಂಬ ಸಮುದ್ರವನ್ನು ದಾಟಿಸುವವನೂ ಆದ ವಿಷ್ಣುವನ್ನು ನೋಡಿ ಸಂತೋಷದಿಂದ ಕಣ್ಣೀರು ಸುರಿಸುತ್ತ, ಜಯಜಯಶಬ್ದದಿಂದ ಸ್ತೋತ್ರಮಾಡಿದನು.

೧೭. ಶ್ರೀಭಗವಂತನು ಹೇಳಿದನು :—ಎಲೈ ! ದೇವತೆಗಳಿರಾ, ನೀವೇಕೆ ಬಂದಿರಿ ? ವರವನ್ನು ಕೇಳಿಕೊಳ್ಳಿ. ಆ ವರವನ್ನು ಕೊಡುತ್ತೇನೆ. ಬೇರೆ ತಿಳಿಯ ಬೇಡಿ.

೧೮. ದೇವತೆಗಳು ಹೇಳಿದರು :—ಎಲೈ ! ಕೃಪಾಳುವೇ, ಬ್ರಾಹ್ಮಣನ ಶಾಪದಿಂದ ಮೂರು ಲೋಕವೂ ಸಂಪತ್ತನ್ನು ಕಳದುಕೊಂಡು ಹಸಿವು ಬಾಯಾರಿಕೆಗಳಿಂದ ಎಲ್ಲರೂ ತೊಂದರೆಪಡುತ್ತಿದ್ದಾರೆ. ಈ ಲೋಕಗಳನ್ನೆಲ್ಲಾ ಕಾಪಾಡು. ನಿನ್ನ ಮರೆಹೊಕ್ಕಿದ್ದೇವೆ ಎಂದರು.

೧೯. ಶ್ರೀಭಗವಂತನು ಹೇಳಿದನು :— ಯಾವಳ ಕೃಪಾಲೇಶದಿಂದ ಈ

ತದಾ ಯೂಯಂ ಸುರಾಸ್ಸರ್ವೇ ಚೋತ್ಪಾಟ್ಯ ಸ್ವರ್ಣಪರ್ವತಂ ।
ಮಂದರಂ ಘರ್ಘರಂ ಕೃತ್ವಾ ಸರ್ಪರಾಜೇನ ವೇಷ್ಟಿತಂ ॥ ೨೦ ॥

ಕುರುಧ್ವಂ ಮಂಥನಂ ದೇವಾಃ ಸದೈತ್ಯಾಃ ಕ್ಷೀರಸಾಗರಂ ।
ತಸ್ಮಾದುತ್ಪತ್ಸ್ಯತೇ ಲಕ್ಷ್ಮೀರ್ಜಗನ್ಮಾತಾ ಚ ಭೋಃ ಸುರಾಃ ॥ ೨೧ ॥

ತಯಾ ಹೃಷ್ಟಾ ಮಹಾಭಾಗಾ ಭವಿಷ್ಯಥ ನ ಸಂಶಯಃ ।
ಧಾರಯಾಮ್ಯಹಮೇವಾದ್ರಿಂ ಕೂರ್ಮರೂಪೇಣ ಸರ್ವತಃ ॥ ೨೨ ॥

ಇತ್ಯುಕ್ತ್ವಾ ಭಗವಾನ್ವಿಷ್ಣುರಂತರ್ಧಾನಂ ಜಗಾಮ ಸಃ ।
ಜಗ್ಮುಸ್ಸುರಾಸುರಾಸ್ಸರ್ವೇ ಸಮುದ್ರಮಥನಂ ದ್ವಿಜ ॥ ೨೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ
ಸಮುದ್ರಮಥನಂ ನಾಮ ಅಷ್ಟಮೋಽಧ್ಯಾಯಃ

---

ಜಗತ್ತು ಐಶ್ವರ್ಯದಿಂದ ಕೂಡಿಕೊಳ್ಳುತ್ತದೆಯೋ ಆ ಇಂದಿರೆಯು ಬ್ರಹ್ಮಶಾಪದಿಂದ ಅದೃಶ್ಯಳಾದಳು. ಆದುದರಿಂದ ಈಗ

೨೦—೨೧. ದೇವತೆಗಳೆಲ್ಲರೂ ಮೇರುಪರ್ವತವನ್ನು ಕಿತ್ತು ಅದನ್ನು ಮಂಥವನ್ನಾಗಿಮಾಡಿಕೊಂಡು, ಸರ್ಪರಾಜನಾದ ವಾಸುಕಿಯನ್ನು ಹಗ್ಗವನ್ನಾಗಿಮಾಡಿಕೊಂಡು, ದೇವತೆಗಳೂ ರಾಕ್ಷಸರೂ ಕ್ಷೀರಸಾಗರವನ್ನು ಕಡೆಯಿರಿ. ಅದರಿಂದ ಜಗನ್ಮಾತೆಯಾದ ಲಕ್ಷ್ಮಿಯು ಹುಟ್ಟುವಳು.

೨೨. ಅವಳು ನಿಮಗೆಲ್ಲರಿಗೂ ಸಂತೋಷವನ್ನುಂಟುಮಾಡುವಳು. ನಾನೇ ಆಮೆಯ ರೂಪದಿಂದ ಆ ಬೆಟ್ಟವನ್ನು ಧರಿಸುತ್ತೇನೆ.

೨೩. ಹೀಗೆಂದು ಹೇಳಿ ವಿಷ್ಣುವು ಅಂತರ್ಧಾನನಾದನು. ದೇವತೆಗಳೆಲ್ಲರೂ ಸಮುದ್ರಮಥನಮಾಡಲು ಯೋಚಿಸಿ ಹೊರಟರು.

ಇಲ್ಲಿಗೆ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸಮುದ್ರಮಥನವೆಂಬ
ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ನ ವ ಮೋಽ ಧ್ಯಾ ಯ ಃ

॥ ಸೂತ ಉವಾಚ ॥

ತತೋಽಮರಗಣಾಸ್ತೇ ತು ಸಗಂಧರ್ವಾಸ್ಸದಾನವಾಃ ।
ಉತ್ಪಾಟ್ಯ ಮಂದರಂ ಶೈಲಂ ಚಿಕ್ಷಿಪುಃ ಪಯಸಾಂ ನಿಧೌ ॥ ೧ ॥

ತತಸ್ಸನಾತನಶ್ಶ್ರೀಮಾನ್ ದಯಾಲುರ್ಜಗದೀಶ್ವರಃ ।
ಅಧಾರಯದ್ಗಿರೇರ್ಮೂಲಂ ಕೂರ್ಮರೂಪೇಣ ಪೃಷ್ಠತಃ ॥ ೨ ॥

ಅನಂತಂ ತತ್ರ ಸಂವೇಷ್ಟ್ಯ ಮಮಂಥುರ್ದುಗ್ಧಸಾಗರಂ ।
ಏಕಾದಶ್ಯಾಂ ಮಥ್ಯಮಾನೇ ಚೋದ್ಗತಂ ಪ್ರಥಮಂ ದ್ವಿಜ ॥ ೩ ॥

---

## ಒಂಭತ್ತನೆಯ ಅಧ್ಯಾಯವು

ಸೂತನು ಹೇಳಿದನು :—ಆ ಮೇಲೆ ದೇವತೆಗಳೂ ರಾಕ್ಷಸರೂ ಸೇರಿ ಮಂದರವನ್ನು ಕಿತ್ತು ಸಮುದ್ರಕ್ಕೆ ಎಸೆದರು.

೨. ಆ ಮೇಲೆ ಸನಾತನಪುರುಷನಾದ ವಿಷ್ಣುವು ದಯೆಯಿಂದ ಕೂರ್ಮಾವತಾರವನ್ನು ಮಾಡಿ ಆ ಬೆಟ್ಟವನ್ನು ಬುಡದಲ್ಲಿ ಹೊತ್ತುಕೊಂಡನು ಬಳಿಕ ಅವರು,

೩. ವಾಸುಕಿಯನ್ನು ಅದಕ್ಕೆ ಸುತ್ತಿ ಕಡೆದರು. ಹೀಗೆ ಹತ್ತು ದಿನಗಳು ಕಳೆದು ಹನ್ನೊಂದನೆಯ ದಿನದಲ್ಲಿ ಕಡೆಯುತ್ತಿರಲು ಒಂದು ಪದಾರ್ಥವು ಹುಟ್ಟಿತು.

ಕಾಲಕೂಟವಿಷಂ ತೇ ತು ದೃಷ್ಟ್ವಾ ಸರ್ವೇ ಪ್ರದುದ್ರುವುಃ ।
ತತಸ್ತಾನ್ವಿದ್ರುತಾನ್ದೃಷ್ಟ್ವಾ ಶಂಕರಶ್ಚೋಕ್ತವಾನಿದಂ ॥ ೪ ॥

ಭೋಭೋಮರಗಣಾ ಯೂಯಂ ವಿಷಂ ಕುರುತ ಮೇ ಕರೇ ।
ವಾರಯಿಷ್ಯಾಮ್ಯಹಂ ತೂರ್ಣಂ ಕಾಲಕೂಟಂ ಮಹಾವಿಷಂ ॥ ೫ ॥

ಇತ್ಯುಕ್ತ್ವಾ ಪಾರ್ವತೀನಾಥೋ ಧ್ಯಾಯನ್ನಾರಾಯಣಂ ಹೃದಿ ।
ಮಹಾಮಂತ್ರಂ ಸಮುಚ್ಚಾರ್ಯ ವಿಷಮಾದದ್ಭಯಂಕರಂ ॥ ೬ ॥

ಮಹಾಮಂತ್ರಪ್ರಭಾವೇನ ವಿಷಂ ಜೀರ್ಣಂ ಗತಂ ಮಹತ್ ।
ಅಚ್ಯುತಾನಂತಗೋವಿಂದ ಇತಿ ನಾಮತ್ರಯಂ ಹರೇಃ ॥ ೭ ॥

ಯೋ ಜಪೇತ್ಪ್ರಯತೋ ಭಕ್ತ್ಯಾ ಪ್ರಣವಾದ್ಯಂ ನಮೋಂತಿಕಂ ।
ವಿಷಭೋಗಾಗ್ನಿಜಂ ತಸ್ಯ ನಾಸ್ತಿ ಮೃತ್ಯೋರ್ಭಯಂ ತಥಾ ।
ತತೋ ಹೃಷ್ಟಾ ಮುದಾ ದೇವಾ ಮಮಂಥುಃ ಕ್ಷೀರಸಾಗರಂ ॥ ೮ ॥

---

೪. ಆಗ ಹುಟ್ಟಿದುದು ಕಾಲಕೂಟ ವಿಷವು. ಆ ವಿಷವು ಹುಟ್ಟಿದುದನ್ನು ನೋಡಿ ಎಲ್ಲರೂ ಓಡಲು ಶಂಕರನು ಇಂತೆಂದನು.

೫. ಎಲೈ ! ದೇವತೆಗಳಿರಾ, ಆ ವಿಷವನ್ನು ನನ್ನ ಕೈಯಲ್ಲಿಡಿ. ಆ ಮಹಾ ವಿಷವನ್ನು ತಡೆಯುತ್ತೇನೆ.

೬. ಈ ರೀತಿ ಹೇಳಿ ಆ ಈಶ್ವರನು ನಾರಾಯಣನನ್ನು ಸ್ಮರಿಸುತ್ತ, ಮಹಾ ಮಂತ್ರವನ್ನುಚ್ಚರಿಸುತ್ತ ಭಯಂಕರವಾದ ವಿಷವನ್ನು ಕುಡಿದನು. ಮಹಾಮಂತ್ರದ ಪ್ರಭಾವದಿಂದ ಆ ವಿಷವು ಅವನನ್ನು ಕೊಲ್ಲದೆ ಜೀರ್ಣವಾಯಿತು.

೭—೮. ಅಚ್ಯುತ. ಅನಂತ, ಗೋವಿಂದ, ಎಂಬ ಮೂರು ಹೆಸರುಗಳಿಗೆ ನಾಮತ್ರಯವೆಂದು ಹೆಸರು. ಇವುಗಳ ಹಿಂದೆ ಓಂಕಾರವನ್ನು ಮುಂದೆ ನಮಃ ಎಂಬ ಪದವನ್ನು ಸೇರಿಸಿ ಉಚ್ಚರಿಸುತ್ತಿದ್ದರೆ ಅವನಿಗೆ ವಿಷ, ಸರ್ಪ, ಬೆಂಕಿಗಳ ಮತ್ತು ಮೃತ್ಯುವಿನ ಹೆದರಿಕೆಗಳೊಂದೂ ಇರುವುದಿಲ್ಲ. ಆ ಮೇಲೆ ಸಂತೋಷಗೊಂಡ ದೇವತೆಗಳು ಸಮುದ್ರವನ್ನು ಕಡೆದರು.

ತತೋಽ ಲಕ್ಷ್ಮೀಸ್ಸಮುತ್ಪನ್ನಾ ಕಾಲಾಸ್ಯಾ ರಕ್ತಲೋಚನಾ ।
ರುಕ್ಷಪಿಂಗಳಕೇಶಾ ಚ ಜರಂತೀ ಬಿಭ್ರತೀ ತನುಂ ॥ ೯ ॥

ಸಾ ಚ ಜ್ಯೇಷ್ಠಾಽಬ್ರವೀದ್ದೇವಾ್ ಕಿಂ ಕರ್ತವ್ಯಂ ಮಯೇತಿ ವೈ ।
ದೇವಾಸ್ತಥಾಽಬ್ರುವಂಸ್ತಾಂ ಚ ದೇವೀಂ ದುಃಖಸ್ಯ ಭಾಜನಂ ॥ ೧೦ ॥

ಯೇಷಾಂ ನೃಣಾಂ ಗೃಹೇ ದೇವಿ ಕಲಹಸ್ಸಂಪ್ರವರ್ತತೇ ।
ತತ್ರ ಸ್ಥಾನಂ ಪ್ರಯಚ್ಛಾಮೋ ವಸ ಜ್ಯೇಷ್ಠೇ ಶುಭಾನ್ವಿತಾ ॥ ೧೧॥

ನಿಷ್ಠುರಂ ವಚನಂ ಯೇ ಚ ವದಂತಿ ಯೇಽನೃತಂ ನರಾಃ ।
ಸಂಧ್ಯಾಯಾಂ ಯೇ ಹಿ ಚಾಶ್ನಂತಿ ದುಃಖದಾ ತಿಷ್ಠ ತದ್ಗೃಹೇ ॥ ೧೨ ॥

ಕಪಾಲಕೇಶಭಸ್ಮಾಸ್ಥಿತುಷಾಂಗಾರಾಣಿ ಯತ್ರ ತು ।
ಸ್ಥಾನಂ ಜ್ಯೇಷ್ಠೇ ತತ್ರ ತವ ಭವಿಷ್ಯತಿ ನ ಸಂಶಯಃ ॥ ೧೩ ॥

---

೯. ಅನಂತರ ಅಲಕ್ಷ್ಮಿಯು ಹುಟ್ಟಿದಳು. ಆಕೆಯು ಕಪ್ಪುಮುಖವನ್ನೂ ಕೆಂಪನೆಯ ಕಣ್ಣನ್ನೂ ಕ್ರೂರವಾಗಿ ಕೆಂಚಗಿರುವ ಕೂದಲನ್ನು ಹೊಂದಿ ಮುದುಕಿಯಂತಿದ್ದಳು.

೧೦. ಆಕೆಗೆ ಜ್ಯೇಷ್ಠಾಲಕ್ಷ್ಮೀ ಅಥವಾ ದರಿದ್ರಲಕ್ಷ್ಮಿ ಎಂದು ಹೆಸರು. ಆಕೆಯು ದೇವತೆಗಳನ್ನು ಕುರಿತು ನಾನೇನು ಮಾಡಬೇಕೆಂದಳು. ಆ ದುಃಖದ ತೌರುಮನೆಯಾದ ದರಿದ್ರಲಕ್ಷ್ಮಿಯನ್ನು ನೋಡಿ ದೇವತೆಗಳು ಇಂತೆಂದರು.

೧೧. ಯಾರ ಮನೆಯಲ್ಲಿ ನಿತ್ಯವೂ ಜಗಳ ನಡೆಯುತ್ತದೆಯೋ ಅಲ್ಲಿ ನಿನಗೆ ಜಾಗವನ್ನು ಕೊಡುತ್ತೇವೆ- ಅಲ್ಲಿ ಸುಖವಾಗಿರು.

೧೨. ನಿಷ್ಠುರ ವಚನಗಳನ್ನು ಹೇಳುವ ಮನೆಯಲ್ಲೂ, ಸುಳ್ಳು ಹೇಳುವ ಮನೆಯಲ್ಲೂ, ಸಂಧ್ಯಾಕಾಲದಲ್ಲಿ ಊಟಮಾಡುವವರ ಮನೆಯಲ್ಲೂ ಸುಖವಾಗಿರು ಎಂದರು.

೧೩. ಕಪಾಲ, ಕೂದಲು, ಮೂಳೆ, ಬೂದಿ, ಹೊಟ್ಟಿನಬೆಂಕಿ ಇವು ಎಲ್ಲಿರುತ್ತವೆಯೋ ಅಲ್ಲಿ ನಿನಗೆ ಜಾಗವಿದೆ. ಸಂಶಯವಿಲ್ಲ.

ಅಕೃತ್ವಾ ಪಾದಯೋರ್ಧೌತಂ ಯೇ ಚಾಶ್ನಂತಿ ನರಾಧಮಾಃ ।
ತದ್ಗೃಹೇ ಸರ್ವದಾ ತಿಷ್ಠ ದುಃಖದಾರಿದ್ರ್ಯದಾಯಿನೀ ॥ ೧೪ ॥

ವಾಲುಕಾಲವಣಾಂಗಾರೈಃ ಕುರ್ವಂತಿ ದಂತಧಾವನಂ ।
ತೇಷಾಂ ಗೃಹೇ ಸದಾ ತಿಷ್ಠ ದುಃಖದಾ ಕಲಿನಾ ಸಹ ॥ ೧೫ ॥

ಛತ್ರಾಕಂ ಶ್ರೀಫಲಂ ಶಿಷ್ಟಂ ಯೇ ಖಾದಂತಿ ನರಾಧಮಾಃ ।
ಗೃಹೇ ತೇಷಾಂ ತವ ಸ್ಥಾನಂ ಜ್ಯೇಷ್ಠೇ ಕಲುಷದಾಯಿನಿ ॥ ೧೬ ॥

ತಿಲಪಿಷ್ಟಮಲಾಂಬುಂ ಯೇ ಗೃಂಜನಂ ಪೋತಿಕಾದಳಂ ।
ಕಲಂಬುಕುಂ ಪಲಾಂಡುಂ ಯೇ ಚಾಶ್ನಂತಿ ಪಾಪಬುದ್ಧಯಃ
ತೇಷಾಂ ಗೃಹೇ ತವ ಸ್ಥಾನಂ ಭವಿಷ್ಯತಿ ನ ಸಂಶಯಃ । ॥ ೧೭ ॥

ಗುರುದೇವಾತಿಥೀನಾಂ ಚ ಯಜ್ಞದಾನವಿವರ್ಜಿತಂ ।
ಯತ್ರ ವೇದಧ್ವನಿರ್ನಾಸ್ತಿ ತತ್ರ ತಿಷ್ಠ ಸದಾ ಶುಭೇ ॥ ೧೮ ॥
ದಂಪತ್ಯೋಃ ಕಲಹೋ ಯತ್ರ ಪಿತೃದೇವಾರ್ಚನಂ ನ ವೈ ।
ದುರೋದರರತಾ ಯತ್ರ ತಿಷ್ಠ ಸದಾ ಶುಭೇ ॥ ೧೯ ॥

---

೧೪. ಕಾಲನ್ನು ತೊಳೆಯದೆ ಊಟಮಾಡುವವರಮನೆಯಲ್ಲಿ ದುಃಖವನ್ನೂ, ದಾರಿದ್ರ್ಯವನ್ನೂ ಕೊಡುತ್ತ ಸದಾ ಇರು.

೧೫. ಮರಳು, ಉಪ್ಪು, ಇದ್ದಲುಗಳಿಂದ ಹಲ್ಲನ್ನು ತಿಕ್ಕುವವರ ಮನೆಯಲ್ಲಿ ದುಃಖವನ್ನೂ, ಜಗಳವನ್ನೂ ಕೊಡುತ್ತ ಯಾವಾಗಲೂ ಇರು.

೧೬. ಅಣಬೆ, ಬಿಲ್ವಪತ್ರೆ ಹಣ್ಣು, ಎಂಜಲು ಇವನ್ನು ತಿನ್ನುವವರ ಮನೆಯಲ್ಲಿ ಯಾವಾಗಲೂ ಇರು.

೧೭. ಚಿಗುಳಿ, ಸೋರೆಕಾಯಿ, ಬೆಳ್ಳುಳ್ಳಿ, ಮೂಲಂಗಿ, ಬಸಳೆ, ಈರುಳ್ಳಿ ಗಳನ್ನು ತಿನ್ನುವ ಪಾಪಬುದ್ಧಿಗಳ ಮನೆಯಲ್ಲಿರು. ಸಂಶಯವಿಲ್ಲ.

೧೮. ಗುರು, ದೇವತೆಗಳು, ಅತಿಥಿಗಳ ಪೂಜೆ ನಡೆಯದಿರುವಲ್ಲಿ, ಯಜ್ಞ ದಾನಗಳಿಲ್ಲದಿರುವಲ್ಲಿ, ವೇದಧ್ವನಿಯಿಲ್ಲದಿರುವಲ್ಲಿ ನೀನು ಸ್ಥಳಮಾಡಿಕೊಂಡಿರು.

೧೯. ಎಲ್ಲಿ ದಂಪತಿಗಳು ಕಲಹಮಾಡುತ್ತಾರೋ, ಪಿತ್ರಾರ್ಚನೆ, ದೇವಾರ್ಚನೆಗಳು ಎಲ್ಲಿ ನಡೆಯುವುದಿಲ್ಲವೋ, ಎಲ್ಲಿ ಜೂಜಾಟವು ನಡೆಯುತ್ತದೋ ಅಲ್ಲಿ ನೀನಿರು.

ಪರದಾರರತಾ ಯತ್ರ ಪರದ್ರವ್ಯಾಪಹಾರಿಣಃ ।
ವಿಪ್ರಸಜ್ಜನವೃದ್ಧಾನಾಂ ಯತ್ರ ಪೂಜಾ ನ ವಿದ್ಯತೇ
ತತ್ರ ಸ್ಥಾನೇ ಸದಾ ತಿಷ್ಠ ಪಾಪದಾರಿದ್ರ್ಯದಾಯಿನೀ । ॥ ೨೦ ॥

ಇತ್ಯಾದಿಶ್ಯ ಸುರಾ ಜ್ಯೇಷ್ಠಾಂ ಸರ್ವೇ ತಾಂ ಕಲಿವಲ್ಲಭಾಂ ।
ಕ್ಷೀರಾಬ್ಧಿಮಥನಂ ಚಕ್ರುಃ ಪುನಸ್ತೇ ಸುಸಮಾಹಿತಾಃ ॥ ೨೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ
ಸಮುದ್ರಮಥನಂ ನಾಮ ನವಮೋಽಧ್ಯಾಯಃ



---

೨೦. ಎಲ್ಲಿ ಪರರ ಹೆಂಡಿರಲ್ಲಿ ಜನರು ಕಾಮಾಸಕ್ತರಾಗಿರುವರೋ, ಪರ ದ್ರವ್ಯವನ್ನು ಯಾರು ಅಪಹರಿಸುತ್ತಾರೋ, ಎಲ್ಲಿ ಬ್ರಾಹ್ಮಣರು, ಸಜ್ಜನರು, ವೃದ್ಧರುಗಳಿಗೆ ಗೌರವವಿರುವುದಿಲ್ಲವೋ ಅಲ್ಲಿ ನೀನಿರು.

೨೧. ಆ ಜಾಗಗಳಲ್ಲಿ ಪಾಪವನ್ನೂ ದಾರಿದ್ರ್ಯವನ್ನೂ ಕೊಟ್ಟು ನೀ ನಿರು ದೇವತೆಗಳು ಇಂತು ಕಲಹಪ್ರಿಯಗಳಾದ ಜ್ಯೇಷ್ಠಾ ಲಕ್ಷ್ಮಿಗೆ ಹೇಳಿ ಪುನಃ ಸಮುದ್ರ ಮಥನಕ್ಕೆ ಆರಂಭಿಸಿದರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಬ್ರಹ್ಮಖಂಡಡಲ್ಲಿ ಸಮುದ್ರಮಥನವೆಂಬ
ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ದಶಮೋಽಧ್ಯಾಯಃ



॥ ಸೂತ ಉವಾಚ ॥

ಐರಾವತಸ್ತತೋ ಜಜ್ಞೇ ತಥೈವೋಚ್ಚೈಃಶ್ರವಾ ಹಯಃ ।
ಧನ್ವಂತರಿಃ ಪಾರಿಜಾತಃ ಸುರಭಿಶ್ಚಾಪ್ಸರೋಗಣಃ ॥ ೧ ॥

ತತಃ ಪ್ರಭಾತಸಮಯೇ ದ್ವಾದಶ್ಯಾಮುದಿತೇ ರವೌ
ಉತ್ಪನ್ನಾ ಶ್ರೀರ್ಮಹಾಲಕ್ಷ್ಮೀಃ ಸರ್ವಲಕ್ಷಣಶೋಭಿತಾ ॥ ೨ ॥

ದದೃಶುಸ್ತಾಂ ಮಹಾದೇವೀಂ ಮಾತರಂ ಧರ್ಮದೇವತಾಃ ।
ಪ್ರಹೃಷ್ಟಾಸ್ಸರ್ವಜಂತೂನಾಂ ಶ್ರೀಕೃಷ್ಣಹೃದಯಾಲಯಾಂ ॥ ೩ ॥

ಲಕ್ಷ್ಮೀಭ್ರಾತಾ ಶೀತರಶ್ಮಿರ್ಜಾತಶ್ಚ ಸುಧಯಾ ತತಃ ।
ಉತ್ಪನ್ನಾ ಸಾ ಹರೇರ್ಜಾಯಾ ತುಲಸೀ ಲೋಕಪಾವನೀ ॥ ೪ ॥

---

೧. ಸೂತನು ಹೇಳಿದನು :—ಐರಾವತ, ಉಚ್ಚೈಃಶ್ರವಸ್ಸು, ಧನ್ವಂತರಿ, ಪಾರಿಜಾತ, ಕಾಮಧೇನುಗಳೂ, ಅಪ್ಸರಸ್ತ್ರೀಯರೂ ಆ ಮೇಲೆ ಹುಟ್ಟಿದರು.

೨. ಆ ಮೇಲೆ ಹನ್ನೆರಡನೆಯ ದಿನ ಬೆಳಿಗ್ಗೆ ಸೂರ್ಯೋದಯವಾದ ಮೇಲೆ ಸರ್ವಲಕ್ಷಣಸಂಪನ್ನಳಾದ ಮಹಾಲಕ್ಷ್ಮಿಯು ಹುಟ್ಟಿದಳು.

೩. ಮಹಾದೇವಿಯೂ, ಲೋಕಕ್ಕೆಲ್ಲಾ ತಾಯಿಯೂ ಆದ, ಶ್ರೀ ಕೃಷ್ಣನ ಹೃದಯವೇ ಮನೆಯಾಗಿವುಳ್ಳ ಆ ಲಕ್ಷ್ಮಿಯನ್ನು ಎಲ್ಲರೂ ನೋಡಿದರು.

೪. ಅನಂತರ ಚಂದ್ರನೂ, ಅಮೃತವೂ, ತುಳಸಿಯೂ ಹುಟ್ಟಿದರು.

ತಂ ಶೈಲಂ ಪೂರ್ವವತ್ತ್ಯಕ್ತ್ವಾ ಪರಿಪೂರ್ಣಮನೋರಥಾಃ ।
ಸಮೇತ್ಯ ಮಾತರಂ ಸ್ತುತ್ವಾ ಜೇಪುಃ ಶ್ರೀಸೂಕ್ತಮುತ್ತಮಂ ॥ ೫ ॥

ತತಃ ಪ್ರಸನ್ನಾ ಸಾ ದೇವೀ ಸರ್ವಾನ್ದೇವಾನುವಾಚ ಹ ।
ವರಂ ವೃಣೀಧ್ವಂ ಭದ್ರಂ ವೋ ವರದಾಽಹಂ ಸುರೋತ್ತಮಾಃ ॥ ೬ ॥

॥ ದೇವಾ ಊಚುಃ ॥

ಪ್ರಸೀದ ಕಮಲೇ ದೇವಿ ಸರ್ವಮಾತರ್ಹರಿಪ್ರಿಯೇ ।
ತ್ವಯಾ ವಿನಾ ಜಗಚ್ಛೂನ್ಯಂ ಕುರು ಪ್ರಾಣಪ್ರರಕ್ಷಣಂ ॥ ೭ ॥

ಇತ್ಯುಕ್ತ್ವಾ ಸಾ ಮಹಾಲಕ್ಷ್ಮೀಃ ಪ್ರಾಹ ನಾರಾಯಣಪ್ರಿಯಾ ।
ಇದಾನೀಂ ಸರ್ವಜಂತೂನಾಂ ಪ್ರಾಣರಕ್ಷಾಂ ಕರೋಮ್ಯಹಂ ॥ ೮ ॥

ತತೋ ನಾರಾಯಣಶ್ಶ್ರೀಮಾನ್ ಶಂಖಚಕ್ರಗದಾಧರಃ ।
ಆವಿರ್ಬಭೂವ ಸಹಸಾ ದಯಾಳುರ್ಜಗದೀಶ್ವರಃ ॥ ೯ ॥

---

೫. ಆ ಬೆಟ್ಟವನ್ನು ಹಾಗೆಯೇ ಬಿಟ್ಟು ಸಂತೋಷಗೊಂಡು ಎಲ್ಲರೂ ಒಟ್ಟಾಗಿ ಬಂದು ತಾಯಿಯಾದ ಲಕ್ಷ್ಮಿಯನ್ನು ನೋಡಿ ಶ್ರೀಸೂಕ್ತವನ್ನು ಜಪಿಸಿದರು.

೬. ಆ ಮೇಲೆ ಪ್ರಸನ್ನಳಾದ ಆ ದೇವಿಯು ಎಲ್ಲಾ ದೇವತೆಗಳನ್ನು ಕುರಿತು ವರವನ್ನು ಕೇಳಿಕೊಳ್ಳಿ, ನಾನು ಕೊಡುತ್ತೇನೆಂದಳು.

೭. ದೇವತೆಗಳು ಹೇಳಿದರು - ಕಮಲೆಯೇ ! ತಾಯಿ ! ಹರಿಪ್ರಿಯೆ ! ಪ್ರಸನ್ನಳಾಗು, ನೀನಿಲ್ಲದುದರಿಂದ ಜಗತ್ತೇ ಶೂನ್ಯವಾಗಿದೆ. ಪ್ರಾಣರಕ್ಷಣೆಯನ್ನು ಮಾಡು.

೮. ಹೀಗೆಂದು ಹೇಳಲು ನಾರಾಯಣಪ್ರಿಯೆಯಾದ ಆಕೆಯು, ಈಗ ಎಲ್ಲಾ ಜಂತುಗಳ ಪ್ರಾಣರಕ್ಷಣೆಯನ್ನು ಮಾಡುತ್ತೇನೆಂದಳು.

೯. ಅನಂತರ ಶಂಖಚಕ್ರಗದಾಧಾರಿಯಾದ ಜಗದೀಶ್ವರನಾದ ನಾರಾಯಣನು ಬಂದನು.

ತತಸ್ತೇ ತುಷ್ಟುವುರ್ದೇವಾಃ ಪ್ರಣಮ್ಯ ಜಗತಾಂ ಪತಿಂ ।
ಕೃತಾಂಜಲಿಪುಟಾಃ ಪ್ರೋಚುರ್ಹರ್ಷಗದ್ಗದಭಾಷಿಣಃ ॥ ೧೦ ॥

ಗೃಹಾಣ ಮಾತರಂ ವಿಷ್ಣೋ ಮಹಿಷೀಂ ವಲ್ಲಭಾಂ ತವ ।
ಸಂಸಾರರಕ್ಷಣಾರ್ಥಾಯ ಲಕ್ಷ್ಮೀಮನಪಗಾಮಿನೀಂ ॥ ೧೧ ॥

ಯಾವತ್ಪ್ರತಿಜ್ಞಾಂ ನೋ ಚಕ್ರೇ ತಾವತ್ಪ್ರಾಹೇಂದಿರಾ ಹರಿಂ ।

॥ ಲಕ್ಷ್ಮೀರುವಾಚ ॥

ಅವಿವಾಹ್ಯ ಕಥಂ ಜ್ಯೇಷ್ಠಾಮಲಕ್ಷ್ಮೀಂ ಮಧುಸೂದನ ।
ತಸ್ಯಾಃ ಕನಿಷ್ಠಾಂ ಮಾಂ ನಾಥ ವಿವಾಹಂ ಕರ್ತುಮಿಚ್ಛಸಿ ।
ಜ್ಯೇಷ್ಠಾಯಾಂ ಚ ಸ್ಥಿತಾಯಾಂ ವೈ ಕನಿಷ್ಠಾ ಪರಿಣೀಯತೇ ॥ ೧೨ ॥

ಸೂತ ಉವಾಚ ॥

ಇತಿ ಶ್ರುತ್ವಾ ತತೋ ವಿಷ್ಣುರ್ದದೌ ಚೋದ್ದಾಲಕಾಯ ಚ ।
ದೇವವಾಕ್ಯಾನುರೂಪೇಣ ಹ್ಯಲಕ್ಷ್ಮೀಂ ನಿರ್ಜರೈಸ್ಸಹ ॥ ೧೩ ॥

ತತೋ ನಾರಾಯಣಶ್ಶ್ರೀಮಾನ್ ಲಕ್ಷ್ಮೀಮಂಗೀಚಕಾರ ಹ ।
ತತಸ್ಸುರಗಣಾಸ್ಸರ್ವೇ ನಮಶ್ಚಕ್ರುಃ ಪುನಃಪುನಃ ॥ ೧೪ ॥

---

೧೦. ಆ ಮೇಲೆ ದೇವತೆಗಳು ಜಗತ್ಪತಿಯಾದ ಸ್ವಾಮಿಯನ್ನು ಸ್ತೋತ್ರ ಮಾಡಿ ಕೈಮುಗಿದುಕೊಂಡು ಇಂತೆಂದರು.

೧೧. ಎಲೈ ! ವಿಷ್ಣುವೇ, ನಿನ್ನ ಹೆಂಡತಿಯನ್ನು ಸಂಸಾರರಕ್ಷಣೆಗೋಸ್ಕರ ಇತರರನ್ನು ಹೊಂದದ ಈಕೆಯನ್ನು ತೆಗೆದುಕೋ, ಎಂದರು. ಇದನ್ನು ಕೇಳಿ ವಿಷ್ಣುವು ತೆಗೆದುಕೊಳ್ಳಲು ಪ್ರತಿಜ್ಞೆಮಾಡದಿರಲು, ಲಕ್ಷ್ಮಿಯು ಇಂತೆಂದಳು.

೧೨. ಲಕ್ಷ್ಮಿಯು ಹೇಳಿದಳು :-ಎಲೈ ವಿಷ್ಣುವೇ, ನಮ್ಮ ಅಕ್ಕನೊಬ್ಬಳಿದ್ದಾಳೆ ಚಿಕ್ಕವಳಾದ ನನ್ನನ್ನು ಹೇಗೆ ಮದುವೆಯಾಗುತ್ತೀಯೆ ? ದೊಡ್ಡವಳು ಮದುವೆ ಯಾಗದೇ ಇರುವಾಗ ಚಿಕ್ಕವಳನ್ನು ಮದುವೆಯಾಗಬಹುದೇ ?

೧೩. ಸೂತನು ಹೇಳಿದನು .—ಇದನ್ನು ಕೇಳಿ ವಿಷ್ಣುವು ದೇವತೆಗಳ ಮಾತಿನಂತೆ ಆ ಅಲಕ್ಷ್ಮಿಯನ್ನು ಉದ್ದಾಲಕನಿಗೆ ಕೊಟ್ಟು ಮದುವೆಮಾಡಿದನು.

೧೪. ಆ ಮೇಲೆ ನಾರಾಯಣನು ಲಕ್ಷ್ಮಿಯನ್ನು ಮದುವೆಯಾದನು. ಆಗ ದೇವತೆಗಳು ಆಕೆಯನ್ನು ಬಾರಿಬಾರಿಗೂ ನಮಸ್ಕರಿಸಿದರು.

ಅಥ ತೇ ಚಾಸುರಾನ್ ಸರ್ವಾನ್ ಜಘ್ನುಃ ಸರ್ವೇ ಬಲಾಧಿಕಾನ್ ।
ಸರ್ವೇ ತೇ ಕ್ರಂದಮಾನಾಶ್ಚ ಗತಾಶ್ಚೈವ ದಿಶೋ ದಶ ॥ ೧೫ ॥

ಸುಧಾಂ ತತ್ಪಾದಿತುಂ ಚಕ್ರುರ್ದೇವಾಃ ಪಂಕ್ತಿಂ ಯಥಾಕ್ರಮಂ ।
ಶ್ರೀವಿಷ್ಣೋರಾಜ್ಞಯಾ ಸರ್ವೇ ಚೋಚುಶ್ಚೈವ ಪರಸ್ಪರಂ ॥ ೧೬ ॥

ತ್ವಂ ಚ ದೇಹಿ ತ್ವಂ ಚ ದೇಹಿ ತ್ವಂ ಚ ದೇಹೀತಿ ಚಾಬ್ರುವನ್ ।
ನ ಶಕ್ತೋಽಸ್ಮಿ ನ ಶಕ್ತೋಽಸ್ಮಿ ನ ಶಕ್ತೋಽಸ್ಮೀತಿ ಚಾಬ್ರುವನ್ ॥ ೧೭ ॥

ತತೋ ವಿಷ್ಣುಸ್ಸಮುತ್ಥಸ್ಥೌ ಸ್ತ್ರೀರೂಪಂ ಚ ದಧಾರ ಹ ।
ಚಕಾರ ಸ್ವರ್ಣಪಾತ್ರೇ ಚ ಪೀಯೂಷಪರಿವೇಷಣಂ ॥ ೧೮ ॥

ಪೀಯೂಷಭಕ್ಷಣಂ ರಾಹುರ್ಯಾವತ್ಕುರ್ಯಾದ್ದ್ವಿಜೋತ್ತಮ ।
ಚಂದ್ರಸೂರ್ಯೌ ಚೋಕ್ತವಂತೌ ರಾಕ್ಷಸೋಽಸೌ ಛಲಾಗತಃ ॥ ೧೯ ॥

ತತಃ ಕ್ರುದ್ಧೋ ಜಗನ್ನಾಥೋ ಜಘಾನ ಸ್ವರ್ಣಪಾತ್ರತಃ ।
ಶಿರಸ್ತಸ್ಯ ಪಪಾತೋರ್ವ್ಯಾಂ ಕೇತುರ್ನಾಮ್ನಾ ಬಭೂವ ಹ ॥ ೨೦ ॥

---

೧೫. ಅನಂತರ ಬಲಿಷ್ಠರಾದ ರಾಕ್ಷಸರನ್ನು ದೇವತೆಗಳು ಬಡಿದೋಡಿಸಿದರು. ಅವರೆಲ್ಲರೂ ಅಳುತ್ತ ಸಿಕ್ಕಿದತ್ತ ಓಡಿಹೋದರು.

೧೬. ಸುಧೆಯನ್ನು ಭಕ್ಷಿಸಲು ದೇವತೆಗಳೆಲ್ಲಾ ಸಾಲಾಗಿ ಕೂತರು. ವಿಷ್ಣುವು ಹಾಗೆ ಆಜ್ಞೆಮಾಡಿದನು. ಒಬ್ಬೊಬ್ಬರು ಹೀಗೆ ಹೇಳಿಕೊಂಡರು.

೧೭. ನೀನು ಕೊಡು, ನೀನು ಕೊಡು, ನೀನು ಕೊಡೆಂದು ಹೇಳುತ್ತಿದ್ದರು. ಪ್ರತಿಯೊಬ್ಬನೂ ನನಗಾಗುವುದಿಲ್ಲ, ನನಗಾಗುವುದಿಲ್ಲ, ನನಗಾಗುವುದಿಲ್ಲ ಎನ್ನುತ್ತಿದ್ದನು.

೧೮. ಅನಂತರ ವಿಷ್ಣುವು ಎದ್ದು ಹೆಂಗಸಿನ ಅವತಾರವನ್ನು ತಾಳಿ ಚಿನ್ನದ ಪಾತ್ರೆಯಲ್ಲಿ ಅಮೃತವನ್ನು ಬಡಿಸಿದನು.

೧೯. ರಾಹುವು ಅಮೃತವನ್ನು ಕುಡಿಯುವಷ್ಟರೊಳಗೆ ಸೂರ್ಯಚಂದ್ರರು ಬಂದು ಇವನು ರಾಕ್ಷಸನು, ಕಪಟದಿಂದ ಬಂದಿದ್ದಾನೆಂದರು.

೨೦. ಆಗ ವಿಷ್ಣುವು ಕೋಪಗೊಂಡು ಚಿನ್ನದ ಪಾಟನಿಂದಲೇ ಹೊಡೆಯಲು ಅವನು ತಲೆಯು ಕೆಳಗೆ ಬಿದ್ದು ಕೇತುವೆಂಬ ಹೆಸರನ್ನು ಹೊಂದಿತು.

ರಾಹುಕೇತೌ ತತಸ್ತೂರ್ಣಂ ಗತೌ ತೌ ಭಯವಿಹ್ವಲೌ ।
ಇದಾನೀಂ ತದ್ದಿನೇ ಪ್ರಾಪ್ತೇ ಚಂದ್ರಸೂರ್ಯೌ ಸ ಯುಧ್ಯತಿ ।
ತುರ್ಯಾದ್ಗ್ರಾಸಂ ಸೈಂಹಿಕೇಯಸ್ತತ್ಕ್ಷಣಂ ದುರ್ಲಭಂ ಭವೇತ್ ॥ ೨೦ ॥

ಸರ್ವಂ ಗಂಗಾಸಮಂ ತೋಯಂ ವೇದವ್ಯಾಸಸಮಾ ದ್ವಿಜಾಃ ।
ಸ್ನಾನಂ ವಾಯಸತೀರ್ಥೇ ಯೋ ಗಂಗಾಸ್ನಾನಫಲಂ ಲಭೇತ್ ॥ ೨೨ ॥

ದಾನಮಕ್ಷಯ್ಯಪುಣ್ಯಂ ಸ್ಯಾತ್ಕೋಟಿಜನ್ಮಾರ್ಜಿತಂ ತಥಾ ।
ಪಾಪಂ ನಶ್ಯೇತ್ಸಮೂಲಂ ಚ ಕಿಂ ಪುನಃ ಕ್ರತುಕೋಟಿಭಿಃ ॥ ೨೩ ॥

ವಿದ್ಯಾರ್ಥೀ ಲಭತೇ ವಿದ್ಯಾಂ ಪುತ್ರಾರ್ಥೀ ಪುತ್ರಮಾಪ್ನುಯಾತ್ ।
ಮೋಕ್ಷಾರ್ಥೀ ಲಭತೇ ಮೋಕ್ಷಂ ಮಂತ್ರಸಿದ್ಧಿರ್ಭವೇದ್ಧ್ರುವಂ ।
ಇತಿ ತೇ ಕಥಿತಂ ವಿಪ್ರ ಸಮುದ್ರಮಥನಂ ತು ತತ್ ॥ ೨೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ
ಸಮುದ್ರಮಥನಂ ನಾಮ ದಶಮೋಧ್ಯಾಯಃ

---

೨೧. ರಾಹುಕೇತುಗಳಿಬ್ಬರೂ ಅನಂತರ ಭಯದಿಂದ ಓಡಿದರು. ಈಗಲೂ ಆ ದಿನವು ಬಂದರೆ ಆ ರಾಹುಕೇತುಗಳು ಆ ಸೂರ್ಯಚಂದ್ರರೊಡನೆ ಯುದ್ಧಮಾಡುತ್ತಾರೆ. ಎಂದರೆ ಅದೇ ಗ್ರಹಣ. ಆ ದಿನವು ಸಿಕ್ಕುವುದು ಕಷ್ಟವು.

೨೨. ಆಗ ಎಲ್ಲಾ ನೀರುಗಳೂ ಗಂಗಾತೀರ್ಥಕ್ಕೆ ಸಮವಾಗುತ್ತವೆ. ಎಲ್ಲ ಬ್ರಾಹ್ಮಣರೂ ವೇದವ್ಯಾಸರಿಗೆ ಸಮರಾಗುತ್ತಾರೆ. ಕಾಗೆ ನೀರು ಕುಡಿಯುವ ಜಾಗದಲ್ಲಿ ಸ್ನಾನಮಾಡಿದರೂ ಆಗ ಗಂಗಾಸ್ನಾನ ಫಲವೇ ಬರುತ್ತದೆ.

೨೩. ಆಗ ಮಾಡಿದ ದಾನವು ಅಕ್ಷಯಪುಣ್ಯವನ್ನು ಕೊಡುತ್ತದೆ. ಕೋಟಿ ಜನ್ಮಗಳಿಂದ ಮಾಡಿದ ಪಾಪವು ನಾಶವಾಗುತ್ತದೆ. ಹೀಗೆ ಮಾಡಿದರೆ ಕೋಟಿ ಯಾಗಗಳಿಂದ ತಾನೆ ಏನು ಪ್ರಯೋಜನ ?

೨೪. ವಿದ್ಯಾರ್ಥಿಯು ವಿದ್ಯೆಯನ್ನೂ, ಪುತ್ರಾರ್ಥಿಯು ಮಗನನ್ನೂ, ಮೋಕ್ಷಾರ್ಥಿಯು ಮೋಕ್ಷವನ್ನು ಹೊಂದುತ್ತಾನೆ. ಮಂತ್ರಸಿದ್ಧಿಯೂ ಆಗ ಆಗುತ್ತದೆ. ಸಮುದ್ರಮಥನದ ವಿಷಯವನ್ನು ಇಂತು ವಿವರಿಸಿದ್ದೇನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸಮುದ್ರಮಥನವೆಂಬ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ಏ ಕಾ ದ ಶೋऽ ಧ್ಯಾ ಯ ಃ



॥ ಶೌನಕ ಉವಾಚ ॥

ಇದಾನೀಂ ಶ್ರೋತುಮಿಚ್ಛಾಮಿ ಕಥಯಸ್ವ ಯಥಾರ್ಥತಃ ।
ಹರಿಸ್ವರೂಪಿಣಾ ಸಾಕ್ಷಾದ್ವೇದವ್ಯಾಸೇನ ಶಾಸಿತ ॥ ೧ ॥

ನಿರಹಂಕಾರ ಹೇ ಸೂತ ಲೋಕಾನುಗ್ರಹಕಾರಕ ।
ಕೇನ ಸ್ಯಾತ್ಸುಭಗಾ ನಾರೀ ಪಾಪಿನೀ ಚ ಸುದುರ್ಭಗಾ ॥ ೨ ॥

ಪತಿಪ್ರಿಯಾಂಗ ಕೇನ ಸ್ಯಾದ್ರೂಪಿತಾ ಚಕ್ಷುಷೋಸ್ಸುಧಾ ।
ಕೇನ ವಾ ಜಾಯತೇ ಲಕ್ಷ್ಮೀಸ್ತನ್ಮೇ ಬ್ರೂಹಿ ತಪೋಧನ ॥ ೩ ॥

---

### ಹನ್ನೊಂದನೆಯ ಅಧ್ಯಾಯವು

೧-೨. ಶೌನಕನು ಹೇಳಿದನು :— ಎಲೈ! ಸೂತನೇ, ನೀನು ಸಾಕ್ಷಾತ್ ವೇದವ್ಯಾಸರಿಂದ ಶಿಕ್ಷೆಯನ್ನು ಹೊಂದಿದ್ದೀಯೆ. ಆ ವ್ಯಾಸನು ವಿಷ್ಣುಸ್ವರೂಪಿಯು. ನೀನು ನಿರಹಂಕಾರನು. ಲೋಕಕ್ಕೆ ಒಳ್ಳೆಯದನ್ನು ಕೋರುವವನು. ಹೆಂಗಸು ಸುಂದರಿಯಾಗಿರುವುದಕ್ಕೂ ಕುರೂಪಿಣಿಯಾಗಿರುವುದಕ್ಕೂ ಕಾರಣವನ್ನು ದಯ ವಿಟ್ಟು ತಿಳಿಸು. ಕೇಳಬೇಕೆಂದಿದ್ದೇನೆ.

೩. ಎಲೈ ಸೂತನೇ, ಆಕೆಯು ಪತಿಪ್ರಿಯೆಯಾಗಿ ಆತನ ಕಣ್ಣಿಗೆ ಅಮೃತ ದಂತಿರಲು ಏನು ಮಾಡಬೇಕು ? ಅವಳು ಲಕ್ಷ್ಮೀರೂಪಳಾಗಿ ಹೇಗೆ ಆಗುವಳು ? ಹೇಳು.

॥ ಸೂತ ಉವಾಚ ॥

ಯದಿ ಪುಣ್ಯಮಿದಂ ವಿಪ್ರ ವೃತ್ತಂ ಪರಮದುರ್ಲಭಂ ।
ಶೃಣುಷ್ವ ಭೋಃ ಸಮಾಸೇನ ಕಥಯಾಮಿ ವಿಧಾನತಃ ॥ ೪ ॥

ಆಸೀದ್ಭದ್ರಶ್ರವಾ ರಾಜಾ ಯುಗೇ ದ್ವಾಪರಸಂಜ್ಞಿಕೇ ।
ಸೌರಾಷ್ಟ್ರದೇಶವಾಸೀ ಚ ವೇದವೇದಾಂಗಪಾರಗಃ ॥ ೫ ॥

ಭಾರ್ಯಾ ತಸ್ಯ ಚ ಸಂಜಾತಾ ನಾಮ್ನಾ ಸುರತಿಚಂದ್ರಿಕಾ ।
ತಸ್ಯಾಂ ಬಭೂವುಃ ಶ್ರೀರಾಜ್ಞಃ ಸಪ್ತ ಪುತ್ರಾ ಮನೋರಮಾಃ ॥ ೬ ॥

ತತೋಽಪಿ ಜಾತಾ ದುಹಿತಾ ಸುಂದರೀ ಸತ್ಯವಾದಿನೀ ।
ಶ್ಯಾಮಬಾಲಾ ಚ ವಿಪ್ರೇಂದ್ರ ನಾಮ್ನಾ ಪ್ರೀತಿಕರೀ ಪಿತುಃ ॥ ೭ ॥

ಅಥೈಕದಾ ಶ್ಯಾಮಬಾಲಾ ಸುವರ್ಣಸಿಕತಾಸು ಚ ।
ಗೂಢೈರ್ಮನೋಹರೈ ರತ್ನೈಃ ಸಖೀಭಿಃ ಕ್ರೀಡಿತುಂ ಮುದಾ ।
ಜಗಾಮ ನೀಪವೃಕ್ಷಸ್ಯ ತಲಂ ಪರಮದುರ್ಲಭಂ ॥ ೮ ॥

---

೪. ಸೂತನು ಹೇಳಿದನು :—ಪರಮ ದುರ್ಲಭವೂ, ಪುಣ್ಯಪ್ರದವೂ ಆದ ಈ ವಿಷಯವನ್ನು ಹೇಳುತ್ತೇನೆ, ಕೇಳು.

೫. ದ್ವಾಪರಯುಗದಲ್ಲಿ ಸೌರಾಷ್ಟ್ರ ದೇಶದಲ್ಲಿ ವೇದವೇದಾಂಗಗಳನ್ನು ಓದಿದ ಭದ್ರಶ್ರವನೆಂಬ ರಾಜನಿದ್ದನು.

೬. ಅವನಿಗೆ ಸುರತಿಚಂದ್ರಿಕೆಯೆಂಬ ಹೆಂಡತಿ ಇದ್ದಳು. ಅವಳಲ್ಲಿ ಆ ರಾಜನಿಗೆ ಏಳು ಜನ ಮಕ್ಕಳು ಹುಟ್ಟಿದರು.

೭. ಆ ಮೇಲೆ ಆತನಿಗೆ ಒಬ್ಬಳು ಮಗಳು ಹುಟ್ಟಿದಳು. ಆಕೆಯು ಸತ್ಯವಾದಿನಿಯಾಗಿ ಸುಂದರಿಯಾಗಿದ್ದಳು. ತಂದೆಗೆ ಅವಳು ಬಹು ಪ್ರೀತಿಪಾತ್ರಳಾಗಿ ಇದ್ದಳು. ಅವಳ ಹೆಸರು ಶ್ಯಾಮಬಾಲೆಯು.

೮. ಆ ಮೇಲೆ ಒಂದು ಸಾರಿ ಆ ಶ್ಯಾಮಬಾಲೆಯು ಒಳ್ಳೆಯ ಬಣ್ಣವುಳ್ಳ ಮರಳಿನಲ್ಲಿ ರತ್ನಗಳನ್ನು ಮುಚ್ಚಿ ಆಡುವ ಆಟಕ್ಕೋಸ್ಕರ ಸಖಿಯರೊಡನೆ ಅತ್ಯಂತ ಶ್ರೇಷ್ಠವಾದ ಹೊಂಗೆಯಮರದ ನೆರಳಿಗೆ ಹೋದಳು.

ಏತಸ್ಮಿನ್ನಂತರೇ ವಿಪ್ರ ಲಕ್ಷ್ಮೀಸ್ಸಂಸಾರತಾರಿಣೀ ।
ಲೋಕಾನಾಂ ನೀತಿದಾ ಸಾಥ ಸಮಾಯಾತಾ ಸ್ವಯಂ ಪುರಃ ॥ ೯ ॥

ಧೃತ್ವಾ ಚ ಬ್ರಾಹ್ಮಣೀರೂಪಂ ಪಲಿತಾಂಗೀ ಚ ಭೂಸುರ ।
ಅಖಿಲಾನಾಂ ಚ ಲೋಕಾನಾಂ ಶಾಸ್ತ್ರೋ ರಾಜ್ಞಃ ಕ್ಷಯಂ ವಿನಾ ॥ ೧೦ ॥

ಕೇಷಾಂ ಕ್ಷುದ್ರತರಾಣಾಂ ಹಿ ಗೃಹಂ ಗಚ್ಛಾಮಿ ಸಾಂಪ್ರತಂ ।
ಇತಿ ಸಂಚಿಂತ್ಯ ಮನಸಾ ಗತಾ ರಾಜನಿಕೇತನಂ ॥ ೧೧ ॥

ಸುವರ್ಣಭಿತ್ತಿಭಿರ್ಯುಕ್ತಂ ಪತಾಕಾಭಿರಲಂಕೃತಂ ।
ಸಿಂಹದ್ವಾರಮಭಿಕ್ರಮ್ಯ ಪ್ರಾಹ ದೌವಾರಿಕೀಂ ತತಃ ॥ ೧೨ ॥

ದ್ವಾರಂ ಜಹಿಹಿ ಭೋ ದ್ವಾರನಿಯುಕ್ತೇ ಶುಭಲಕ್ಷಣೇ ।
ಯಾಮಿ ವೇಗೇನ ಪಶ್ಯಾಮಿ ರಾಜ್ಞೀಂ ಸುರತಚಂದ್ರಿಕಾಂ ॥ ೧೩ ॥

ತಚ್ಛ್ರುತ್ವಾ ವಚನಂ ತಸ್ಯಾ ರತ್ನದಂಡಕರಾ ಚ ಸಾ ।
ಕೋಕಿಲಾವಾಕ್ಯವನ್ಮುಕ್ತಂ ಪರಮಂ ಹರ್ಷಮಾಯಯೌ ॥ ೧೪ ॥

---

೯. ಇಷ್ಟರಲ್ಲಿ ಸಂಸಾರೋದ್ಧಾರಕಳಾದ ಲಕ್ಷ್ಮಿಯು ತಾನೇ ಅಲ್ಲಿಗೆ ಬಂದಳು.

೧೦. ಆ ಲಕ್ಷ್ಮಿಯು ಬ್ರಾಹ್ಮಣಸ್ತ್ರೀರೂಪವನ್ನು ಹೊಂದಿ ತಲೆಯನ್ನೆಲ್ಲಾ ನರೆತ ಕೂದಲುಗಳಿಂದ ತುಂಬಿಕೊಂಡು, ಪ್ರಜಾಪಾಲಕನಾದ ಆ ರಾಜನ ಮನೆಗೆ ಬಂದಳು.

೧೧. ಯಾವ ಕ್ಷುದ್ರನ ಮನೆಗೆ ಹೋಗಲಿ ಎಂದು ಯೋಚಿಸಿ ಆ ರಾಜನ ಮನೆಗೆ ಹೋದಳು.

೧೨. ಚಿನ್ನದ ಗೋಡೆಗಳುಳ್ಳ, ಬಾವುಟಗಳಿಂದ ಅಲಂಕೃತವಾದ ಆ ಅರಮನೆಯ ಹೆಬ್ಬಾಗಿಲನ್ನು ದಾಟಿ ಅಲ್ಲಿದ್ದ ದ್ವಾರಪಾಲಕನನ್ನು ಕುರಿತು ಇಂತೆಂದಳು.

೧೩. ಎಲೈ ಭದ್ರೆಯೇ, ಬಾಗಿಲು ಕಾಯುವವಳೇ, ಬಾಗಿಲನ್ನು ಬಿಡು. ಜಾಗ್ರತೆಯಾಗಿ ಹೋಗಿ ರಾಣಿಯಾದ ಸುರತಚಂದ್ರಿಕೆಯನ್ನು ನೋಡಬೇಕು.

೧೪. ಆ ಕೋಗಿಲೆಯ ಧ್ವನಿಯಂತಿರುವ ಧ್ವನಿಯಿಂದ ಮಾತನಾಡಿದ ಆಕೆಯ ಧ್ವನಿಯನ್ನು ಕೇಳಿ ಆ ಬಾಗಿಲು ಕಾವಲುಗಾರಳು ಸಂತೋಷಗೊಂಡಳು.

॥ ದ್ವಾರನಿಯುಕ್ತೋವಾಚ ॥
ಕಿಂ ನಾಮ ವಹಸೇ ವೃದ್ಧೇ ಕಃ ಪತಿಸ್ತಾವಕಃ ಪುನಃ ।
ಆಗತಾಸಿ ಕಥಂ ಕಿಂ ತೇ ಕಾರ್ಯಂ ರಾಜ್ಞ್ಯಾಶ್ಚ ದರ್ಶನೇ ।
ಕಸ್ಮಾತ್ತಿಂ ಬ್ರೂಹಿ ವಿಪ್ರೇ ತ್ವಂ ಶ್ರೋತುಂ ಕೌತೂಹಲಂ ಹಿ ಮೇ ॥ ೧೫ ॥

॥ ವೃದ್ಧೋವಾಚ ॥
ಶೃಣು ಪ್ರೋಷ್ಯೇ ಮಹಾರಾಜಪತ್ನ್ಯಾ ದಂಡಕರೇ ಯದಾ ।
ಶ್ರೋತುಂ ಕೌತೂಹಲಂ ತೇಽಸ್ತಿ ಮದಾಗಮನಕಾರಣಂ ॥ ೧೬ ॥

ಪ್ರಸಿದ್ಧಾ ಕಮಲಾ ನಾಮ್ನಾ ಚಾಹಂ ಪ್ರಾಣೇಶ್ವರೋ ಮಮ ।
ಭುವನೇಶ ಇತಿ ಖ್ಯಾತೋ ನಾಮ್ನಾ ದ್ವಾರವತೀ ಪುರೀ ॥ ೧೭ ॥

ತಸ್ಯಾಂ ವೈ ವರ್ತತೇ ಪ್ರೋಷ್ಯೇ ಮಮ ಪ್ರಾಣೇಶ್ವರಸ್ತಥಾ ।
ಆಗತಾಹಂ ರತ್ನವೇತ್ರಕರೇ ಶೃಣು ಸಕೌತುಕಂ ॥ ೧೮ ॥

ಮಮಾಗಮನಕಾರ್ಯಂ ಹಿ ವಚ್ಮೀದಾನೀಂ ತವಾಗ್ರತಃ ।
ಪುರಾಸೀದ್ವೈಶ್ಯಕುಲಜಾ ರಾಜ್ಞೀ ತವ ಚ ದುಃಖಿನೀ ॥ ೧೯

---

೧೫. ಬಾಗಿಲು ಕಾಯುವವಳು ಹೇಳಿದಳು :—ಎಲೈ ಮುದುಕಿಯೇ, ನಿನ ಹೆಸರೇನು ? ನಿನ್ನ ಗಂಡನಾರು ? ಏತಕ್ಕೆ ಬಂದೆ ? ನಿನಗೆ ಕೆಲಸವೇನು ? ಏತಕ್ಕೆ ರಾಣಿಯನ್ನು ನೋಡಬೇಕು ?ಅದೇನು ? ಎಂಬುದೆಲ್ಲವನ್ನೂ ಹೇಳು. ಕೇಳಬೇಕೆಂಬ ಆಸೆ ಇದೆ.

೧೬. ಮುದುಕಿಯು ಹೇಳಿದಳು:—ಎಲೈ ದ್ವಾರಪಾಲಕಿಯೇ ಕೇಳು, ನಿನಗೆ ನಾನು ಬಂದ ಕಾರಣವನ್ನು ಕೇಳಬೇಕೆಂದು ಮನಸ್ಸಿದ್ದರೆ ಹೇಳುತ್ತೇನೆ.

೧೭-೧೮. ನನ್ನ ಹೆಸರು ಕಮಲೆಯು. ನನ್ನ ಗಂಡನು ಭುವನೇಶನೆಂದು ಪ್ರಸಿದ್ಧನಾಗಿದ್ದಾನೆ. ಅವನಿರುವುದು ದ್ವಾರಾವತೀಪಟ್ಟಣ. ಅಲ್ಲಿಂದ ನಾನು ಬಂದಿದ್ದೇನೆ.

೧೯. ನಾನು ಬಂದ ಕೆಲಸವನ್ನು ನಿನಗೆ ಹೇಳುತ್ತೇನೆ, ಕೇಳು. ಪೂರ್ವದಲ್ಲಿ ವೈಶ್ಯಕುಲದಲ್ಲಿ ಹುಟ್ಟಿದ ರಾಣಿಯೊಬ್ಬಳು ಇದ್ದಳು. ಅವಳು ನಿನಗೆ ದುಃಖವನಲ್ಲ ಯಾವಾಗಲೂ ಕೊಡುತ್ತಿದ್ದಳು.

ಏಕಸ್ಮಿನ್ದಿವಸೇ ಪ್ರೋಷ್ಯೇ ಪತಿನಾ ಕಲಹಃ ಕೃತಃ ।
ತಯಾ ನಾರ್ಯಾ ಚ ದುಃಖಿನ್ಯಾ ತತೋ ವೈ ಭರ್ತೃಪೀಡಿತಾ ॥ ೨೦ ॥

ಬಹಿರ್ಭೂಯ ದ್ರುತಂ ಗೇಹಾದ್ರುದಂತೀ ಚ ಪುನಃ ಪುನಃ ।
ತಸ್ಯಾಶ್ಚ ರೋದನಂ ಶ್ರುತ್ವಾ ಚಾಗತಾಹಂ ಸಮೀಪತಃ ॥ ೨೧ ॥

ಪಪ್ರಚ್ಛ ಸರ್ವವೃತ್ತಾಂತಂ ಕಥಿತೋ ವೈ ಯಥಾರ್ಥತಃ ।
ತಯಾ ತತೋ ವ್ರತವರಮುಪದೇಶಂ ದದಾಮ್ಯಹಂ ॥ ೨೨ ॥

ಮನೋದೇಶತಸ್ಸಾ ವೈ ಚಕ್ರೇ ವ್ರತವರಂ ಮುದಾ ।
ತಸ್ಯ ಪ್ರಸಾದಾದ್ಭೋದ್ವಾಸ್ಥೇ ಸಂಜಾತಾ ಸುಖಿತಾ ಚ ಸಾ ॥ ೨೩ ॥

ಕದಾಚಿದ್ವೈಶ್ಯಕುಲಜಾ ಪತ್ಯಾ ಮೃತ್ಯೋರ್ವಶಂ ಗತಾ ।
ಸಮಾನೇತುಂ ತತಸ್ತಾಂ ತು ವಿಹಿತಾಖಿಲಘಾತಕೌ ॥ ೨೪ ॥

ಕಿಂಕರಾನ್ಪ್ರೇಷಯಾಮಾಸ ಚಂಡಾದ್ಯಾನ್ಧರ್ಮರಾಟ್ಪ್ರಭುಃ ।
ಯಮಾಜ್ಞಯಾ ಸಮಾಯಾತಾ ಯಮದೂತಾ ಭಯಂಕರಾಃ ॥ ೨೫ ॥

---

೨೦. ಒಂದು ದಿನ ಗಂಡನೊಡನೆ ಆಕೆಯು ಜಗಳವಾಡಿದಳು. ಆಮೇಲೆ ಗಂಡನು ತೊಂದರೆಪಡಿಸಿದನು.

೨೧. ಆಕೆಯು ಮನೆಯಿಂದ ಹೊರಗೆ ಬಂದು ಅಳಲು ಮೊದಲು ಮಾಡಿದಳು. ಆಕೆಯ ಅಳುವ ಶಬ್ದವನ್ನು ಕೇಳಿ ನಾನು ಹತ್ತಿರಕ್ಕೆ ಬಂದೆನು.

೨೨. ನಾನು ಕೇಳುತ್ತಲೂ ಎಲ್ಲಾ ವಿಷಯಗಳನ್ನೂ ಹೇಳಿದಳು. ಆಮೇಲೆ ಆಕೆಗೊಂದು ವ್ರತವನ್ನು ಉಪದೇಶಮಾಡಿದೆನು.

೨೩. ನನ್ನ ಉಪದೇಶದಂತೆ ಆಕೆಯು ವ್ರತವನ್ನು ಮಾಡಿ ಆ ವ್ರತದಿಂದ ಆಕೆಯು ಸುಖವನ್ನು ಹೊಂದಿದಳು.

೨೪-೨೫. ಕೆಲವು ಕಾಲದ ಮೇಲೆ ಆ ವೈಶ್ಯರಾಣಿಯು ಗಂಡನೊಡನೆ ಸತ್ತಳು. ಅವರನ್ನು ಕರೆದುಕೊಂಡು ಹೋಗಲು ಘಾತುಕರಾದ, ಭಯಂಕರರಾದ ಯಮನ ಆಳುಗಳು ಬಂದರು.

ಬದ್ಧ್ವಾ ತೌ ಚರ್ಮಪಾಶೇನ ಲೋಹಮುದ್ಗರಪಾಣಯಃ ।
ಉದ್ಯಮಂ ಚಕ್ರಿರೇ ಗಂತುಂ ಯಮಸ್ಯ ಶರಣಂ ಪ್ರತಿ ॥ ೨೬ ॥

ಅತ್ರಾಂತರೇ ಚ ಲಕ್ಷ್ಮ್ಯಾಸ್ತು ದೂತಾ ವಿಷ್ಣುಪರಾಯಣಾಃ ।
ಸಮಾನೇತುಂ ಸಮಾಯಾತಾಃ ಶಂಖಚಕ್ರಗದಾಧರಾಃ ॥ ೨೭ ॥

ದೃಷ್ಟ್ವಾ ತಥಾ ವಿಧಾಂಸ್ತಾಂಶ್ಚ ಯಮದೂತಾಃ ಪಲಾಯಿತಾಃ ।
ಲಕ್ಷ್ಮೀದೂತಾ ಮಹಾತ್ಮಾನಃ ಸ್ವಪ್ರಕಾಶಾದಯಸ್ತಥಾ ॥ ೨೮ ॥

ಪಾಶಂ ಛಿತ್ವಾ ಸಮಾರೋಪ್ಯ ರಾಜಹಂಸಯುತೇ ರಥೇ ।
ಜಗ್ಮುರ್ಲಕ್ಷ್ಮೀಪುರಂ ಸರ್ವೇ ಸಹಸಾ ಕೀರ್ತಿವರ್ತ್ಮನಾ ॥ ೨೯ ॥

ಯಾವದ್ವಾರಂ ವ್ರತಂ ತಂ ವಾ ವೈಶ್ಯಾ ಕೃತವತೀ ಚ ಸಾ ।
ತಾವತ್ಕಲ್ಪಸಹಸ್ರಾಣಿ ತಸ್ಥತುಃ ಕಮಲಾಪುರೇ ॥ ೩೦ ॥

ಪುಣ್ಯಶೇಷಸ್ಯ ಭೋಗಾರ್ಥಂ ಜಾತೌ ರಾಜಾನ್ವಯೇಽಧುನಾ ।
ವ್ರತಂ ಚ ವಿಸ್ಮೃತೌ ದ್ವಾಃಸ್ಥೇ ರಾಜಸಂಪತ್ತಿಗರ್ವಿತೌ ॥ ೩೧ ॥

---

೨೬. ಚರ್ಮದಿಂದ ಮಾಡಿದ ಹಗ್ಗದಿಂದ ಕಟ್ಟಿ, ಕೈಯಲ್ಲಿ ಮುದ್ಗರವನ್ನು ಹಿಡಿದು ಅವರನ್ನು ಯಮನ ಮನೆಗೆ ಕರೆದೊಯ್ಯಲು ಪ್ರಯತ್ನಿಸಿದರು.

೨೭. ಇಷ್ಟರೊಳಗೆ ವಿಷ್ಣುಪರಾಯಣರಾದ ಲಕ್ಷ್ಮಿಯ ದೂತರು ಶಂಖಚಕ್ರ ಗದೆಗಳನ್ನು ಹಿಡಿದು ಅವರನ್ನು ಕರೆದೊಯ್ಯಲು ಬಂದರು.

೨೮—೨೯. ಆ ವಿಷ್ಣುದೂತರನ್ನು ನೋಡಿ ಆ ಯಮಕಿಂಕರರು ಓಡಿ ಹೋದರು. ಲಕ್ಷ್ಮೀದೂತರಾದ ಸ್ವಪ್ರಕಾಶಾದಿಗಳು ಆ ಹಗ್ಗವನ್ನು ಕತ್ತರಿಸಿ, ರಾಜ ಹಂಸಗಳಿಂದ ಕೂಡಿದ ರಥದಲ್ಲಿ ಕೂರಿಸಿಕೊಂಡು ಕೀರ್ತಿಯ ದಾರಿಯಿಂದ ಲಕ್ಷ್ಮೀ ಪುರಕ್ಕೆ ಕರೆದುಕೊಂಡು ಹೋದರು.

೩೦. ಆ ವೈಶ್ಯೆಯು ಎಷ್ಟು ಬಾರಿ ಆ ವ್ರತಗಳನ್ನು ಮಾಡಿದ್ದಳೋ ಅಷ್ಟು ಸಹಸ್ರ ಕಲ್ಪಗಳವರೆಗೂ ಆ ಕಮಲಾಪುರದಲ್ಲಿ ಅವರು ಇದ್ದರು.

೩೧. ಪುಣ್ಯದ ಶೇಷಾಂಶವನ್ನು ಅನುಭವಿಸಲು ರಾಜನ ವಂಶದಲ್ಲಿ ಈಗ ಹುಟ್ಟಿದ್ದಾರೆ. ಅವರು ರಾಜತನದ ಸೊಕ್ಕಿನಿಂದ ಹೆಮ್ಮೆಗೊಂಡು, ವ್ರತವನ್ನು ಮರೆತಿದ್ದಾರೆ. ಆದ್ದರಿಂದ ಅವರಿಗೂ ನಿನಗೂ ಅದನ್ನು ಉಪದೇಶಿಸಲು ಬಂದೆನು.

ತಸ್ಮಾಚ್ಛ ತವ ತಸ್ಯಾಪಿ ಚೋಪದೇಶಾರ್ಥಮಾಗತಾ ।

॥ ದ್ವಾಃಸ್ಥೋವಾಚ ॥

ಕೇನೈವ ತು ವಿಧಾನೇನ ವೃದ್ಧೇ ವ್ರತವರಂ ಕೃತಂ ॥ ೩೨ ॥

ಕಸ್ಮಿನ್ಮಾಸೇ ವ್ರತಂ ಶ್ರೇಷ್ಠಂ ದೇವತಾ ಕಾ ಚ ಪೂಜ್ಯತೇ ।
ಏತನ್ಮೇ ಪೃಚ್ಛತೋ ಮಾತರ್ಯಥಾವದ್ವಕ್ತುಮರ್ಹಸಿ ॥ ೩೩ ॥

॥ ಕಮಲೋವಾಚ ॥

ಕಾರ್ತಿಕೇ ಚ ವ್ಯತಿಕ್ರಾನ್ತೇ ಮಾರ್ಗಶೀರ್ಷೇ ಸಮಾಗತೇ ।
ತಸ್ಮಿನ್ಮಾಸೇ ಚ ಭೋಃ ಪೌಷ್ಯೇ ವಾಸರೇ ಗುರುಸಂಜ್ಞಿಕೇ ॥ ೩೪ ॥

ತತಃ ಪೂರ್ವಾಹ್ಣಸಮಯೇ ಸಕಲವ್ರತಿಭಿರ್ವೃತಾ ।
ನಾರಾಯಣೇನ ಸಹಿತಾಂ ಲಕ್ಷ್ಮೀಂ ಸಂಪೂಜಯೇತ್ತತಃ ॥ ೩೫ ॥

ಮಿಷ್ಟೈಃ ಪಾಯಸಯುಕ್ತೈಶ್ಚ ಭುಕ್ತೈಶ್ಚ ಖಂಡಮಿಶ್ರಿತೈಃ ।
ಲಕ್ಷ್ಮೀಂ ಸಂತೋಷಯೇತ್ಪ್ರೇಷ್ಯೇ ತತಃ ಸಂಪ್ರಾರ್ಥಯೇದಿದಂ ॥೩೬॥

---

೩೨. ಬಾಗಿಲು ಕಾಯುವವಳು ಹೇಳಿದಳು :—ಎಲೈ ವೃದ್ಧೆಯೇ, ಆ ವ್ರತವನ್ನು ಯಾವ ರೀತಿಯಿಂದ ಮಾಡಿದೆವು ?

೩೩. ಯಾವ ತಿಂಗಳಲ್ಲಿ ಆ ವ್ರತವನ್ನು ಮಾಡಬೇಕು ? ಯಾವ ದೇವತೆಯನ್ನು ಪೂಜಿಸಬೇಕು ? ಇದನ್ನು ದಯವಿಟ್ಟು ಹೇಳು.

೩೪—೩೫. ಕಮಲೆಯು ಹೇಳಿದಳು :—ಕಾರ್ತಿಕಮಾಸದ ಕೊನೆಯಲ್ಲಿ ಅಥವಾ ಮಾರ್ಗಶೀರ್ಷ ಮಾಸದಲ್ಲಿ, ಅದೂ ಇಲ್ಲದಿದ್ದರೆ ಪುಷ್ಯಮಾಸದ ಗುರುವಾರದಲ್ಲಿ ಪೂರ್ವಾಹ್ಣದಲ್ಲಿ ವ್ರತಮಾಡತಕ್ಕವರೆಲ್ಲರೂ ಒಂದೆಡೆಸೇರಿ ನಾರಾಯಣನಿಂದ ಸಹಿತಳಾದ ಲಕ್ಷ್ಮಿಯನ್ನು ಪೂಜಿಸಬೇಕು.

೩೬. ಪಾಯಸ ಸಹಿತವಾದ ಸಿಹಿಪದಾರ್ಥಗಳನ್ನೂ, ಬಗೆಬಗೆಯಾದ ಅನ್ನಗಳನ್ನೂ, ಭಕ್ಷ್ಯಗಳನ್ನೂ ಮಾಡಿ ಲಕ್ಷ್ಮೀಗೆ ನಿವೇದನಮಾಡಿ ಸಂತೋಷಪಡಿಸಿ ಆಮೇಲೆಹೀಗೆ ಪ್ರಾರ್ಥಿಸಬೇಕು.

ತ್ರೈಲೋಕ್ಯಪೂಜಿತೇ ದೇವಿ ಕಮಲೇ ವಿಷ್ಣುವಲ್ಲಭೇ ।
ಯಥಾ ತ್ವಮಚಲಾ ಕೃಷ್ಣೇ ತಥಾ ಭವ ಮಯಿ ಸ್ಥಿತಾ ॥ ೩೭ ॥

ಈಶ್ವರಿ ಕಮಲೇ ದೇವಿ ಶರಣಂ ಚ ಭವಾನಘೇ ।
ನಾನೋಪಹಾರದ್ರವ್ಯೈಶ್ಚ ಲಕ್ಷ್ಮೀಮಾಜ್ಞಾಪ್ಯ ತೋಷಯೇತ್ ॥ ೩೮ ॥

ಶಾಸ್ತ್ರೈಶ್ಚ ಪೂಜಯೇದ್ದೇವೀಂ ಮಹೋತ್ಸವಸಮನ್ವಿತಾಂ ।
ತತೋ ನೈವೇದ್ಯಶೇಷಾಂಶ್ಚ ದತ್ವಾ ಬ್ರಾಹ್ಮಣಸತ್ತಮಂ ॥ ೩೯ ॥

ಆತ್ಮಾನಂ ಸ್ವಪತಿಂ ಪುತ್ರಾನ್ ಪೋಷ್ಯೇಽನ್ಯಾನಪಿ ಸೇವಕಾನ್ ।
ದ್ವಿತೀಯೇ ತು ಗುರೋರ್ವಾರೇ ವಿಶೇಷಂ ಶೃಣು ಸುಂದರಿ ॥ ೪೦ ॥

ಚಿತ್ರಧೂಳೀಪ್ರಶಸ್ತೈಶ್ಚ ಭ್ರಾಷ್ಟ್ರೈರ್ಗೋಧೂಮನಿರ್ಮಿತೈಃ ।
ತೋಷಣಂ ಕಮಲಾದೇವ್ಯಾಃ ಕುರ್ಯಾದ್ವೈ ಭಕ್ತಿಭಾವತಃ ॥ ೪೧ ॥

ತೃತೀಯೇ ಖಂಡಸಂಯುಕ್ತಂ ದಧ್ಯೋದನನಿವೇದನಂ ।
ಶ್ಯಾಮಾಕಶಾಲಿಕಾಸಾರೈಶ್ಚತುರ್ಥೇ ಪೂಜಯೇನ್ಮುದಾ ॥ ೪೨ ॥

---

೩೭. ಮೂರು ಲೋಕದಲ್ಲಿ ಪೂಜಿತಳಾದ, ವಿಷ್ಣುಪ್ರಿಯಳಾದ ಎಲೈ ಕಮಲಾ ದೇವಿಯೇ, ನೀನು ಚಲಿಸದಂತೆ ನನ್ನಲ್ಲಿ ಸ್ಥಿರವಾಗಿರು.

೩೮. ಈಶ್ವರಿಯೇ, ಕಮಲಾದೇವಿಯೇ, ಅನಘೆಯೇ, ನನಗೆ ರಕ್ಷಕಳಾಗು. ಎಂದು ಹೇಳಿ ನಾನಾ ಒಗೆಯಾದ ದ್ರವ್ಯಗಳನ್ನು ಲಕ್ಷ್ಮಿಗೆ ಕೊಟ್ಟು ಸಂತೋಷ ಪಡಿಸಬೇಕು.

೩೯. ಶಾಸ್ತ್ರರೀತಿಯಿಂದ ಆ ಲಕ್ಷ್ಮಿಯನ್ನು ಬಹು ಉತ್ಸವದಿಂದ ಪೂಜಿಸಬೇಕು. ಆ ಮೇಲೆ ನೈವೇದ್ಯಶೇಷವನ್ನು ಬ್ರಾಹ್ಮಣನಿಗೂ ತನ್ನ ಗಂಡನಿಗೂ, ಮಕ್ಕಳಿಗೂ, ಆಳುಗಳಿಗೂ ಕೊಟ್ಟು ತಾನೂ ತಿನ್ನಬೇಕು.

೪೦. ಎರಡನೆಯ ಗುರುವಾರದಲ್ಲಿ ವಿಶೇಷವನ್ನು ಹೇಳುತ್ತೇನೆ ಕೇಳು.

೪೧. ಹುರಿದ ಗೋದುವೆಯ ಹಿಟ್ಟಿನಿಂದ ಮಾಡಿದ ಚಿತ್ರಧೂಳಿಗಳಿಂದ ಭಕ್ತಿಯಿಂದ ಲಕ್ಷ್ಮೀಯನ್ನು ಸಂತೋಷಪಡಿಸಬೇಕು.

೪೨. ಮೂರನೆಯ ಗುರುವಾರದಲ್ಲಿ ಕಡುಬಿನಿಂದ ಕೂಡಿದ ಮೊಸರನ್ನವನ್ನು ನಿವೇದಿಸಬೇಕು. ನಾಲ್ಕನೆಯ ಗುರುವಾರದಲ್ಲಿ ನವಣೆ, ಅಕ್ಕಿಯ ಹಿಟ್ಟಿನಿಂದ

ಲಕ್ಷ್ಮೀದೇವೀಂ ಪ್ರಯತ್ನೇನ ರತ್ನ ದಂಡಕರೇ ತತಃ ।
ಲಕ್ಷ್ಮೀದೇವೀಪ್ರೀತಯೇ ತು ಬ್ರಾಹ್ಮಣಾನ್ಪೂಜಯೇದ್ಧನೈಃ ।
ವಸ್ತ್ರಾಲಂಕಾರಭೋಜ್ಯೈಶ್ಚ ಫಲೈರ್ನಾನಾವಿಧೈಸ್ತಥಾ ॥ ೪೩ ॥

॥ ಪ್ರೋಷ್ಟ್ಯೋವಾಚ ॥

ಅತ್ರೈವ ತಿಷ್ಠ ಭೋ ವೃದ್ಧೇ ರಾಜ್ಞೀಂ ಸುರತಿಚಂದ್ರಿಕಾಂ ।
ವಿಜ್ಞಾಪ್ಯ ತ್ವಾಂ ನಯಿಷ್ಯಾಮಿ ನ ಕ್ರೋಧಂ ಕುರು ಸತ್ತಮೇ ॥ ೪೪ ॥

ಇತ್ಯುಕ್ತ್ವಾ ಸಾ ತು ಚಾರ್ವಂಗೀ ಗತಾ ರಾಜ್ಞೀಸಮೀಪತಃ ।
ಶಿರಸ್ಯಂಜಲಿಮಾಧಾಯ ಪ್ರೋಷ್ಟ್ಯಾ ಬ್ರಹ್ಮನ್ ಸಮೂಲತಃ ॥ ೪೫ ॥

ಆರಭ್ಯ ಸಾಂಗಪರ್ಯಂತಂ ಯದೂಚೇ ಕಮಲಾಲಯಾ ।
ತತ್ಸರ್ವಂ ಕಥಯಾಮಾಸ ರಾಜ್ಞೀಂ ಸುರತಿಚಂದ್ರಿಕಾಂ ॥ ೪೬ ॥

ದ್ವಾರಪಾಲೀವಚಶ್ಶ್ರುತ್ವಾ ರಾಜ್ಞೀ ಸುರತಿಚಂದ್ರಿಕಾ ।
ಜಗಾಮ ಬ್ರಾಹ್ಮಣೀಪಾರ್ಶ್ವಂ ಸಗರ್ವಾ ಪ್ರಾಹ ಸುಂದರೀ ॥ ೪೭ ॥

---

ಮಾಡಿದ ಪಾಯಸ, ಮೊದಲಾದವುಗಳಿಂದಲೂ, ಭಕ್ಷ್ಯಗಳಿಂದಲೂ ತೃಪ್ತಿಪಡಿಸಬೇಕು.

೪೩. ಎಲೈ ಪ್ರತೀಹಾರಿಣಿಯೇ, ಲಕ್ಷ್ಮೀದೇವಿಯನ್ನು ಹೀಗೆ ಪೂಜಿಸಬೇಕು. ಅನಂತರ ಆಕೆಯ ಪ್ರೀತಿಗೋಸ್ಕರ ಬ್ರಾಹ್ಮಣರಿಗೆ ಭೋಜನಮಾಡಿಸಿ, ವಸ್ತ್ರಾಲಂಕಾರಗಳನ್ನು ದಾನಮಾಡಬೇಕು. ನಾನಾ ಬಗೆಯ ಫಲಗಳನ್ನು ಕೊಡಬೇಕು.

೪೪. ಆ ಪ್ರತೀಹಾರಿಣಿಯು ಹೇಳಿದಳು:-ಎಲೈ ಮುದುಕಿಯೇ, ಇಲ್ಲೇ ಒಂದು ಗಳಿಗೆ ಇರು. ಆ ರಾಣಿಯಾದ ಸುರತಿಚಂದ್ರಿಕೆಗೆ ಹೇಳಿ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ, ಕೋಪಮಾಡಬೇಡ.

೪೫—೪೬. ಹೀಗೆಂದು ಹೇಳಿ ಆಕೆಯು ಆ ರಾಣಿಯ ಬಳಿಗೆ ಹೋಗಿ ತಲೆಯ ಮೇಲೆ ಕೈಕಟ್ಟಿಕೊಂಡು, ಆ ಕಮಲೆಯು ಹೇಳಿದುದನ್ನು ಮೊದಲಿನಿಂದ ಕೊನೆಯವರೆಗೂ ಅಕೆಗೆ ಎಲ್ಲವನ್ನೂ ಹೇಳಿದಳು.

೪೭. ದ್ವಾರಪಾಲಿಕೆಯ ಮಾತನ್ನು ಕೇಳಿ ಆ ರಾಣಿಯು ಹೆಮ್ಮೆಯಿಂದ ಆ ಕಮಲೆಯ ಬಳಿಗೆ ಬಂದು ಇಂತೆಂದಳು.

॥ ರಾಜ್ಞ್ಯುವಾಚ ॥

ವೃದ್ಧೇ ಬ್ರಾಹ್ಮಣಿ ಕಿಂ ವೃತ್ತಂ ಚೋಪದೇಶಾರ್ಥಮಾಗತಾ ।
ಕಥಯಸ್ವ ಚಿರಂ ಮಹ್ಯಂ ಭಯಂ ತ್ಯಕ್ತ್ವಾ ಯಥಾಸುಖಂ ॥ ೪೮ ॥

॥ ಬ್ರಾಹ್ಮಣ್ಯುವಾಚ ॥

ತವಾನೀತಿಮಹಂ ದೃಷ್ಟ್ವಾ ಗಂತುಮಿಚ್ಛಾಮಿ ಚಂಚಲಾ ।
ಕಥಯಿಷ್ಯಾಮಿ ಕಿಂ ದುಷ್ಟೇ ವ್ರತಂ ಪರಮದುರ್ಲಭಂ ॥ ೪೯ ॥

ಇಂದಿರಾವಾಸರೇ ಚಾದ್ಯ ಚಾಂಡಾಲೇ ನ ಕರೋಷಿ ಯತ್ ।
ತದ್ದೃಷ್ಟಂ ಮಯಿ ಕಾ ದುಷ್ಟೇ ತದ್ಗೃಹೇ ಗರ್ವಿತೇಽಧುನಾ ॥ ೫೦ ॥

ತಚ್ಛ್ರುತ್ವಾ ಬ್ರಾಹ್ಮಣೀವಾಕ್ಯಂ ಕ್ರೋಧಸಂರಕ್ತಲೋಚನಾ ।
ಜರಂತೀಂ ಬ್ರಾಹ್ಮಣೀಂ ಚೈವ ಪ್ರಹಾರಂ ಚ ಚಕಾರ ಸಾ ॥ ೫೧ ॥

ತತಸ್ಸಾ ಕಮಲಾ ವೃದ್ಧಾ ಕ್ರಂದಮಾನಾ ಪಲಾಯಿತಾ ।
ಕ್ರೀಡಾಮಾನಾ ತತಶ್ಶ್ಯಾಮಾ ಬ್ರಾಹ್ಮಣೀಕ್ರಂದನಧ್ವನಿಂ ।
ಆಗತಾಸ್ಯಾಸ್ಸಮೀಪಂ ತು ಶ್ರುತ್ವಾ ಬಾಲಾ ತಪೋಧನಾ ॥ ೫೨ ॥

---

೪೮ ರಾಣಿಯು ಹೇಳಿದಳು—ಎಲೈ ವೃದ್ಧಬ್ರಾಹ್ಮಣಿಯೇ, ಏನು ಸಮಾಚಾರ? ಉಪದೇಶಕ್ಕೋಸ್ಕರ ಬಂದಿದ್ದೀಯಾ? ಭಯವನ್ನು ಬಿಟ್ಟು ಎಷ್ಟು ಹೊತ್ತುಬೇಕಾದರೂ ಹೇಳು.

೪೯. ಬ್ರಾಹ್ಮಣ ಸ್ತ್ರೀಯು ಹೇಳಿದಳು :—ನಿನ್ನ ಅಯೋಗ್ಯತನವನ್ನು ನೋಡಿ ನಾನು ಹೋಗಲು ಅಪೇಕ್ಷಿಸುತ್ತೇನೆ. ಪರಮದುರ್ಲಭವಾದ ವ್ರತವನ್ನು ಏಕೆ ಹೇಳಲಿ ?

೫೦. ಇಂದಿರೆಯ ವಾರದ ವ್ರತವನ್ನು ನೀನು ಎಲೈ! ಚಾಂಡಾಲಿಯೇ, ಮಾಡುತ್ತಾ ಇಲ್ಲ. ಅದನ್ನು ನಾನು ನೋಡಿದೆ. ಎಲೈ ದುಷ್ಟಳೇ, ಏನು? ಎಲೈ ದುಷ್ಟಳೇ, ಅಂತಹ ಮನೆಯಲ್ಲಿ ಏನು ಕೆಲಸ?

೫೧. ಆ ಬ್ರಾಹ್ಮಣಿಯ ಆ ಮಾತನ್ನು ಕೇಳಿ ಕೋಪದಿಂದ ಕಣ್ಣನ್ನು ಕೆಂಡದಂತೆ ಮಾಡಿಕೊಂಡು ಆ ಮುದುಕಿಯನ್ನು ಆಕೆಯು ಹೊಡೆದಳು.

೫೨. ಆ ಮೇಲೆ ಆ ವೃದ್ಧವೇಷಧಾರಿಣಿಯಾದ ಕಮಲೆಯು ಅಳುತ್ತಾ ಓಡಿ

॥ ಶ್ಯಾಮಬಾಲೋವಾಚ ॥

ವೃದ್ಧೇ ವ್ಯಥೇದೃಶೀ ಕೇನ ದತ್ತಾ ತುಭ್ಯಂ ವದಸ್ವ ಮೇ ।
ತಸ್ಯಾ ವಚನಮಾಕರ್ಣ್ಯ ಶೋಕಗದ್ಗದಯಾ ಗಿರಾ ।
ಕಮಲಾ ಕಥಿತಂ ಸರ್ವಂ ವೃತ್ತಾಂತಂ ದ್ವಿಜಸತ್ತಮ ॥ ೫೩ ॥

ಶ್ಯಾಮಬಾಲಾ ತತಶ್ಶ್ರುತ್ವಾ ವ್ರತಂ ಪರಮದುರ್ಲಭಂ ।
ಶಾಸ್ತ್ರೋಕ್ತವಿಧಿನಾ ಚಕ್ರೇ ಸಶ್ರದ್ಧಂ ಚ ಸುಭಕ್ತಿತಃ ॥ ೫೪ ॥

ತ್ರಿವಾರೇ ಪರಿಪೂರ್ಣೇ ತು ತುರ್ಯವಾರೇ ಸಮಾಗತೇ ।
ವಿವಾಹಕರ್ಮ ಸಂಸಿದ್ಧಂ ದ್ವಿಜ ಲಕ್ಷ್ಮೀಪ್ರಸಾದತಃ ॥ ೫೫ ॥

ಶ್ರೀ ಸಿದ್ಧೇಶ್ವರದೇವಸ್ಯ ನೃಪತೇರ್ಭೂಪತೇರ್ಜಸಃ ।
ಮಾಲಾಧರೋ ನಾಮ ಸುತೋ ಗೃಹೀತ್ವಾ ತಾಂ ಗೃಹಂ ಗತಃ ॥ ೫೬ ॥

ಅಥ ತಸ್ಯಾಂ ಗತಾಯಾಂ ತು ಬ್ರಹ್ಮನ್ ಶೃಣುಷ್ವ ಕೌತುಕಂ ।
ರಾಜ್ಞೀಗೃಹೇ ಚ ಸರ್ವಾಣಿ ಸ್ಥಿತಾನಿ ಚ ಬಹೂನಿ ಚ ॥ ೫೭ ॥

---

ದಳು. ಆಗ ಆಟವಾಡುತ್ತಿದ್ದ ಆ ಶ್ಯಾಮಬಾಲೆಯು ಆ ಬ್ರಾಹ್ಮಣಿಯು ಅಳುವ ಧ್ವನಿಯನ್ನು ಕೇಳಿ ಆ ಮುದುಕಿಯ ಹತ್ತಿರಕ್ಕೆ ಬಂದಳು.

೫೩.ಶ್ಯಾಮಬಾಲೆಯು ಹೇಳಿದನು :—ಎಲೈ ವೃದ್ಧಳೇ, ಈರೀತಿಯಾದ ದುಃಖವನ್ನು ನಿನಗಾರು ಉಂಟುಮಾಡಿದರು ? ಹೇಳು, ಎನ್ನಲು ಆಕೆಯ ಮಾತನ್ನು ಕೇಳಿ ಮುದುಕಿಯು ದುಃಖದಿಂದ ಆ ಕಮಲೆಯು ಸಕಲವನ್ನೂ ಹೇಳಿದಳು.

೫೪. ಶ್ಯಾಮಬಾಲೆಯು ಆ ವ್ರತವನ್ನು ಕೇಳಿ ಶಾಸ್ತ್ರೋಕ್ತವಿಧಿಯಿಂದ ಭಕ್ತಿಯಿಂದ ಆ ವ್ರತವನ್ನು ಮಾಡಿದಳು.

೫೫. ಮೂರು ವಾರ ಮುಗಿದು ನಾಲ್ಕನೆಯ ವಾರ ಬರುವುದರೊಳಗೆ ಆ ಲಕ್ಷ್ಮಿಯ ಅನುಗ್ರಹದಿಂದ ಮದುವೆಯು ಸಿದ್ಧವಾಯಿತು.

೫೬. ಸಿದ್ಧೇಶ್ವರದೇವನೆಂಬ ರಾಜನ ಮಗನಾದ ಮಾಲಾಧರನು ಆಕೆಯನ್ನು ಮದುವೆಯಾಗಿ ತನ್ನ ಮನೆಗೆ ಕರೆದುಕೊಂಡು ಹೋದನು.

೫೭. ಅವಳು ಹೋದಮೇಲೆ ಎಲೈ ನಾರದನೆ, ಆಶ್ಚರ್ಯವನ್ನು ಕೇಳು. ಆ ರಾಣಿಯ ಮನೆಯಲ್ಲಿದ್ದ ಎಲ್ಲ ದ್ರವ್ಯವನ್ನೂ ಯಾರು ತೆಗೆದುಕೊಂಡು ಹೋದರೋ ಗೊತ್ತಾಗಲೇ ಇಲ್ಲ.

ದ್ರವ್ಯಾಣಿ ಕೇನ ನೀತಾನಿ ನ ಜ್ಞಾತಾನ್ಯಪಿ ಭೂಸುರ ।
ನಿರ್ವಿತ್ತಾ ಬುದ್ಧಿಹೀನಾ ಸಾ ಚಾನ್ನವಸ್ತ್ರವಿವರ್ಜಿತಾ ॥ ೫೮ ॥

ಉಪವಿಷ್ಟಾ ಚ ಕೇನಾಪಿ ಗಂತುಂ ಚ ದುಹಿತುರ್ಗೃಹಂ ।
ಪ್ರೇಷಯಾಮಾಸ ಭರ್ತಾರಂ ಕಿಂಚಿತ್ಪ್ರಾರ್ಥನಹೇತವೇ ॥ ೫೯ ॥

ತಸ್ಯ ಮಾಲಾಧರಸ್ಯಾಪಿ ಗ್ರಾಮೇ ಚ ಸರಸೀತಟೇ ।
ಕಾಲೇನ ಕಿಯತಾ ವಿಪ್ರ ಪ್ರವೇಶಂ ಚ ಚಕಾರ ಸಃ ॥ ೬೦ ॥

ತಸ್ಮಾಜ್ಜಲಂ ಸಮಾನೇತುಂ ತಸ್ಯಾ ದಾಸ್ಯಸ್ಸಮಾಗತಾಃ ।
ತಂ ದೃಷ್ಟ್ವಾ ದುಃಖಿನಾಂ ಶ್ರೇಷ್ಠಂ ಪಪ್ರಚ್ಛುಃ ಸಾನುಕಂಪಿತಾಃ ॥ ೬೧ ॥

॥ ದಾಸ್ಯ ಊಚುಃ ॥

ಕಸ್ತ್ವಂ ಕುತಃ ಸಮಾಯಾತೋ ಮಾಂಸರಕ್ತವಿವರ್ಜಿತಃ ।
ರೂಕ್ಷಾಂಗೋ ರೂಕ್ಷಕೇಶಶ್ಚ ತತ್ಸರ್ವಂ ಕಥಯಸ್ವ ನಃ ॥ ೬೨ ॥

॥ ದರಿದ್ರ ಉವಾಚ ॥

ಶ್ಯಾಮಬಾಲಾಪಿತಾ ಚಾಹಂ ಸೌರಾಷ್ಟ್ರನಗರಾಗತಃ ।
ಕಥಯಧ್ವಂ ಚ ಭೋ ದಾಸ್ಯಃ ಶ್ಯಾಮಬಾಲಾಸಮೀಪತಃ ॥ ೬೩ ॥

---

೫೮—೫೯. ದುಡ್ಡಿಲ್ಲದೆ ಬುದ್ಧಿಹೀನಳಾಗಿ, ಅನ್ನವಸ್ತ್ರಗಳಿಲ್ಲದೆ ಮಗಳ ಮನೆಗೆ ಹೋಗಲು, ತಾನು ಒಬ್ಬನ ಜೊತೆಯಲ್ಲಿ ಕುಳಿತುಕೊಂಡು ಕೇಳಿಕೊಂಡು ಬರಲು ಗಂಡನನ್ನು ಕಳುಹಿಸಿದಳು.

೬೦. ಆ ಮಾಲಾಧರನ ಊರಿನ ಬಳಿ ಒಂದು ನದಿಯ ಬಳಿಗೆ ಎಷ್ಟೋ ದಿನಗಳ ಮೇಲೆ ಹೋದನು.

೬೧. ಆ ನದಿಯಿಂದ ನೀರನ್ನು ತೆಗೆದುಕೊಂಡು ಹೋಗಲು ಆಕೆಯ ದಾಸಿಯರು ಬಂದು ಆ ದುಃಖಿಯಾದ ಮನುಷ್ಯನನ್ನು ನೋಡಿ ದಯೆಯಿಂದ ಕೇಳಿದರು.

೬೨. ದಾಸಿಯರು ಹೇಳಿದರು:—ನೀನಾರು ? ಎಲ್ಲಿಂದ ಬಂದೆ ? ಬಹು ಬಡವಾಗಿದ್ದೀಯಲ್ಲಾ ಏಕೆ ? ಮೈ, ಕೂದಲುಗಳೆಲ್ಲಾ ಒರಟಾಗಿರಲು ಕಾರಣವೇನು ? ಅದೆಲ್ಲವನ್ನೂ ಹೇಳು.

೬೩. ದರಿದ್ರನು ಹೇಳಿದನು:—ನಾನು ಶ್ಯಾಮಬಾಲೆಯ ತಂದೆಯು. ಸೌರಾಷ್ಟ್ರದಿಂದ ಬಂದಿದ್ದೇನೆ. ಇದನ್ನು ಶ್ಯಾಮಬಾಲೆಯ ಹತ್ತಿರ ಹೇಳಿರಿ.

ತಚ್ಛ್ರುತ್ವಾ ವಚನಂ ತಸ್ಯ ಕೌತೂಹಲಸಮನ್ವಿತಾಃ ।
ಪರಸ್ಪರಮುಖಾಸ್ಸರ್ವಾ ಜಹಸುಃ ಸ್ವಪುರಂ ಗತಾಃ ॥ ೬೪ ॥

ಶ್ಯಾಮಬಾಲಾ ಚ ಕಥಿತಂ ಸರ್ವಂ ವೃತ್ತಂ ಚ ಭೋ ದ್ವಿಜ ।
ಶ್ರುತ್ವಾ ತದ್ವಚನಂ ತಾಸಾಂ ಪ್ರೇಷಯಾಮಾಸ ಸೇವಕಾನ್ ॥ ೬೫ ॥

ಪುಷ್ಪತೈಲಂ ದಿವ್ಯವಸ್ತ್ರಂ ಚಂದನಂ ಪರ್ಣವೀಟಿಕಾಂ ।
ಘೋಟಕಂ ಚ ತಥಾ ದತ್ವಾ ಪಿತರಂ ಪ್ರತಿ ಸುಂದರೀ ॥ ೬೬ ॥

ಗತ್ವಾಥ ಸರ್ವೇ ತೇ ಭೃತ್ಯಾಃ ಕೃತ್ವಾಶು ವೇಷಮುತ್ತಮಂ ।
ಶ್ಯಾಮಬಾಲಾಗೃಹಂ ನಿನ್ಯುರ್ದೇವರಾಜಗೃಹೋಪಮಂ ॥ ೬೭ ॥

ಶ್ಯಾಮಬಾಲಾ ತತಶ್ಚೈವ ಪಿತರಂ ದುಃಖಿನಾಂ ವರಂ ।
ಶಾಲ್ಯನ್ನಂ ಸಘೃತಂ ಚೈವ ಭೋಜಯಾಮಾಸ ಯತ್ನತಃ ॥ ೬೮॥

ತುರ್ಯೇಷು ಸಮತೀತೇಷು ದಿವಸೇಷು ತಪೋಧನ ।
ಪ್ರೇಷಯಾಮಾಸ ತಂ ದತ್ವಾ ಗುಪ್ತಪಾತ್ರಸ್ಥಿತಂ ಧನಂ ॥ ೬೯ ॥

---

೬೪. ಅವನ ಮಾತನ್ನು ಕೇಳಿ ಆಶ್ಚರ್ಯಗೊಂಡು ಒಬ್ಬರನ್ನು ನೋಡಿ ಒಬ್ಬರು ನಕ್ಕು ಅವರ ಊರಿಗೆ ಹೋದರು.

೬೫. ಎಲ್ಲ ಸಮಾಚಾರವನ್ನು ಶ್ಯಾಮಬಾಲೆಗೆ ಹೇಳಲು ಅವಳು ಅದನ್ನು ಕೇಳಿ ಅಲ್ಲಿಗೆ ಆಳುಗಳನ್ನು ಕಳುಹಿಸಿದಳು.

೬೬. ಹೂವಿನಎಣ್ಣೆ, ಒಳ್ಳೆಯ ಬಟ್ಟೆಗಳು, ಚಂದನ, ತಾಂಬೂಲ, ಕುದುರೆಗಳನ್ನು ತಂದೆಗೆ ಕೊಟ್ಟು ಕಳುಹಿಸಿದಳು.

೬೭. ಆಳುಗಳು ಅದನ್ನು ತೆಗೆದುಕೊಂಡು ಅಲ್ಲಿಗೆ ಹೋಗಿ ಅವನಿಗೆ ಒಳ್ಳೆಯ ಉಡಿಗೆ ತೊಡಿಗೆಗಳನ್ನು ಹಾಕಿ ಇಂದ್ರಭವನದಂತಿರುವ ಆ ಶ್ಯಾಮಬಾಲೆಯ ಮನೆಗೆ ಕರೆದುಕೊಂಡು ಹೋದರು.

೬೮. ಆ ಹುಡುಗಿಯು ಅನಂತರ ತಂದೆಯ ದುಃಖವನ್ನು ನೋಡಿ ಸಂತೈಸಿ ಒಳ್ಳೆಯ ಅನ್ನವನ್ನು, ತುಪ್ಪವನ್ನು ಹಾಕಿ ಭೋಜನಮಾಡಿಸಿದಳು.

೬೯. ನಾಲ್ಕು ದಿನಗಳು ಕಳೆಯಲು ಆಕೆಯು ತಂದೆಗೆ ಒಂದು ಪಾತ್ರೆಯಲ್ಲಿ ಗುಟ್ಟಾಗಿ ಹಣವನ್ನಿಟ್ಟು ಅವನಿಗೆ ಕೊಟ್ಟು ಕಳುಹಿಸಿದಳು.

ತತಃ ಪ್ರವಿಶ್ಯ ಸ್ವಗೃಹೇ ಧನಂ ಪಾತ್ರಾಂತರಸ್ಥಿತಂ ।
ದದರ್ಶಾಂಗಾರನಿಚಯಂ ರುರೋದ ಭೃಶದುಃಖಿತಃ ॥ ೭೦ ॥

ದುಹಿತುಃ ಸದನಂ ಯಾತುಂ ನಿಸಸಾರ ಗೃಹಾಗತಃ ।
ತತ್ರೈವ ಸರಸೀಕೂಲೇ ಪ್ರವಿವೇಶ ಚ ದುಃಖಿನೀ ॥ ೭೧ ॥

ತಥೈನಾಂ ಚ ಸಮಾನೀತಾಂ ಯಥಾಸ್ಯಾಃ ಪ್ರಾಣವಲ್ಲಭಾ ।
ತಥೈವ ಪೂಜಯಾಮಾಸ ಮಾತೃಸ್ನೇಹಾತ್ಪತಿವ್ರತಾ ॥ ೭೨ ॥

ಏತಸ್ಮಿನ್ ಸಮಯೇ ವಿಪ್ರ ಲಕ್ಷ್ಮೀವಾಸರಮುತ್ತಮಂ ।
ಶ್ಯಾಮಬಾಲಾ ಕಾರಯಿತುಂ ಮನಶ್ಚಕ್ರೇ ಚ ಮಾತರಂ ॥ ೭೩ ॥

ತಸ್ಯಾ ಮಾತಾ ದರಿದ್ರಾಣಿ ಭುಕ್ತ್ವಾ ಚೈಕಾಂತಿಕೇಽಪಿ ಚ ।
ಶಾವಕಾನಾಂ ತು ಚೋಚ್ಛಿಷ್ಟಂ ಲಕ್ಷ್ಮೀಕೋಪಸಮನ್ವಿತಾ ॥ ೭೪ ॥

---

೭೦. ಆಮೇಲೆ ಆತನು ತನ್ನ ಮನೆಗೆ ಹೋಗಿ ಪಾತ್ರೆಯಲ್ಲಿ ಇರುವ ಧನವನ್ನು ನೋಡಲು ಅದೆಲ್ಲವೂ ಇದ್ದಲುಪುಡಿಯಾಗಿದ್ದುವು. ಆಗ ಬಹು ದುಃಖಪಟ್ಟನು.

೭೧. ಆ ಮೇಲೆ ಆತನ ಹೆಂಡತಿಯು ಮಗಳ ಮನೆಗೆ ಹೋಗುವುದಕ್ಕೆ ಮನೆಯಿಂದ ಹೊರಟು ದುಃಖಪಡುತ್ತ ಆ ಸರೋವರದ ತೀರಕ್ಕೆ ಹೋದಳು.

೭೨. ಆಳುಗಳಿಂದ ಆಕೆಯನ್ನು ಗೌರವದಿಂದ ಕರೆಸಿಕೊಂಡಳು. ಆ ಪತಿವ್ರತೆಯು ಮಾತೃಸ್ನೇಹದಿಂದ ಪೂಜಿಸಿದಳು.

೭೩. ಇಷ್ಟರೊಳಗೆ ಲಕ್ಷ್ಮೀವಾರದ ವ್ರತವನ್ನು ತಾಯಿಗೆ ಮಾಡಿಸುವುದಕ್ಕೆ ಆ ಶ್ಯಾಮಬಾಲೆಯು ಮನಸ್ಸುಮಾಡಿದಳು.

೭೪. ಅವಳ ತಾಯಿಯು ಕಷ್ಟವನ್ನು ಬಹುವಾಗಿ ಹೊಂದಿದ್ದುದರಿಂದ ಲಕ್ಷ್ಮೀ ವ್ರತವನ್ನು ಮಾಡಿ ನವಣೆಗಳ ಪ್ರಸಾದವನ್ನು ಸ್ವೀಕರಿಸಿದಳು. ಲಕ್ಷ್ಮಿಯು ಮೂರು ವಾರಗಳ ವ್ರತ ಕಳೆಯುವವರೆಗೂ ಕೋಪದಿಂದ ಇದ್ದಳು.

ಇಂದಿರಾಯಾಸ್ತ್ರೃತೀಯಾನಿ ವಾಸರಾಣಿ ಗತಾನ್ಯಪಿ ।
ಚತುರ್ಥೇ ವಾಸರೇ ತಾಂ ತತ್ಕಾರಯಾಮಾಸ ಸಾ ದೃಢಂ ॥ ೭೫ ॥

ಆಗತಾ ನಗರಂ ಸಾ ವೈ ರಾಜ್ಞೀ ಸುರತಿಚಂದ್ರಿಕಾ ।
ದೃಷ್ಟ್ವಾ ಗೃಹಂ ತಥಾ ದಿವ್ಯಮಿಂದಿರಾಯಾಃ ಪ್ರಸಾದತಃ ॥ ೭೬ ॥

ಶ್ಯಾಮಬಾಲಾ ಚ ವಿಪ್ರೇಂದ್ರ ಕದಾಚಿತ್ಸಮಯೇ ಪುನಃ ।
ಮಾತುರ್ಗೃಹಂ ಗತಾ ಚಾಥ ಐಶ್ವರ್ಯಸ್ಯ ದಿದೃಕ್ಷಯಾ ॥ ೭೭ ॥

ಶ್ಯಾಮಬಾಲಾಂ ತತೋ ದೂರಾದ್ದೃಷ್ಟ್ವಾ ಸಂಕುಪಿತಾ ಚ ಸಾ ।
ನ ಪಶ್ಯಾಮಿ ಮುಖಂ ತಸ್ಯಾ ಇತ್ಯುಕ್ತ್ವಾಽಲಕ್ಷಿತಾ ಸ್ಥಿತಾ ॥ ೭೮ ॥

ಗತ್ವಾ ಗೃಹಾಂತರಾಳಂ ಚ ಗೃಹೀತ್ವಾ ಸೈಂಧವಂ ಚ ಸಾ ।
ಆಗತಾ ಸ್ವಗೃಹಂ ಕಿಂಚಿತ್ಪೂರ್ಣಂ ಲಕ್ಷ್ಮೀಸಮಾಶ್ರಿತಂ ॥ ೭೯ ॥

---

೭೫. ಲಕ್ಷ್ಮಿಯು ಮೂರು ವಾರಗಳು ಕಳೆದರೂ ಕೂಡ ಆಕೆಯು ಕೋಪದಿಂದಲೇ ಇದ್ದಳು. ನಾಲ್ಕನೆಯ ವಾರದಲ್ಲಿ ಒಂದೇ ಮನಸ್ಸಿನಿಂದ ಸರಿಯಾಗಿಮಾಡಿಸಿದಳು.

೭೬. ರಾಣಿಯಾದ ಸುರತಿಚಂದ್ರಿಕೆಯು ತನ್ನ ಪಟ್ಟಣಕ್ಕೆ ಬಂದಳು. ಬಂದು ಮನೆಯನ್ನು ನೋಡಲು ಅದು ಇಂದಿರೆಯ ಅನುಗ್ರಹದಿಂದ ಸರ್ವಸಮೃದ್ಧವಾಗಿದ್ದಿತು. ಹೀಗೆ ಕೆಲವು ದಿನಗಳು ಕಳೆದುವು.

೭೭. ಒಂದು ಸಾರಿ ಶ್ಯಾಮಬಾಲೆಯು ತಾಯಿಯ ಐಶ್ವರ್ಯವನ್ನು ನೋಡಬೇಕೆಂದು ತಾಯಿಯ ಮನೆಗೆ ಹೋದಳು.

೭೮. ತಾಯಿಯು ಮಗಳನ್ನು ದೂರದಿಂದಲೇ ನೋಡಿ ಕೋಪಗೊಂಡು ಅವಳ ಮುಖವನ್ನು ನೋಡುವುದಿಲ್ಲವೆಂದು ಹೇಳಿ ಕಾಣದಂತೆ ಮರೆಯಾಗಿದ್ದಳು.

೭೯. ಇದನ್ನು ನೋಡಿ ಮನಸ್ಸಿನಲ್ಲಿ ದುಃಖಹೊಂದಿದ ಈ ಶ್ಯಾಮಬಾಲೆಯು ಮನೆಯೊಳಕ್ಕೆ ಹೋಗಿ ಉಪ್ಪನ್ನು ತೆಗೆದುಕೊಂಡು ಲಕ್ಷ್ಮೀಸಂಪನ್ನವಾದ ತನ್ನ ಮನೆಗೆ ಬಂದಳು.

**ರಾಜಾ ಸ್ವಾಮೀ ಚ ಪಪ್ರಚ್ಛ ತಾಂ ಸಾಧ್ವೀಂ ಪತಿದೇವತಾಂ ।**
**ಕಿಮಾನೀತಂ ತ್ವಯಾ ಕಾಂತೇ ಕಥಯಸ್ವ ಮಮಾಗ್ರತಃ ॥ ೮೦ ॥**

**॥ ಕಾಂತೋವಾಚ ॥**

**ರಾಜ್ಯಸಾರಂ ಸಮಾನೀತಂ ದರ್ಶಯಿಷ್ಯಾಮಿ ಭೋಜನೇ ।**
**ಇತ್ಯುಕ್ತ್ವಾ ಸಾ ತದಾ ಶಾಕಂ ಕೃತ್ವಾ ಚ ಲವಣಂ ವಿನಾ ॥ ೮೧ ॥**

**ಅನ್ನಾದಿಕಂ ತತೋ ದತ್ವಾ ಮಾಲಾಧರಾಯ ಭೂಭುಜೇ ।**
**ತತೋ ಮಾಲಾಧರೋ ರಾಜಾ ವ್ಯಂಜನಂ ಲವಣಂ ವಿನಾ ॥ ೮೨ ॥**

**ಭುಕ್ತ್ವಾ ವೈಗುಣ್ಯತಾಂ ಪ್ರಾಪ್ತೋ ರಾಜಸಾರಂ ದದೌ ಚ ಸಾ ।**
**ತದಾ ಹೃಷ್ಟಮನಾ ರಾಜಾ ಭೋಜನಂ ಕೃತವಾನ್ ದ್ವಿಜ ।**
**ಪ್ರಶಶಂಸ ಚ ತಾಂ ನಾರೀಂ ಧನ್ಯಾ ಧನ್ಯಾ ಇತಿ ಬ್ರುವನ್ ॥ ೮೩ ॥**

**ಏತದ್ವ್ರತಂ ಚ ಯಾ ನಾರೀ ನ ಕರೋತಿ ಮಹಾದರಾತ್ ।**
**ಜನ್ಮಜನ್ಮನಿ ಸಾ ನಾರೀ ದರಿದ್ರಾ ದುರ್ಭಗಾ ಭವೇತ್ ॥ ೮೪ ॥**

---

೮೦. ರಾಜನಾದ ತನ್ನ ಗಂಡನು ಆ ಪತಿವ್ರತೆಯನ್ನು ಕುರಿತು ನೀನು ತವರು ಮನೆಗೆ ಹೋಗಿದ್ದೆಯಲ್ಲ! ಏನನ್ನು ತಂದಿದ್ದೀಯೆ? ನನ್ನೆದುರಿಗೆ ಹೇಳೆಂದನು.

೮೧. ಹೆಂಡತಿಯು ಹೇಳಿದಳು :—ರಾಜ್ಯದ ಸ್ಥಿರಾಂಶವನ್ನೇ ತಂದಿದ್ದೇನೆ. ಊಟಮಾಡುವಾಗ ತೋರಿಸುತ್ತೇನೆ ಎಂದು ಹೇಳಿ ಉಪ್ಪನ್ನು ಹಾಕದೆ ಅಡಿಗೆಯನ್ನು ಮಾಡಿದಳು.

೮೨. ಆ ಉಪ್ಪಿಲ್ಲದ ಅಡಿಗೆಯನ್ನು ಆ ಗಂಡನಾದ ಮಾಲಾಧರನಿಗೆ ಬಡಿಸಿದಳು. ಮಾಲಾಧರನು ಉಪ್ಪಿಲ್ಲದ ಸಪ್ಪೆ ಊಟವನ್ನು ರುಚಿ ನೋಡಿದನು. ಅದು ರುಚಿಯಿಲ್ಲದಿರಲು ಆ ರಾಜಸಾರವನ್ನು (ಉಪ್ಪನ್ನು) ಹಾಕಿದಳು.

೮೩. ಆಗ ಆ ರಾಜನು ಸಂತೋಷಗೊಂಡು ಊಟಮಾಡಿದನು. ಹೆಂಡತಿಯನ್ನು ನೀನು ಧನ್ಯೆ, ಧನ್ಯೆ, ಎಂದು ಹೊಗಳಿದನು. ಎಂದರೆ ತಂದೆಯ ಮನೆಗೆ ಹೋಗಿದ್ದೆನು. ಅಲ್ಲಿ ಉಪ್ಪಿಲ್ಲದ ಊಟವು ಹೇಗೆ ಗೌರವಾರ್ಹವಲ್ಲವೋ ಹಾಗೆ. ಗೌರವ ಸಿಕ್ಕಲಿಲ್ಲ. ಉಪ್ಪಿಲ್ಲದ ಊಟದ ಸಂತೋಷದಂತಹ ಸಂತೋಷವನ್ನು ಅಲ್ಲಿ ಅನುಭವಿಸಿದೆನು ಎಂದು ತಾತ್ಪರ್ಯ.

೮೪. ಈ ವ್ರತವನ್ನು ಮಾಡದ ಹೆಂಗಸು ದರಿದ್ರಳೂ ಕುರೂಪಿಣಿಯೂ ಆಗಿ ಜನ್ಮ ಜನ್ಮದಲ್ಲಿಯೂ ದರಿದ್ರಳಾಗುತ್ತಾಳೆ.

ಇದಂ ಯಾ ಶೃಣುಯಾದ್ಭಕ್ತ್ಯಾ ಪಠೇದ್ಯೋ ವಾ ಸಮಾಹಿತಃ ।
ಸರ್ವಪಾಪೈರ್ವಿನಿರ್ಮುಕ್ತೋ ಲಕ್ಷ್ಮೀಲೋಕಂ ಲಭೇಚ್ಚ ಸಾ ॥ ೮೫ ॥

ಇಮಾಂ ವ್ರತಕಥಾಂ ಯಾ ತು ನ ಶ್ರುತ್ವಾ ಕುರುತೇ ವ್ರತಂ ।
ತಸ್ಯಾ ವ್ರತಫಲಂ ಚೈವ ನಶ್ಯತ್ಯೇವ ನ ಸಂಶಯಃ ॥ ೮೬ ॥

## ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕಸಂವಾದೇ ಏಕಾದಶೋಽಧ್ಯಾಯಃ



---

೮೫. ಇದನ್ನು ಓದಿದವಳೂ ಕೇಳಿದವಳೂ ಪಾಪದಿಂದ ಮುಕ್ತಳಾಗಿ ಕೊನೆಯಲ್ಲಿ ಲಕ್ಷ್ಮಿಯ ಲೋಕವನ್ನು ಹೊಂದುತ್ತಾಳೆ.

೮೬. ಈ ವ್ರತದ ಕಥೆಯನ್ನು ಕೇಳದೆ ಯಾವಳು ವ್ರತವನ್ನು ಮಾಡುತ್ತಾಳೋ ಅವಳ ವ್ರತವು ನಾಶ ಹೊಂದುತ್ತದೆ ಸಂಶಯವಿಲ್ಲ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕಸಂವಾದದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ದ್ವಾ ದ ಶೋsಧ್ಯಾ ಯಃ



॥ ಶೌನಕ ಉವಾಚ ॥

ಕೇನ ಪುಣ್ಯೇನ ಭೋಸ್ಸೂತ ಚಾನ್ಯೇನ ಗತಪಾತಕಃ ।
ನರೋ ಯಾತಿ ಹರೇಃ ಸ್ಥಾನಂ ತದ್ವದಸ್ವಾನುಕಂಪಯಾ ॥ ೧ ॥

॥ ಸೂತ ಉವಾಚ ॥

ಬ್ರಾಹ್ಮಣಸ್ಯ ಧನೈಃ ಪ್ರಾಣಾನ್ ಪ್ರಾಣೈರ್ವಾಪಿ ದ್ವಿಜೋತ್ತಮ ।
ರಕ್ಷಾಂ ಕರೋತಿ ಯೋ ಮರ್ತ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೨ ॥

ಪುರಾ ರಾಜಾ ದೀನನಾಥೋ ದ್ವಾಪರಸಂಜ್ಞಕೇ ಯುಗೇ ।
ಆಸೀದಪುತ್ರೋ ಬಲವಾನ್ ವೈಷ್ಣವಸ್ಸ ತು ಯಾಜಕಃ ॥ ೩ ॥

---

## ಹನ್ನೆರಡನೆಯ ಅಧ್ಯಾಯವು

೧. ಶೌನಕನು ಹೇಳಿದನು:—ಎಲೈ ಸೂತನೇ, ಯಾವ ಬೇರೆ ಕೆಲಸದ ಪುಣ್ಯದಿಂದ ಮನುಷ್ಯನು ಪಾಪವನ್ನು ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ? ಅದನ್ನು ದಯವಿಟ್ಟು ಹೇಳು.

೨. ಸೂತನು ಹೇಳಿದನು :—ಬ್ರಾಹ್ಮಣನ ಪ್ರಾಣಗಳನ್ನು ಧನದಿಂದಲಾಗಲಿ, ಕೊನೆಗೆ ಪ್ರಾಣದಿಂದಲೇ ಆಗಲಿ ಯಾವನು ಕಾಪಾಡುತ್ತಾನೋ ಅವನು ವೈಕುಂಠವನ್ನು ಹೊಂದುತ್ತಾನೆ.

೩. ಪೂರ್ವದಲ್ಲಿ ದ್ವಾಪರಯುಗದಲ್ಲಿ ದೀನರಿಗೆ ಒಡೆಯನಾದ ದೀನನಾಥನೆಂಬ ರಾಜನಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಅವನು ವಿಷ್ಣುವನ್ನೇ ಆರಾಧಿಸುತ್ತಿದ್ದನು.

ಏಕದಾ ಗಾಲವಂ ರಾಜಾ ಪಪ್ರಚ್ಛ ವಿನಯಾನ್ವಿತಃ ।
ಕೇನ ಪುಣ್ಯೇನ ಜಾಯೇತ ಪುತ್ರೋ ವೈ ಕರುಣಾರ್ಣವ ॥ ೪ ॥

ವದಸ್ವ ಮುನಿಶಾರ್ದೂಲ ಕರಿಷ್ಯಾಮಿ ತವಾಜ್ಞಯಾ ।
ಯೇಷಾಂ ನೃಣಾಂ ನಾಸ್ತಿ ಸುತೋ ಜೀವನಂ ಹಿ ನಿರರ್ಥಕಂ ॥ ೫ ॥

॥ ಗಾಲವ ಉವಾಚ ॥
ರಾಜನ್ ಶೃಣುಷ್ವಾವಹಿತೋ ಯತ್ಪೃಷ್ಟೋಽಸ್ಮಿ ತವಾಗ್ರತಃ ।
ಕಥಯಾಮಿ ಸಮಾಸೇನ ಪುತ್ರಸ್ಯೋದ್ಭವಕಾರಣಂ ॥ ೬ ॥

ಕ್ರತುಂ ಚ ನರಮೇಧಾಖ್ಯಂ ಕುರುಷ್ವ ರಾಜಸತ್ತಮ ।
ತದಾ ತೇ ಸಂತತಿಸ್ಸ್ಯಾದ್ವೈ ಸರ್ವಲಕ್ಷಣಸಂಯುತಾ ॥ ೭ ॥

॥ ರಾಜೋವಾಚ ॥
ನರಮೇಧಂ ಮಹಾಯಜ್ಞಂ ಯಜ್ಞಾನಾಂ ಪ್ರವರಂ ದ್ವಿಜ ।
ಕೀದೃಶಂ ನರಮಾನೀಯ ಕರಿಷ್ಯಾಮಿ ಗುರೋ ವದ ॥ ೮ ॥

---

೪. ಒಂದು ಸಾರಿ ಆ ರಾಜನು ಗಾಲವನನ್ನು ಕುರಿತು ವಿನಯದಿಂದ ಯಾವ ಪುಣ್ಯಕೆಲಸ ಮಾಡಿದರೆ ಮಕ್ಕಳಾಗುತ್ತವೆ ?

೫. ಎಲೈ ಋಷಿಯೇ, ಅದನ್ನು ಹೇಳು. ನಿನ್ನ ಅಪ್ಪಣೆಯಿಂದ ಆ ಕೆಲಸವನ್ನು ಮಾಡುತ್ತೇನೆ. ಮಕ್ಕಳಿಲ್ಲದವರ ಜೀವನವು ಸಾರ್ಥಕವಿಲ್ಲವಷ್ಟೆ ?

೬. ಗಾಲವನು ಹೇಳಿದನು :—ರಾಜನೇ, ನೀನು ಕೇಳಿದುದನ್ನೇ ಹೇಳುತ್ತೇನೆ. ಏಕಾಗ್ರತೆಯಿಂದ ಕೇಳು. ಮಕ್ಕಳಾಗುವುದಕ್ಕೆ ಕಾರಣವನ್ನು ಸಂಗ್ರಹವಾಗಿ ಹೇಳು.

೭. ನರಮೇಧವೆಂಬ ಯಾಗಮಾಡು. ಆಗ ನಿನಗೆ ಎಲ್ಲಾ ಲಕ್ಷಣಗಳಿಂದಲೂ ಕೂಡಿದ ಮಗನು ಹುಟ್ಟುತ್ತಾನೆ.

೮. ರಾಜನು ಹೇಳಿದನು:—ಎಲೈ ಗಾಲವನೇ, ನರಮೇಧವೆಂಬ ಯಾಗವು ಯಜ್ಞಗಳಲ್ಲೆಲ್ಲಾ ಉತ್ತಮವಾದುದಷ್ಟೆ ? ಅದನ್ನು ಮಾಡಬೇಕಾದರೆ ಯಾವ ಲಕ್ಷಣದಿಂದ ಕೂಡಿದ ಮನುಷ್ಯನನ್ನು ತರಬೇಕು ? ಹೇಳು ?

॥ ಗಾಲವ ಉವಾಚ ॥

**ಸುಂದರಾಂಗಃ ಸುವದನಃ ಸಮಸ್ತಶಾಸ್ತ್ರವಿದ್ಭವೇತ್ ।**
**ಸತ್ಕುಲೇ ಯದಿ ಜಾತಸ್ಸ ತದಾ ಯಜ್ಞಾಯ ಕಲ್ಪತೇ ॥ ೯ ॥**

**ಅಂಗಹೀನಃ ಕೃಷ್ಣವರ್ಣೋ ಮೂರ್ಖೋಽಯೋಗ್ಯೋ ಭವೇನ್ನ ಹಿ ।**
**ಇತ್ಯುಕ್ತೇ ಗಾಲವೇ ವಿಪ್ರ ಸ ರಾಜಾ ಮನುಜೇಶ್ವರಃ ॥ ೧೦ ॥**

**ಪ್ರೇಷಯಾಮಾಸ ದೂತಾಂಶ್ಚ ಕಥಯಿತ್ವಾ ಮುನೇರ್ವಚಃ ।**
**ದ್ರವಿಣಂ ಬಹು ದತ್ವಾ ಚ ಗಾಲವಪ್ರಮುಖಾನ್ ದ್ವಿಜಾನ್ ॥ ೧೧ ॥**

**ಯಜ್ಞಾರ್ಥೇ ವರಯಾಮಾಸ ಸಮಸ್ತಶಾಸ್ತ್ರಪಾರಗಾನ್ ।**
**ತತೋ ರಾಜಾಜ್ಞಯಾ ದೂತಾ ದೇಶಂ ದೇಶಂ ಮುದಾ ಗತಾಃ ॥ ೧೨ ॥**

**ಗ್ರಾಮೇ ಗ್ರಾಮೇ ದ್ವಿಜಶ್ರೇಷ್ಠ ಪತ್ತನೇಽಪಿ ಸಮಾಹಿತಾಃ ।**
**ಕುತ್ರಾಪಿ ನ ಪ್ರಾಪ್ತವಂತೋ ಗತಾ ಜನಪದಂ ತತಃ ॥ ೧೩ ॥**

---

೯ ಗಾಲವನು ಹೇಳಿದನು :—ಸುಂದರವಾದ ಶರೀರವುಳ್ಳವನಾಗಿ ಮುಖವು ಲಕ್ಷಣವಾಗಿರಬೇಕು. ಅವನು ಶಾಸ್ತ್ರಗಳನ್ನು ಬಲ್ಲವನಾಗಿರಬೇಕು. ಸತ್ಕುಲದಲ್ಲಿ ಹುಟ್ಟಿರಬೇಕು. ಇಂಥಾವನಾಗಿರಬೇಕು.

೧೦. ಅವನು ಅಂಗಹೀನನಾಗಿರಬಾರದು. ಮೂರ್ಖನೂ ಅಯೋಗ್ಯನೂ ಆಗಿರಬಾರದು. ಎಂದು ಗಾಲವನು ಹೇಳಲು ಆ ರಾಜನು ಆಳುಗಳನ್ನು ಕರೆದು ಋಷಿಯ ಮಾತುಗಳನ್ನು ಅವರಿಗೆ ಹೇಳಿ, ಒಬ್ಬ ಮನುಷ್ಯನನ್ನು ತರುವಂತೆ ಹೇಳಿದನು.

೧೧. ಆ ಆಳುಗಳಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಕಳುಹಿಸಿ, ಯಜ್ಞಕ್ಕೋಸ್ಕರ ಸಮಸ್ತ ಶಾಸ್ತ್ರಗಳನ್ನು ಬಲ್ಲ ಬ್ರಾಹ್ಮಣರನ್ನು ಕರಿಸಿದನು.

೧೨—೧೩. ಆ ಮೇಲೆ ರಾಜನ ಅಪ್ಪಣೆಯಿಂದ ಆಳುಗಳು ದೇಶದೇಶಕ್ಕೂ, ಊರೂರಿಗೂ, ಪಟ್ಟಣಗಳಿಗೂ ಹುಡುಕುತ್ತ ಹೋಗಿ ಅಂಥವನು ಎಲ್ಲೂ ಸಿಕ್ಕದೆ ಪುನಃ ಮತ್ತೊಂದು ದೇಶಕ್ಕೆ ಹೋದರು.

ನಾಮ್ನಾ ದಶಪುರಂ ವಿಪ್ರ ಪ್ರಕೀರ್ಣಂ ಗುಣಭಿರ್ದ್ವಿಜೈಃ ।
ಯತ್ರ ನಾರೀಸ್ಸುಕೇಶೀಶ್ಚ ಮೃಗಶಾವಕಚಕ್ಷುಷಃ ॥ ೧೪ ॥

ದೃಷ್ಟ್ವಾ ಮುಹ್ಯಂತಿ ಪುರುಷಾಶ್ಚಂದ್ರಮುಖ್ಯಶ್ಚ ತಾ ಯತಃ ।
ತಸ್ಮಿನ್ಪುರೇ ಮನೋರಮ್ಯೇ ಕೃಷ್ಣದೇವ ಇತಿ ದ್ವಿಜಃ ॥ ೧೫ ॥

ಆಸೀತ್ಪುತ್ರೈಸ್ತ್ರಿಭಿಸ್ಸಾರ್ಧಂ ಭಾರ್ಯಯಾ ಚ ಸುಶೀಲಯಾ ।
ವೈಷ್ಣವಃ ಪ್ರಿಯವಾದೀ ಚ ವಿಷ್ಣುಪೂಜಾರತಸ್ಸದಾ ॥ ೧೬ ॥

ಸಾಗ್ನಿಕಃ ಪಿತೃಭಕ್ತಶ್ಚ ವೈಷ್ಣವಾನಾಂ ಪ್ರಿಯಂಕರಃ ।
ಪ್ರಾರ್ಥನಾಂ ಚಕ್ರುರಥ ತೇ ರಾಜ್ಞೋ ದೂತಾ ದ್ವಿಜೋತ್ತಮಂ ॥ ೧೭ ॥

ಪುತ್ರಂ ದೇಹೀತಿ ದೇಹೀತಿ ವದ ಬ್ರಾಹ್ಮಣಸತ್ತಮ ।
ನಾಸ್ತಿ ರಾಜ್ಞೋ ದ್ವಿಜಶ್ರೇಷ್ಠ ಪುತ್ರಸ್ಸಂತಾಪನಾಶನಃ ॥ ೧೮ ॥

---

೧೪. ಅಲ್ಲಿ ದಶಪುರವೆಂಬ ಊರು. ಆ ಊರು ಒಳ್ಳೆಯ ಗುಣಿಗಳಾದ ಬ್ರಾಹ್ಮಣರನ್ನುಳ್ಳದ್ದು. ಅಲ್ಲಿರುವ ಹೆಂಗಸರು ಒಳ್ಳೆಯ ಕೂದಲನ್ನು ಹೊಂದಿ ಹರಿಣಾಕ್ಷಿಯರಾಗಿದ್ದರು.

೧೫. ಪುರುಷರು ಅವರನ್ನು ನೋಡಿದೊಡನೆಯೇ ಮೋಹಗೊಳ್ಳುತ್ತಿದ್ದರು. ಅವರು ಆ ರೀತಿ ಚಂದ್ರನಂತೆ ಮುಖವುಳ್ಳವರಾಗಿ ಸುಂದರಿಯರಾಗಿದ್ದರು.

ಆ ಮನೋಹರವಾದ ಊರಿನಲ್ಲಿ ಕೃಷ್ಣದೇವನೆಂಬ ಬ್ರಾಹ್ಮಣನಿದ್ದನು.

೧೬—೧೭. ಅವನಿಗೆ ಸುಶೀಲೆಯೆಂಬ ಹೆಸರಿನ ಹೆಂಡತಿಯಿದ್ದಳು. ಮತ್ತು ಮೂವರು ಮಕ್ಕಳೂ ಇದ್ದರು. ಅವನು ವೈಷ್ಣವನು. ಯಾವಾಗಲೂ ಪ್ರಿಯವಾದಿಯು. ಸದಾ ವಿಷ್ಣುಪೂಜೆಯಲ್ಲಿಯೇ ಮಗ್ನವಾಗಿರುತ್ತಿದ್ದನು. ಔಪಾಸನಾಗ್ನಿಯನ್ನು ಇಟ್ಟುಕೊಂಡಿದ್ದನು. ಪಿತೃಭಕ್ತನಾಗಿದ್ದನು. ವೈಷ್ಣವರಿಗೆ ಪ್ರೀತಿಯನ್ನುಂಟು ಮಾಡುತ್ತಿದ್ದನು. ರಾಜನ ಆ ದೂತರು ಆ ಬ್ರಾಹ್ಮಣನಲ್ಲಿಗೆ ಹೋಗಿ ಪ್ರಾರ್ಥಿಸಿದರು.

೧೮. ಮಗನನ್ನು ಕೊಡು, ಮಗನನ್ನು ಕೊಡು, ಎಲೈ ಬ್ರಾಹ್ಮಣನೇ, ಕೊಡುತ್ತೇನೆ ಎಂದು ಹೇಳು. ನಮ್ಮ ರಾಜನಿಗೆ ದುಃಖನಾಶಕನಾದ ಮಗನಿಲ್ಲ.

ತದರ್ಥಂ ನರಮೇಧಾಖ್ಯೇ ಯಜ್ಞೇ ಭವ ಸದೀಕ್ಷಿತಃ ।
ನೇಷ್ಯಾಮಿ ತವ ಪುತ್ರಂ ವೈ ಬಲಿಂ ದಾತುಂ ಮಹಾಕ್ರತೌ ॥ ೧೯ ॥

ಸುವರ್ಣಾನಾಂ ಚತುರ್ಲಕ್ಷಂ ಬ್ರಹ್ಮನ್ನಯ ಸಮಾಹಿತಃ ।
ಸುಖೇನ ಯದಿ ದಾತವ್ಯೋ ನೋ ಪುತ್ರಃ ಪುತ್ರಲಾಲಸಾತ್ ॥ ೨೦ ॥

ತದಾ ಬಲೇನ ನೇಷ್ಯಾಮೋ ರಾಜಾಜ್ಞಾಕಾರಿಣೋ ವಯಂ ।
ದೂತಾನಾಂ ವಚನಂ ಶ್ರುತ್ವಾ ಬ್ರಾಹ್ಮಣೌ ಶೋಕವಿಹ್ವಲೌ ॥ ೨೧ ॥

ಅಭೂತಾಂ ವಿಗತಪ್ರಾಣಾವಿವ ಸಂಶಯಮಾನಸೌ ।
ಕಿಂ ಧನೇನ ಸುವರ್ಣೇನ ಜೀವನೇನಾಪಿ ಸದ್ಮನಾ ।
ಪ್ರೋವಾಚೇದಂ ವಚಸ್ತೋಽಪಿ ಬ್ರಾಹ್ಮಣೋ ರಾಜಪೂರುಷಾನ್ ॥ ೨೨ ॥

॥ ಬ್ರಾಹ್ಮಣ ಉವಾಚ ॥

ಯದಿ ದೂತಾಸ್ಸಮಾನೇತುಂ ಪುತ್ರಂ ಶೋಕತಮೋಪಹಂ ।
ಆಗತಾ ನಿಶ್ಚಿತಂ ಯೂಯಂ ಶೃಣುಧ್ವಂ ವಚನಂ ಮಮ ॥ ೨೩ ॥

---

೧೯. ಆದ್ದರಿಂದ ನರಮೇಧವೆಂಬ ಯಜ್ಞವನ್ನು ಮಾಡುವನು. ಅದರಲ್ಲಿ ದೀಕ್ಷಿತನಾಗಿರುವನು. ಬಲಿಯನ್ನು ಕೊಡಲು ನಿನ್ನ ಮಗನನ್ನು ಕೊಂಡೊಯ್ಯುತ್ತೇವೆ.

೨೦. ನಿನಗೆ ನಾಲ್ಕು ಲಕ್ಷ ಸುವರ್ಣ ನಾಣ್ಯಗಳನ್ನು ಕೊಡುತ್ತೇವೆ. ಮಗನ ಮೇಲಿನ ಪ್ರೀತಿಯಿಂದ ಕೊಡದಿದ್ದರೆ ಬಲಾತ್ಕಾರದಿಂದೊಯ್ಯುತ್ತೇವೆ. ರಾಜನ ಆಜ್ಞೆಯು ಆ ರೀತಿಯಾಗಿದೆ. ಅದೇ ರೀತಿ ನಾವೂ ಮಾಡುತ್ತೇವೆ.

೨೧. ದೂತರ ಮಾತನ್ನು ಕೇಳಿದ ಆ ಬ್ರಾಹ್ಮಣಬ್ರಾಹ್ಮಣಿಯರು ದುಃಖದಿಂದ ಕೂಡಿ ಪ್ರಾಣಬಿಟ್ಟವರಂತೆ ಆದರು. ಮೂರ್ಛೆಹೋಗಿ ಪ್ರಾಣವಿರುವುದೋ ಇಲ್ಲವೋ ಎಂಬ ಸಂಶಯ ಬರುವಂತಾದರು.

೨೨. ತಮಗೆ ಈ ಹಣದಿಂದಲಾಗಲಿ, ಚಿನ್ನದಿಂದಲಾಗಲಿ, ಜೀವದಿಂದಲಾಗಲಿ, ಮನೆಯಿಂದಲಾಗಲಿ, ಉಪಯೋಗವೇನು ? ಎಂಬದಾಗಿ ಆ ಬ್ರಾಹ್ಮಣನು ದೂತರನ್ನು ಕುರಿತು ಹೇಳಿದನು.

೨೩. ಬ್ರಾಹ್ಮಣನು ಹೇಳಿದನು :—ಶೋಕನಾಶಕನಾದ ಮಗನನ್ನು ಕರೆದು ಕೊಂಡೇ ಹೋಗಲು ಬಂದಿದ್ದರೆ ನನ್ನ ಮಾತನ್ನು ಸ್ವಲ್ಪ ಲಾಲಿಸಿ.

ಸ್ಥಿತ್ವಾ ಪೃಥಿವ್ಯಾಂ ಕೋ ಭ್ರಷ್ಟಾಂ ರಾಜಾಜ್ಞಾಂ ಕರ್ತುಮಿಚ್ಛತಿ ।
ಪುತ್ರಂ ಹಿತ್ವಾ ಕಿಂ ತು ಯೂಯಂ ವೃದ್ಧಂ ಮಾಂ ನಯಥ ದ್ವಿಜಂ ॥೨೪॥

ಇತಿ ತಸ್ಯ ವಚಃ ಶ್ರುತ್ವಾ ದೂತಾಃ ಕ್ರೋಧಸಮನ್ವಿತಾಃ ।
ಬಲಾತ್ಕಾರೇಣ ತದ್ಗೇಹೇ ಸುವರ್ಣಾನಿ ಚ ತತ್ಯಜುಃ ॥ ೨೫ ॥

ಯದಾ ನೇತುಂ ಮನಶ್ಚಕ್ರುಸ್ತಂ ಪುತ್ರಂ ಕಿಲ ತೇ ಕ್ರುಧಾ ।
ಬದ್ಧಾಂಜಲಿಪುಟೋ ಭೂತ್ವಾ ರುದನ್ ಪ್ರೋವಾಚ ಸ ದ್ವಿಜಃ ॥ ೨೬ ॥

ಪುತ್ರಾಣಾಂ ಜ್ಯೇಷ್ಠಪುತ್ರಂ ಮೇ ಹಿತ್ವಾನ್ಯಂ ಪುತ್ರಸತ್ತಮಂ ।
ನಯತೇತಿ ವಚೋ ವಕ್ತುಂ ವಕ್ತ್ರೇ ನಾಯಾತಿ ಹೇ ಜನಾಃ ॥ ೨೭ ॥

ದ್ವಿಜಸ್ಯ ವಚನಂ ಶ್ರುತ್ವಾ ಬ್ರಾಹ್ಮಣೀಂ ರುದತೀಂ ತದಾ ।
ಪ್ರೋಚುರ್ದೂತಾಃ ಕನೀಯಾಂಸಂ ಪುತ್ರಂ ದೇಹೀತಿ ಸತ್ತಮು ॥ ೨೮ ॥

ತೇಷಾಮಿತಿ ವಚಶ್ಶ್ರುತ್ವಾ ಬ್ರಾಹ್ಮಣೀ ಭೂಮಿತಸ್ತದಾ ।
ಪಪಾತ ವಾತ್ಯಯಾ ಸಾರ್ಧಂ ರಂಭೇವ ಭೃಶದುಃಖಿನೀ ॥ ೨೯ ॥

---

೨೪. ಭೂಮಿಯ ಮೇಲಿದ್ದುಕೊಂಡು ರಾಜಾಜ್ಞೆಯನ್ನು ಯಾವನೂ ಮೀರ ಲಾಗುವುದಿಲ್ಲ. ಆದ್ದರಿಂದ ನನ್ನ ಮಗನನ್ನು ಬಿಟ್ಟು ಮುದುಕನಾದ ನನ್ನನ್ನೇ ನೀವು ಕರೆದುಕೊಂಡು ಹೋಗಿ.

೨೫—೨೬. ಹೀಗೆಂದು ಹೇಳಿದ ಮಾತನ್ನು ಕೇಳಿ ಆ ರಾಜದೂತರು ಕೋಪಗೊಂಡು ಅವನ ಮನೆಯಲ್ಲಿ ಬಲಾತ್ಕಾರದಿಂದ ಆ ಹಣವೆಲ್ಲವನ್ನೂ ಹಾಕಿ ಆ ಮಗನನ್ನು ಕರೆದುಕೊಂಡು ಹೋಗಲು ಉಪಕ್ರಮಿಸಿದರೋ ಆಗ ಆ ಬ್ರಾಹ್ಮಣನು ಕೈಮುಗಿದುಕೊಂಡು ಅವರಿಗೆ ಇಂತೆಂದನು.

೨೭. ಹಿರಿಯ ಮಗನನ್ನು ಬಿಟ್ಟು ಉಳಿದವರಲ್ಲಿ ಒಬ್ಬನನ್ನು ಕರೆದುಕೊಂಡು ಹೋಗಿ ಎಂದು ಹೇಳಲು ಬಾಯಿ ಬರುವುದಿಲ್ಲ.

೨೮. ಬ್ರಾಹ್ಮಣನ ಈ ಮಾತನ್ನು ಕೇಳಿ ಆ ದೂತರು ಅಳುತ್ತಿರುವ ಬ್ರಾಹ್ಮ ಣನ ಹೆಂಡತಿಯನ್ನು ನೋಡಿ ಕಿರಿಯ ಮಗನನ್ನು ಕೊಡೆಂದರು.

೨೯. ಆ ದೂತರ ಈ ಮಾತನ್ನು ಕೇಳಿ ಆ ಬ್ರಾಹ್ಮಣನ ಹೆಂಡತಿಯು ಸುಂಟರಗಾಳಿಯೊಡನೆ ಬಾಳೆಯಮರವು ಕೆಳಗೆ ಬೀಳುವಂತೆ ಭೂಮಿಗೆ ಬಿದ್ದಳು.

ಮುದ್ಗರಂ ಸಾ ಸಮಾದಾಯ ಮೌಳೌ ಚಾತಾಡಯದ್ಬಲಾತ್ ।
ಕನಿಷ್ಠಂ ಮತ್ಸುತಂ ದೂತಾ ನಾಪಿ ದಾಸ್ಯಾಮಿ ಸರ್ವಥಾ ॥ ೩೦ ॥

ಏತಸ್ಮಿನ್ನಂತರೇ ವಿಪ್ರ ವಿಪ್ರಸ್ಯ ಮಧ್ಯಮಃ ಸುತಃ ।
ಪ್ರೋವಾಚ ವಿನಯಾವಿಷ್ಟಃ ಪ್ರಣಮ್ಯ ಪಿತರೌ ರುದನ್ ॥ ೩೧ ॥

ಮಾತಾ ಯದಿ ವಿಷಂ ದದ್ಯಾತ್ಪಿತ್ರಾ ವಿಕ್ರೀಯತೇ ಸುತಃ ।
ರಾಜಾ ಹರತಿ ಸರ್ವಸ್ವಂ ಕಸ್ತತ್ರ ಪಾಲಕೋ ಭವೇತ್ ॥ ೩೨ ॥

ಇತ್ಯುಕ್ತ್ವಾ ತತ್ಸುತೋ ಮೂರ್ಧ್ನಾ ಪ್ರಣಮ್ಯ ಪಿತರೌ ಸಹ ।
ದೂತೈರ್ಜಗಾಮ ತ್ವರಿತೈ ರಾಜ್ಞೋऽಸ್ಯ ದೀಕ್ಷಿತಸ್ಯ ಚ ॥ ೩೩ ॥

ಅಥ ತೌ ಬ್ರಾಹ್ಮಣೌ ಪುತ್ರವಿಚ್ಛೇದಕ್ಲಿಷ್ಟಮಾನಸೌ ।
ರುದಿತ್ವಾ ಚ ರುದಿತ್ವಾ ಚ ಅಂಧಭಾವಂ ಪ್ರಜಗ್ಮತುಃ ॥ ೩೪ ॥

---

೩೦. ಅಲ್ಲಿದ್ದ ಒನಕೆಯನ್ನು ತೆಗೆದುಕೊಂಡು ಹಣೆಯನ್ನು ಬಡಿದು ಕೊಳ್ಳುತ್ತ ಕಡೆಯವನಾದ ನನ್ನ ಮಗನನ್ನು ಖಂಡಿತವಾಗಿಯೂ ಕೊಡುವುದಿಲ್ಲ ವೆಂದಳು.

೩೧. ಇಷ್ಟರೊಳಗೆ ಆ ಬ್ರಾಹ್ಮಣನ ಮಧ್ಯಮಪುತ್ರನು ಬಂದು ಇದನ್ನು ನೋಡಿ ತಾಯಿತಂದೆಗಳಿಗೆ ನಮಸ್ಕರಿಸಿ ಅಳುತ್ತ ವಿನಯದಿಂದ ಇಂತೆಂದನು.

೩೨. ತಾಯಿ ವಿಷ ಕೊಡಲು ಮನಸ್ಸುಮಾಡಿದರೂ ತಂದೆಯು ಮಗನನ್ನು ವಿಕ್ರಯಿಸಲು ಇಚ್ಛಿಸಿದರೂ, ರಾಜನು ಪ್ರಜೆಗಳ ಸ್ವತ್ತನ್ನು ಅಪಹರಿಸಲು ಮನಸ್ಸು ಮಾಡಿದರೂ ಯಾರು ತಾನೆ ಕಾಪಾಡುತ್ತಾರೆ?

೩೩. ಹೀಗೆಂದು ಹೇಳಿ ತಾಯಿತಂದೆಗಳಿಗೆ ನಮಸ್ಕರಿಸಿ ದೂತರೊಡನೆ ಯಾಗದಲ್ಲಿ ದೀಕ್ಷೆವಹಿಸಿರುವ ರಾಜನ ಬಳಿಗೆ ಹೋದನು.

೩೪. ಆ ಮೇಲೆ ಆ ದಂಪತಿಗಳು ಮಗನ ನಾಶದಿಂದ ಅತ್ತೂ ಅತ್ತೂ ಮನಸ್ಸನ್ನು ಬೇರೆ ತಿರುಗಿಸಿದರು.

ಅಥ ತೇ ಪಥ್ಯಗಚ್ಛಂತ ವಿಶ್ವಾಮಿತ್ರಮುನೇಃ ಕಿಲ ।
ಆಶ್ರಮಂ ಶಿಷ್ಯಯುಕ್ತಂ ಚ ಸೇವಿತಂ ಮೃಗಶಾಬಕೈಃ ॥ ೩೫ ॥

ಸ ಮುನೀ ರಾಜಪುರುಷಾನ್ ದೃಷ್ಟ್ವಾ ಪಪ್ರಚ್ಛ ಸಾದರಂ ।
ಕೇ ಯೂಯಂ ಹೋ ಕುತ್ರ ಗತಾ ಯಥಾ ಕಾ ವೃತ್ತಿರುಚ್ಯತಾಂ ॥ ೩೬ ॥

॥ ರಾಜದೂತಾ ಊಚುಃ ॥
ಶೃಣುಷ್ವಾವಹಿತೋ ವಿಪ್ರ ರಾಜ್ಞಃ ಪುತ್ರೋ ನ ಜಾಯತೇ ।
ತದರ್ಥಂ ನರಮೇಧಾಖ್ಯೇ ಯಜ್ಞೇ ರಾಜಾ ಸುದೀಕ್ಷಿತಃ ॥ ೩೭ ॥

ನಯಾಮಸ್ತತ್ರ ಬಲ್ಯರ್ಥಮಿಮಂ ಬ್ರಾಹ್ಮಣಪುತ್ರಕಂ ।
ಇತಿ ತೇಷಾಂ ವಚಶ್ಶ್ರುತ್ವಾ ಸ ವಿಪ್ರಃ ಸದಯೋಽಭವತ್ ॥ ೩೮ ॥

ಪ್ರಾಣಾ ಮಮಾಪಿ ಗಚ್ಛಂತು ಸುಖೀ ಭವತು ಬಾಲಕಃ ।
ಬಾಲಕಾರ್ಥೇ ದ್ವಿಜಾರ್ಥೇ ಚ ಸ್ವಾಮ್ಯರ್ಥೇ ಯೇ ಜನಾ ಇಹ ।
ತ್ಯಜಂತಿ ತೃಣವತ್ಪ್ರಾಣಾಂಸ್ತೇಷಾಂ ಲೋಕಾಸ್ಸನಾತನಾಃ ॥ ೩೯ ॥

---

೩೫. ಆಮೇಲೆ ಅವರು ಹೋಗುತ್ತ ದಾರಿಯಲ್ಲಿ ಶಿಷ್ಯರಿಂದ ಕೂಡಿದ, ಅನೇಕ ಜಿಂಕೆಮರಿಗಳಿಂದ ಕೂಡಿದ ವಿಶ್ವಾಮಿತ್ರನ ಆಶ್ರಮವನ್ನು ಹೊಂದಿದರು.

೩೬. ಆ ಋಷಿಯು ಅವರನ್ನು ನೋಡಿ ನೀವಾರು? ಎಲ್ಲಿ ಹೋಗಿದ್ದಿರಿ? ನಿಮ್ಮ ಕೆಲಸವೇನು ? ಎಂದು ಕೇಳಿದನು.

೩೭. ರಾಜದೂತರು ಹೇಳಿದರು:- ಎಲೈ ಋಷಿಯೇ, ಕೇಳು. ರಾಜನಿಗೆ ಮಕ್ಕಳಾಗಲಿಲ್ಲ. ಅದಕ್ಕೋಸ್ಕರ ನರಮೇಧಯಾಗಮಾಡಲು ನಿಶ್ಚಯಿಸಿ ದೀಕ್ಷೆಯನ್ನು ಹೊಂದಿರುವನು.

೩೮. ಆದ್ದರಿಂದ ಆ ಯಜ್ಞದಲ್ಲಿ ಬಲಿಗೋಸ್ಕರ ಈ ಬ್ರಾಹ್ಮಣನನ್ನು ಒಯ್ಯುತ್ತೇವೆಂದರು. ಅದನ್ನು ಕೇಳಿ ಆ ಋಷಿಯು ಆ ಹುಡುಗನಲ್ಲಿ ದಯೆಯಿಟ್ಟನು.

೩೯. ನನ್ನ ಪ್ರಾಣಗಳು ಹೋದರೂ ಹೋಗಲಿ. ಈ ಹುಡುಗನು ಬದುಕಿಕೊಳ್ಳಲಿ. ಬಾಲಕ, ಬ್ರಾಹ್ಮಣ, ಸ್ವಾಮಿ, ಇವರಿಗೋಸ್ಕರ ಯಾರು ಪ್ರಾಣಗಳನ್ನು ಬಿಡುತ್ತಾರೋ ಅವರಿಗೆ ಉತ್ತಮಲೋಕಗಳು ಸಿಕ್ಕುತ್ತವೆ.

ವಿಮೃಶ್ಯೇತಿ ಮುನಿಸ್ಸ್ವಾಂತೇ ಸ ಪ್ರೋವಾಚ ದ್ವಿಜರ್ಷಭಃ ॥ ೪೦ ॥

ಯಜ್ಞೇ ಬಲಿಂ ಸಮಾದಾತುಮಿಮಂ ಬ್ರಾಹ್ಮಣಮುತ್ತಮಂ । ॥ ೪೧ ॥

ಹಿತ್ವಾ ಮಾಂ ನ ಯಥಾಥಾಶು ಹ್ಯಯಂ ಬಾಲಕ ಉತ್ತಮಃ ।
ಸಂಸಾರೇ ಜನ್ಮ ಸಂಪ್ರಾಪ್ಯ ನ ಲಬ್ಧಂ ಸುಖಮತ್ರ ಚ ॥ ೪೨ ॥

ಅನೇನ ಬಾಲಕೇನಾಪಿ ಮರಿಷ್ಯತಿ ಕಥಂ ತ್ವಯಂ ।
ಆಗತೇಽಸ್ಮಿನ್ಗೃಹಾದ್ದೂತಾಃ ಪಿತರಾವಸ್ಯ ದುಃಖಿತೌ ॥ ೪೩ ॥

ಹತಭಾಗ್ಯೌ ಗತೌ ನೂನಂ ಯಮಸ್ಯೈವ ಗೃಹಂ ಪ್ರತಿ ।
ಏವಂ ತಸ್ಯ ವಚಶ್ಶ್ರುತ್ವಾ ದೂತಾಃ ಪ್ರೋಚುರಥ ದ್ವಿಜಂ ॥ ೪೪ ॥

ಭೂಪಾಲಸ್ಯ ವಿನಾಜ್ಞಾಂ ವೈ ದೀನನಾಥಸ್ಯ ಭೂಸುರ ।
ನೇತುಂ ತ್ವಾಂ ಪಲಿತಂ ಪ್ರಾಜ್ಞ ನೇಷ್ಯಾಮೋ ಹಿ ಕಥಂ ವಯಂ ॥ ೪೫ ॥

ಏವಮುಕ್ತ್ವಾ ಚ ತೇ ದೂತಾ ಜಗ್ಮೂ ರಾಜ್ಞಃ ಪುರೀಂ ತದಾ ।
ಮುನಿಸ್ಸ ದೂತಸಂಘೈಶ್ಚ ಗತವಾನ್ಯಜ್ಞಮಂದಿರಂ ॥ ೪೬ ॥

---

೪೦-೪೨. ಈ ರೀತಿಯಾಗಿ ಮನಸ್ಸಿನಲ್ಲಿ ಆ ಋಷಿಯು ಯೋಚಿಸಿ ಅವರನ್ನು ಕುರಿತು ಯಜ್ಞದಲ್ಲಿ ಬಲಿಯನ್ನು ಕೊಡಲು ನನ್ನನ್ನು ಕರೆದುಕೊಂಡು ಹೋಗಿ ಈ ಬ್ರಾಹ್ಮಣ ಹುಡುಗನನ್ನು ಬಿಟ್ಟುಬಿಡಿ. ಸಂಸಾರದಲ್ಲಿ ಹುಟ್ಟಿ ಸುಖಲೇಶವನ್ನೂ ಈತನು ಅನುಭವಿಸಿಲ್ಲ.

೪೩. ಈ ಬಾಲಕನು ಹೇಗೆ ತಾನೇ ಸಾಯುವನು? ಎಲೈ ದೂತರಿರಾ, ಇವನು ಬಂದಮೇಲೆ ಈತನ ತಾಯಿತಂದೆಗಳು ಎಷ್ಟು ದುಃಖಿತರಾಗಿರುವರೋ?

೪೪. ಪಾಪ, ಆ ದುರದೃಷ್ಟರು ಸತ್ತಿರಬೇಕು. ಇವೇ ಮೊದಲಾದ ಮಾತನ್ನು ದೂತರು ಕೇಳಿ ಆ ಬ್ರಾಹ್ಮಣನನ್ನು ಕುರಿತು ಇಂತೆಂದರು.

೪೫. ರಾಜನಾದ ದೀನನಾಥನ ಅಪ್ಪಣೆಯಿಲ್ಲದೆ ಮುದುಕನಾದ ನಿನ್ನನ್ನು ನಾವು ಹೇಗೆ ತಾನೆ ಕರೆದುಕೊಂಡು ಹೋಗಲು ಸಾಧ್ಯ?

೪೬. ಹೀಗೆಂದು ಹೇಳಿ ಆದೂತರು ರಾಜಧಾನಿಗೆ ಹೋದರು. ವಿಶ್ವಾಮಿತ್ರನೂ ದೂತರೊಡನೆ ಆ ಯಾಗದ ಮನೆಗೆ ಹೋದನು.

ರಾಜಾನಂ ಕಥಯಾಮಾಸುರ್ದೂತಾ ವಿಪ್ರಸ್ಯ ಚೇಷ್ಟಿತಂ ।
ತಚ್ಛ್ರುತ್ವಾ ಶಂಕಿತಮನಾಃ ಪ್ರೋವಾಚೇದಂ ವಚಸ್ಸ ತಂ ॥ ೪೭ ॥

ಮುನೇ ಯದ್ಯಪಿ ಮೇ ಯಜ್ಞೇ ಕೃತೇ ಪುತ್ರೋ ಭವಿಷ್ಯತಿ ।
ಬಲಿಂ ವಿನಾಪಿ ಭೋ ಬ್ರಹ್ಮನ್ ತದಾ ವಿಪ್ರಸುತಂ ನಯ । ॥ ೪೮ ॥

॥ ಮುನಿರುವಾಚ ॥

ಯಜ್ಞೇ ತ್ವಯಿ ಕೃತೇ ರಾಜನ್ ಮಹಾಪುತ್ರೋ ಭವಿಷ್ಯತಿ ।
ಅತ್ರ ತೇ ಸಂಶಯೋ ಮಾಽಭೂದಮೋಘಮಪಿ ದರ್ಶನಂ ॥ ೪೯ ॥

ಇತಿ ತಸ್ಯ ವಚಶ್ಶ್ರುತ್ವಾ ರಾಜಾತ್ಯಂತಸಹರ್ಷಕಃ ।
ಚಕ್ರೇ ಪೂರ್ಣಾಹುತಿಂ ಯಜ್ಞೇ ಸಮಸ್ತೈರ್ಮುನಿಭಿಸ್ಸಹ ॥ ೫೦ ॥

ಅಥಾತಃ ಸ ಮುನಿಶ್ರೇಷ್ಠೋ ಬ್ರಾಹ್ಮಣಸ್ಯ ಸುತಂ ಚ ತಂ ।
ಗೃಹ್ಯ ದಶಪುರಂ ನಾಮ ನಗರಂ ಗತವಾಂಸ್ತದಾ ॥ ೫೧ ॥

---

೪೭. ರಾಜನಿಗೆ ಈ ವಿಶ್ವಾಮಿತ್ರನ ಉದ್ದೇಶವನ್ನು ದೂತರು ಹೇಳಿದರು. ಅದನ್ನು ಕೇಳಿ ರಾಜನು ಸಂದೇಹಪಟ್ಟು ಆ ಋಷಿಯನ್ನು ಕುರಿತು ಇಂತೆಂದನು.

೪೮. ಎಲೈ ಋಷಿಯೇ, ನನ್ನ ಯಜ್ಞದಲ್ಲಿ ಬಲಿಯಿಲ್ಲದೆ ಮಗನು ಹುಟ್ಟು ವುದಾದರೆ ಆಗ ನೀನು ಈ ಬಾಲಕನನ್ನು ಕೊಂಡೊಯ್ಯಬಹುದು.

೪೯. ಮುನಿಯು ಹೇಳಿದನು:—ಎಲೈ ರಾಜನೇ, ನೀನು ಯಜ್ಞವನ್ನು ಮಾಡಿದರೆ ಉತ್ತಮನಾದ ಮಗನೇ ಹುಟ್ಟುವನು. ಅವನ ದರ್ಶನವೂ ಉತ್ತಮ ವಾದುದು ಆಗುತ್ತದೆ. ವ್ಯರ್ಥವಾಗುವುದಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ.

೫೦. ಇದನ್ನು ಕೇಳಿ ರಾಜನು ಬಹು ಸಂತೋಷಪಟ್ಟು, ಎಲ್ಲಾ ಋಷಿಗಳೊ ನೆಯೂ ಕೂಡಿಕೊಂಡು ಪೂರ್ಣಾಹುತಿಯನ್ನು ಮಾಡಿದನು.

೫೧. ಆ ಮೇಲೆ ಆ ಋಷಿಯು ಬ್ರಾಹ್ಮಣನ ಮಗನನ್ನು ಕರೆದುಕೊಂಡು ದಶಪುರವೆಂಬ ಆತನ ಊರಿಗೆ ಹೋದನು.

ಭವನಂ ತಸ್ಯ ಗತ್ವಾ ಚ ಉಕ್ತವಾನ್ವಚನಂ ಮುನಿಃ ।
ಗೃಹೇ ತ್ವಾಂ ತಿಷ್ಠಸೇ ವಿಪ್ರ ತಿಷ್ಠಾಮಿ ಮೃತವನ್ಮನೇ ॥ ೫೨ ॥

ರಾಜಾ ಬಲೇನ ಮೇ ಪುತ್ರಂ ನೀತವಾನ್ಕಿಂ ಕರೋಮ್ಯಹಂ ।
ಪುತ್ರೇ ಗತೇ ಚ ಭೋ ವಿಪ್ರ ದಂಪತ್ಯೋರಾವಯೋಃ ಪುನಃ ॥ ೫೩ ॥

ಗತಾನಿ ಚಾಂಧಭಾವಂ ವೈ ಕ್ರಂದನ್ತ್ಯೈರ್ಲೋಚನಾನ್ಯಪಿ ।
ಅಥಾಸೌ ಮುನಿಶಾರ್ದೂಲಃ ಪುತ್ರಂ ಪಶ್ಯ ನಯೇತಿ ಚ ॥ ೫೪ ॥

ಉಕ್ತವಾಂಸ್ತೌ ಯದಾ ವಿಪ್ರ ಬ್ರಾಹ್ಮಣೌ ಜಾತಹರ್ಷಕೌ ।
ಪುತ್ರಾಯಾಽಽಕಾರಣಂ ಕೃತ್ವಾ ಗತಾವೇತೌ ಬಹಿಃ ಕ್ಷಣಾತ್ ॥ ೫೫ ॥

ಮುನೇರ್ವಚನಸಿದ್ಧಿತ್ವಾತ್ತತ್ಕ್ಷಣಂ ಲೋಚನಂ ತಯೋಃ ।
ಆಲೋಕಂ ತು ಗತಂ ತೂರ್ಣಂ ಪುತ್ರಸ್ಯ ದರ್ಶನಾದಪಿ ॥ ೫೬ ॥

ಪುತ್ರಸ್ಯ ಮುಖಪದ್ಮಂ ತೌ ಲೋಚನೈರಲಿಸಂನಿಭೈಃ ।
ಪೀತ್ವಾ ಮುನಿಂ ಚಿರಂ ತಂ ಚ ನಮಸ್ಕೃತ್ಯ ಪುನಃ ಪುನಃ ॥ ೫೭ ॥

---

೫೨. ಹೋಗಿ ಎಲೈ ಬ್ರಾಹ್ಮಣನೇ, ಮನೆಯಲ್ಲಿ ಸುಖವಾಗಿ ಕುಳಿತಿರುವೆಯಲ್ಲ ಎಂದನು. ಆದಕ್ಕೆ ಆ ಬ್ರಾಹ್ಮಣನು ಮುನಿಯೇ ! ಸತ್ತಂತೆ ಇದ್ದೇನೆ.

೫೩. ರಾಜನು ಬಲದಿಂದ ನನ್ನ ಮಗನನ್ನು ಕರೆದುಕೊಂಡು ಹೋದನು. ಏನು ಮಾಡಲಿ ? ಮಗನು ಹೊರಟುಹೋಗಲು ಅತ್ತು ಅತ್ತು ನಮ್ಮಿಬ್ಬರಿಗೂ ಕಣ್ಣುಗಳು ಕುರುಡಾದವು ಎಂದನು.

೫೪—೫೫. ಆ ಮೇಲೆ ಆ ವಿಶ್ವಾಮಿತ್ರಮುನಿಯು ಎಲೈ ಬ್ರಾಹ್ಮಣನೇ, ನಿನ್ನ ಮಗನನ್ನು ನೋಡು, ಕರೆದುಕೊಂಡು ಹೋಗೆಂದನು. ಆಗ ಅವರಿಬ್ಬರೂ ಹರ್ಷಿತರಾಗಿ ಮಗನನ್ನು ಕೂಗುತ್ತ ಹೊರಕ್ಕೆ ಬಂದರು.

೫೬. ಮುನಿಯ ಮಾತಿನ ಸಿದ್ಧಿಯಿಂದಲೂ ಮಗನನ್ನು ನೋಡಬೇಕೆಂಬ ಆಸೆಯಿಂದಲೂ ಅವರಿಬ್ಬರಿಗೆ ಒಡನೆಯೇ ಕಣ್ಣುಗಳು ಬಂದವು.

೫೭. ಮಗನ ಮುಖವನ್ನು ಅವರು ಚನ್ನಾಗಿ ನೋಡಿ ಆ ಋಷಿಗೆ ನಮಸ್ಕರಿಸುತ್ತ ಇಂತೆಂದರು.

ಪ್ರೋಚತುರ್ವಚನಂ ವಿಪ್ರ ಬ್ರಾಹ್ಮಣೌ ಪ್ರಿಯವಾದಿನೌ ।
ಅಹೋ ಮುನೇ ಜೀವದಾನಮಾವಯೋಽಸ್ತು ಕೃತಂ ಕಿಲ ॥ ೫೮ ॥

ತಯೋರೇವಂ ವಚಶ್ಶ್ರುತ್ವಾ ಸ ಮುನಿಃ ಕರುಣಾರ್ಣವಃ ।
ದತ್ವಾಶಿಷಂ ಚ ತೌ ವಿಪ್ರ ಜಗಾಮ ನಿಜಮಾಶ್ರಮಂ ॥ ೫೯ ॥

ಮುನಿಃ ಕರಗತಂ ಚೈವ ಶ್ರುತ್ವಾ ವಿಷ್ಣೋಃ ಪರಂ ಪದಂ ।
ತಪಸ್ತೇಪೇ ಮಹಾಭಾಗೋ ದೈವತೈರಪಿ ದುರ್ಲಭಂ ॥ ೬೦ ॥

ಕಿಂಚಿತ್ಕಾಲೇ ಗತೇ ವಿಪ್ರ ತಸ್ಯ ರಾಜ್ಞೋಽಭವತ್ಸುತಃ ।
ಸುಂದರೋ ರಾಜಯೋಗ್ಯಶ್ಚ ಇಂದುಃ ಕ್ಷೀರನಿಧಾವಿವ ॥ ೬೧ ॥

ಪುತ್ರೋತ್ಸವೇ ಸೋಽಪಿ ವಿಪ್ರ ರಾಜಾ ದತ್ವಾ ಧನಾನಿ ವೈ ।
ಬುಭುಜೇ ದೇವವದ್ಭೂಮ್ಯಾಂ ವಿಶೋಕೋ ಜಾತಕೌತುಕಃ ॥ ೬೨ ॥

ವಿಪ್ರಾನ್ಪಾಲಯತೇ ಯಸ್ತು ಪ್ರಾಣಾನ್ದತ್ವಾ ಧನಾನ್ಯಪಿ ।
ಸ ಯಾತಿ ವಿಷ್ಣುಭವನಂ ಪುನರಾವೃತ್ತಿದುರ್ಲಭಂ ॥ ೬೩ ॥

---

೫೮. ಎಲೈ ಋಷಿಯೇ, ನಮ್ಮಿಬ್ಬರಿಗೂ ನೀನು ಜೀವದಾನಮಾಡಿದೆ ಯಲ್ಲವೆ ?

೫೯. ಅವರ ಆ ಮಾತನ್ನು ಕೇಳಿ ದಯಾವಂತನಾದ ಆ ಋಷಿಯು ಅವನಿಗೆ ಆಶೀರ್ವದಿಸಿ ತನ್ನ ಆಶ್ರಮಕ್ಕೆ ಹೊರಟುಹೋದನು.

೬೦. ಆಗ ಆ ಋಷಿಯು ವೈಕುಂಠವು ಸಮೀಪದಲ್ಲಿರುವುದಾಗಿ ತಿಳಿದು ದೇವತೆಗಳಿಂದಲೂ ಮಾಡಲು ಅಸಾಧ್ಯವಾದ ತಪಸ್ಸನ್ನು ಮಾಡಿದನು.

೬೧. ಕೆಲವು ದಿನಗಳು ಕಳೆಯಲು ಆ ರಾಜನಿಗೆ ಸುಂದರನಾದ, ರಾಜ ಯೋಗ್ಯನಾದ ಮಗನು ಕ್ಷೀರಸಮುದ್ರದಲ್ಲಿ ಚಂದ್ರನು ಹುಟ್ಟಿದಂತೆ ಹುಟ್ಟಿದನು.

೬೨. ಪುತ್ರೋತ್ಸವವಾಗುತ್ತಲೂ ರಾಜನು ಬಹು ಧನವನ್ನು ದಾನಮಾಡಿ ದುಃಖವನ್ನು ಳಿದು ಹರ್ಷದಿಂದ ಭೂಮಿಯನ್ನು ಆಳಿದನು.

೬೩. ಪ್ರಾಣಗಳನ್ನಾಗಲಿ ಹಣವನ್ನಾಗಲಿ ಕೊಟ್ಟು ಯಾವನು ಬ್ರಾಹ್ಮಣ ರನ್ನು ಕಾಪಾಡುತ್ತಾನೆಯೋ ಅವನು ಪುನರಾವೃತ್ತಿಯಿಲ್ಲದ ವೈಕುಂಠವನ್ನು ಹೊಂದುತ್ತಾನೆ.

**ಪಠಂತಿ ಯೇ ಚ ಭಕ್ತ್ಯಾ ಚ ಶೃಣ್ವಂತಿ ವಿಪ್ರತಃ ಕಥಾಂ ।**
**ಅರ್ಧಂ ವಾ ಶ್ಲೋಕಮೇಕಂ ತೇ ಗಚ್ಛಂತಿ ವಿಷ್ಣುಮಂದಿರಂ ॥ ೬೪ ॥**

**ಇತಿ ಶ್ರೀಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕಸಂವಾದೇ ಬ್ರಾಹ್ಮಣಪ್ರತಿಪಾಲನಫಲ ಕಥನಂನಾಮ ದ್ವಾದಶೋಽಧ್ಯಾಯಃ**

---

೬೪. ಯಾರು ಇದನ್ನು ಓದುತ್ತಾರೋ, ಬ್ರಾಹ್ಮಣನ ಮುಖದಿಂದ ಕೇಳುತ್ತಾರೋ, ಕೊನೆಗೆ ಒಂದು ಶ್ಲೋಕ, ಇಲ್ಲವಿದ್ದರೆ ಅರ್ಧ ಶ್ಲೋಕವನ್ನಾದರೂ ಓದುತ್ತಾರೋ, ಕೇಳುತ್ತಾರೋ ಅವರು ವಿಷ್ಣುವಿನ ಮಂದಿರಕ್ಕೆ ಹೋಗುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕ ಸಂವಾದದಲ್ಲಿ ಬ್ರಾಹ್ಮಣ ಪ್ರತಿಪಾಲನ ಕಥನವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ತ್ರಯೋದಶೋಽಧ್ಯಾಯಃ



॥ ಶೌನಕ ಉವಾಚ ॥

**ಕೃಷ್ಣಜನ್ಮಾಷ್ಟಮೀ ಸೂತ ತಸ್ಯಾ ಮಾಹಾತ್ಮ್ಯಮುತ್ತಮಂ ।**
**ಕಥಯಸ್ವ ಮಹಾಪ್ರಾಜ್ಞ ಚೋದ್ಧರಸ್ವ ಮಹಾರ್ಣವಾತ್ ॥ ೧ ॥**

॥ ಸೂತ ಉವಾಚ ॥

**ಕೃಷ್ಣಜನ್ಮಾಷ್ಟಮೀಂ ಬ್ರಹ್ಮನ್ ಭಕ್ತ್ಯಾ ಕರೋತಿ ಯೋ ನರಃ ।**
**ಅಂತೇ ವಿಷ್ಣುಪುರಂ ಯಾತಿ ಕುಲಕೋಟಿಯುತೋ ದ್ವಿಜ ॥ ೨ ॥**

**ಅಷ್ಟಮೀ ಬುಧವಾರೇ ಚ ಸೋಮೇ ಚೈವ ದ್ವಿಜೋತ್ತಮ ।**
**ರೋಹಿಣೀಋಕ್ಷಸಂಯುಕ್ತಾ ಕುಲಕೋಟಿವಿಮುಕ್ತಿದಾ ॥ ೩ ॥**

---

### ಹದಿಮೂರನೆಯ ಅಧ್ಯಾಯವು.

೧. ಎಲೈ ಸೂತನೇ, ಕೃಷ್ಣಜನ್ಮಾಷ್ಟಮಿಯ ಮಹಿಮೆಯನ್ನು ಹೇಳು. ನನ್ನನ್ನು ಮಹಾಸಮುದ್ರದಿಂದ ಎತ್ತು.

೨. ಸೂತನು ಹೇಳಿದನು :—ಎಲೈ ಬ್ರಾಹ್ಮಣನೇ, ಕೃಷ್ಣಜನ್ಮಾಷ್ಟಮಿಯನ್ನು ಯಾವನು ಭಕ್ತಿಯಿಂದ ಮಾಡುತ್ತಾನೋ ಅವನು ಮೃತನಾದ ಮೇಲೆ ತನ್ನ ಕೋಟಿ ಕುಲಗಳಿಂದ ವೈಕುಂಠವನ್ನು ಹೊಂದುತ್ತಾನೆ.

೩. ಅಷ್ಟಮಿಯು ಬುಧವಾರವಾಗಲಿ ಸೋಮವಾರವಾಗಲಿ ಇದ್ದು ಅಂದೇ ರೋಹಿಣೀ ನಕ್ಷತ್ರಬಂದಿದ್ದರೆ, ಅದನ್ನು ಆಚರಿಸುವವನ ಕೋಟಿ ಕುಲಗಳಿಗೂ ಮುಕ್ತಿ ಕೊಡುತ್ತದೆ.

ಮಹಾಪಾತಕಸಂಯುಕ್ತಃ ಕರೋತಿ ವ್ರತಮುತ್ತಮಂ ।
ಸರ್ವಪಾಪವಿನಿರ್ಮುಕ್ತಶ್ಚಾಂತೇ ಯಾತಿ ಹರೇರ್ಗೃಹಂ ॥ ೪ ॥

ಕೃಷ್ಣಜನ್ಮಾಷ್ಟಮೀಂ ಬ್ರಹ್ಮನ್ ನ ಕರೋತಿ ನರಾಧಮಃ ।
ಇಹ ದುಃಖಮವಾಪ್ನೋತಿ ಸ ಪ್ರೇತ್ಯ ನರಕಂ ವ್ರಜೇತ್ ॥ ೫ ॥

ನ ಕರೋತಿ ಚ ಯಾ ನಾರೀ ಕೃಷ್ಣಜನ್ಮಾಷ್ಟಮೀವ್ರತಂ ।
ವರ್ಷೇ ವರ್ಷೇ ತು ಸಾ ಮೂಢಾ ನರಕಂ ಯಾತಿ ದಾರುಣಂ ॥ ೬ ॥

ಜನ್ಮಾಷ್ಟಮೀದಿನೇ ಯೋ ವೈ ನರೋಽಶ್ನಾತಿ ವಿಮೂಢಧೀಃ ।
ಮಹಾನರಕಮಶ್ನಾತಿ ಸತ್ಯಂ ಸತ್ಯಂ ವದಾಮ್ಯಹಂ ॥ ೭ ॥

ದಿಲೀಪೇನ ಪುರಾ ಪೃಷ್ಟೋ ವಸಿಷ್ಠೋ ಮುನಿಸತ್ತಮಃ ।
ತಚ್ಛೃಣುಷ್ವ ಮಹಾಪ್ರಾಜ್ಞ ಸರ್ವಪಾತಕನಾಶನಂ ॥ ೮ ॥

॥ ದಿಲೀಪ ಉವಾಚ ॥

ಭಾದ್ರೇ ಮಾಸೇಽಸಿತಾಷ್ಟಮ್ಯಾಂ ಯಸ್ಯಾಂ ಜಾತೋ ಜನಾರ್ದನಃ ।
ತದಹಂ ಶ್ರೋತುಮಿಚ್ಛಾಮಿ ಕಥಯಸ್ವ ಮಹಾಮುನೇ ॥ ೯ ॥

---

೪. ಮಹಾಪಾಪಿಯಾದರೂ ಈ ವ್ರತವನ್ನು ಮಾಡಿದರೆ ಪಾಪದಿಂದ ಮುಕ್ತನಾಗಿ ಸತ್ತನಂತರ ಹರಿಯ ಮನೆಗೆ ಹೋಗುತ್ತಾನೆ.

೫. ಯಾವನು ಕೃಷ್ಣಜನ್ಮಾಷ್ಟಮಿಯನ್ನು ಮಾಡುವುದಿಲ್ಲವೋ ಅವನು ಇಲ್ಲಿ ದುಃಖಗಳನ್ನು ಅನುಭವಿಸಿ ಸತ್ತನಂತರ ನರಕವನ್ನು ಹೊಂದುತ್ತಾನೆ.

೬. ಪ್ರತಿವರ್ಷವೂ ಕೃಷ್ಣಜನ್ಮಾಷ್ಟಮಿಯನ್ನು ಮಾಡದ ಹೆಂಗಸು ನರಕವನ್ನು ಹೊಂದುತ್ತಾಳೆ.

೭. ಕೃಷ್ಣಜನ್ಮಾಷ್ಟಮಿಯ ದಿನ ಯಾವನು ಊಟಮಾಡುತ್ತಾನೋ ಅವನು ಮಹಾನರಕವನ್ನು ತಿಂದ ಹಾಗೆ. ಇದು ಸತ್ಯವು, ಸಂಶಯವಿಲ್ಲ.

೮. ಪೂರ್ವದಲ್ಲಿ ದಿಲೀಪನು ವಸಿಷ್ಠನನ್ನು ಕೇಳಲು ಅವನು ಹೇಳಿದುದನ್ನು ಹೇಳುತ್ತೇನೆ, ಕೇಳು.

೯. ದಿಲೀಪನು ಹೇಳಿದನು:—ಭಾದ್ರಪದ ಕೃಷ್ಣ ಅಷ್ಟಮಿಯ ದಿನ ಕೃಷ್ಣನು ಹುಟ್ಟಿದನಷ್ಟೆ? ಅದರ ವಿಷಯವನ್ನು ಕೇಳಬೇಕೆಂದಿದ್ದೇನೆ. ಎಲೈ! ಋಷಿಯೇ, ಅದರ ವಿಷಯವನ್ನು ಹೇಳು.

ಕಥಂ ವಾ ಭಗವಾನ್ ಜಾತಃ ಶಂಖಚಕ್ರಗದಾಧರಃ ।
ದೇವಕೀಜಠರೇ ವಿಷ್ಣುಃ ಕಿಂ ಕರ್ತುಂ ಕೇನ ಹೇತುನಾ ॥ ೧೦ ॥

॥ ವಸಿಷ್ಠ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಯಸ್ಮಾಜ್ಜಾತೋ ಜನಾರ್ದನಃ ।
ಪೃಥಿವ್ಯಾಂ ತ್ರಿದಿವಂ ತ್ಯಕ್ತ್ವಾ ಭವತೇ ಕಥಯಾಮ್ಯಹಂ ॥ ೧೧ ॥

ಪುರಾ ವಸುಂಧರಾ ಹ್ಯಾಸೀತ್ಕಂಸಾದಿನೃಪಪೀಡಿತಾ ।
ಸ್ವಾಧಿಕಾರಪ್ರಯತ್ನೇನ ಕಂಸದೂತೇನ ತಾಡಿತಾ ॥ ೧೨ ॥

ಕ್ರಂದಂತೀ ಕ್ರಂದಂತೀ ಸಾ ತು ಯಯೌ ಘೂರ್ಣಿತಲೋಚನಾ ।
ಯತ್ರ ತಿಷ್ಠತಿ ದೇವೇಶ ಉಮಾಕಾಂತೋ ವೃಷಧ್ವಜಃ ॥ ೧೩ ॥

ಕಂಸೇನ ತಾಡಿತಾ ನಾಥ ಇತಿ ತಸ್ಮೈ ನಿವೇದಿತಂ ।
ಬಾಷ್ಪವಾರೀಣಿ ವರ್ಷಂತೀ ವಿವರ್ಣಾ ಸಾವಮಾನಿತಾ ॥ ೧೪ ॥

ಕ್ರಂದಂತೀಂ ತಾಂ ಸಮಾಲೋಕ್ಯ ಕೋಪೇನ ಸ್ಫುರಿತಾಧರಃ ।
ಉಮಯಾ ಸಹಿತಸ್ಸರ್ವೈರ್ದೇವವೃಂದೈರನುದ್ರುತಃ ॥ ೧೫ ॥

---

೧೦. ಶಂಖಚಕ್ರಗದಾಧರನಾದ ವಿಷ್ಣುವು ದೇವಕಿಯ ಹೊಟ್ಟೆಯಲ್ಲಿ ಹೇಗೆ ಹುಟ್ಟಿದನು ? ಏನು ಕಾರಣದಿಂದ ಹುಟ್ಟಿದನು ?

೧೧. ವಸಿಷ್ಠನು ಹೇಳಿದನು :— ಜನಾರ್ದನನು ಸ್ವರ್ಗವನ್ನು ಬಿಟ್ಟು ಭೂಮಿಯಲ್ಲಿ ಏಕೆ ಹುಟ್ಟಿದನೆಂಬುದನ್ನು ಹೇಳುತ್ತೇನೆ, ಕೇಳು.

೧೨-೧೩. ಪೂರ್ವದಲ್ಲಿ ಭೂದೇವಿಯು ಕಂಸಾದಿ ದುಷ್ಟರಿಂದ ತೊಂದರೆಪಡಿಸಲ್ಪಟ್ಟು, ಅತ್ತು ಅತ್ತು ಕಣ್ಣುಗಳನ್ನು ದಪ್ಪವಾಗಿ ಮಾಡಿಕೊಂಡು, ಈಶ್ವರನಿದ್ದಲ್ಲಿಗೆ ಹೋದಳು.

೧೪. ಕಂಸನಿಂದ ತಿರಸ್ಕರಿಸಲ್ಪಟ್ಟವಳಾಗಿ ಅವಮಾನವನ್ನು ಹೊಂದಿದೆನೆಂದು ಕಣ್ಣೀರನ್ನು ಸುರಿಸುತ್ತ ಅವನಿಗೆ ಹೇಳಿದಳು.

೧೫. ದುಃಖದಿಂದ ಅಳುತ್ತಿರುವ ಆ ಭೂಮಿಯನ್ನು ಉಮಾಸಹಿತನಾದ ಶಿವನು ನೋಡಿ ಕೋಪಗೊಂಡು ದೇವತೆಗಳೊಡನೆ ಬ್ರಹ್ಮನ ಬಳಿಗೆ ಬಂದನು.

**ಆಜಗಾಮ ಮಹಾದೇವೋ ವಿಧಾತೃಭವನಂ ರುಷಾ ।**
**ಗತ್ವಾ ಪ್ರೋವಾಚ ಬ್ರಹ್ಮಾಣಂ ಕಂಸಧ್ವಂಸನಹೇತವೇ ॥ ೧೬ ॥**

**ಉಪಾಯಃ ಸೃಜ್ಯತಾಂ ಬ್ರಹ್ಮನ್ ಭವತಾ ವಿಷ್ಣುನಾ ಸಹ ।**
**ಐಶ್ವರಂ ತದ್ವಚಶ್ಶ್ರುತ್ವಾ ಗಂತುಂ ಪ್ರಾಹ ಕೃತಾತ್ಮಭೂಃ ॥ ೧೭ ॥**

**ಕ್ಷೀರೋದೇ ಯತ್ರ ವೈಕುಂಠಃ ಸುಪ್ತೋಽಸ್ತಿ ಭುಜಗೋಪರಿ ।**
**ಹಂಸಪೃಷ್ಠಂ ಸಮಾರುಹ್ಯ ಹರೇರಂತಿಕಮಾಯಯೌ ॥ ೧೮ ॥**

**ತತ್ರ ಗತ್ವಾ ಚ ತಂ ಧಾತಾ ದೇವವರ್ಯಂದ್ಯೈರ್ಭರಾದಿಭಿಃ ।**
**ಸಂಯುಕ್ತಃ ಪ್ರಾಸ್ತವೀದ್ವಾಗ್ಮೀ ಕೋಮಲಂ ವಾಗ್ವಿದಾಂ ವರಃ ॥ ೧೯ ॥**

**ನಮಃ ಕಮಲನೇತ್ರಾಯ ಹರಯೇ ಪರಮಾತ್ಮನೇ ।**
**ಜಗತಃ ಪಾಲಯಿತ್ರೇ ಚ ಲಕ್ಷ್ಮೀಕಾಂತ ನಮೋಽಸ್ತು ತೇ ॥ ೨೦ ॥**

**ಇತಿ ತೇಭ್ಯಃ ಸ್ತುತಿಂ ಶ್ರುತ್ವಾ ಪ್ರತ್ಯುವಾಚ ಜನಾರ್ದನಃ ।**
**ದೇವಾನ್ಕ್ಲಿಷ್ಟಮುಖಾನ್ ಸರ್ವಾನ್ ಭವದ್ಭಿರಾಗತಂ ಕಥಂ ॥ ೨೧ ॥**

---

೧೬. ಅಲ್ಲಿಗೆ ಹೋಗಿ ಬ್ರಹ್ಮನನ್ನು ಕುರಿತು ಕಂಸಧ್ವಂಸಕಾರಣವಾದ ಒಂದು ಉಪಾಯವನ್ನು, ಎಲೈ ! ಬ್ರಹ್ಮನೇ, ವಿಷ್ಣುವಿನೊಡನೆ ಸೃಷ್ಟಿಸೆಂದನು.

೧೭-೧೮. ಈಶ್ವರನ ಆ ಮಾತನ್ನು ಕೇಳಿ ಹೋಗುವೆನೆಂದು ಹೇಳಿ ಬ್ರಹ್ಮನು ವಿಷ್ಣುವು ಮಲಗಿರುವ ಕ್ಷೀರಸಮುದ್ರಕ್ಕೆ ಹಂಸದಮೇಲೆ ಕುಳಿತು ಬಂದನು.

೧೯. ದೇವತೆಗಳೊಡನೆ ಅಲ್ಲಿಗೆ ಹೋದ ಆ ಬ್ರಹ್ಮನು ಜಾಣತನದಿಂದ ವಿಷ್ಣುವನ್ನು ಕುರಿತು ಇಂತೆಂದನು.

೨೦. ಕಮಲನೇತ್ರನೇ, ನಿನಗೆ ನಮಸ್ಕಾರವು. ಪರಮಾತ್ಮನಾದ ಹರಿಯೇ ನಿನಗೆ ನಮಸ್ಕಾರವು. ಲೋಕರಕ್ಷಕನಾದ ನಿನಗೆ ನಮಃ. ಲಕ್ಷ್ಮೀಕಾಂತನೇ ನಿನಗೆ ವಂದನೆಯು.

೨೧. ಇಂತು ಅವರ ಸ್ತೋತ್ರಗಳನ್ನು ಕೇಳಿ ಜನಾರ್ದನನು ಅವರನ್ನು ಕಂಗೆಟ್ಟವರನ್ನಾಗಿ ತಿಳಿದು ನೀವೇತಕ್ಕೆ ಬಂದಿರೆಂದನು.

॥ ಬ್ರಹ್ಮೋವಾಚ ॥

ಶೃಣು ದೇವ ಜಗನ್ನಾಥ ಯಸ್ಮಾದಸ್ಮಾಕಮಾಗತಂ ।
ಕಥಯಾಮಿ ಸುರಶ್ರೇಷ್ಠ ತದಹಂ ಲೋಕಭಾವನ ॥ ೨೨ ॥

ಶೂಲಿದತ್ತವರೋನ್ಮತ್ತಃ ಕಂಸೋ ರಾಜಾ ದುರಾಸದಃ ।
ವಸುಧಾ ತಾಡಿತಾ ತೇನ ಕರಘಾತೇನ ಪೀಡಿತಾ ॥ ೨೩ ॥

ವರಂ ದತ್ವಾ ಪುರಾಪ್ಯಗ್ರೇ ಮಾಯಯಾ ತು ಪ್ರವಂಚಿತಃ ।
ಭಾಗಿನೇಯಂ ವಿನಾ ಶಂಭೋ ಮರಣಂ ಭವಿತಾ ನ ಮೇ ॥ ೨೪ ॥

ತಸ್ಮಾದ್ಗಚ್ಛ ಸ್ವಯಂ ದೇವ ಕಂಸಂ ಹಂತುಂ ದುರಾಸದಂ ।
ದೇವಕೀಜಠರೇ ಜನ್ಮ ಲಬ್ಧ್ವಾ ಗತ್ವಾ ಚ ಗೋಕುಲಂ ॥ ೨೫ ॥

ಬ್ರಹ್ಮಣಾ ಪ್ರೇರಿತೋ ದೇವಃ ಪ್ರತ್ಯುವಾಚ ಚ ಶೂಲಿನಂ ।
ಪಾರ್ವತೀಂ ದೇಹಿ ದೇವೇಶ ಅಬ್ಧಂ ಸ್ಥಿತ್ವಾ ಗಮಿಷ್ಯತಿ ॥ ೨೬ ॥

---

೨೨. ಬ್ರಹ್ಮನು ಹೇಳಿದನು :—ಎಲೈ! ಜಗನ್ನಾಥನೇ, ನಾವು ಬಂದ ಕಾರಣವನ್ನು ಹೇಳುತ್ತೇವೆ, ಕೇಳು.

೨೩. ಈಶ್ವರನ ವರದಿಂದ ಮತ್ತನಾದ ಕಂಸನು ತಡೆಯಲಸಾಧ್ಯನಾಗಿದ್ದಾನೆ. ವಸುಧೆಯನ್ನು ಹೊಡೆದು ಬಡಿದು ಕರವನ್ನು ಹಿಡಿದು ಎಳೆದು ಪೀಡಿಸುತ್ತಲಿದ್ದಾನೆ.

೨೪. ಮೊದಲು ಶಂಭುವು ವರವನ್ನು ಕೊಟ್ಟು ಆಮೇಲೆ ಮಾಯೆಯಿಂದ ವಂಚಿಸಿ ಸೋದರಿಯ ಮಗನಿಂದ ಮರಣವನ್ನು ಹೊಂದುವಂತೆ ಕೇಳುವಂತೆ ಮಾಡಿದ್ದಾನೆ.

೨೫. ಆದ್ದರಿಂದ ಆ ಕಂಸನನ್ನು ಕೊಲ್ಲಲು ದೇವಕಿಯ ಹೊಟ್ಟೆಯಲ್ಲಿ ಹುಟ್ಟಿ ಗೋಕುಲಕ್ಕೆ ಹೋಗು.

೨೬. ಬ್ರಹ್ಮನು ಹೀಗೆ ಹೇಳಲು ಆ ಜಗನ್ನಾಥನು ಶಂಭುವನ್ನು ಕುರಿತು ಎಲೈ! ಶಂಭುವೇ, ಪಾರ್ವತಿಯನ್ನು ಕಳುಹಿಸಿಕೊಡು, ಒಂದು ವರ್ಷವಿದ್ದು ಬರುವಳು. ಎಂದನು.

**ಉಮಯಾ ರಕ್ಷಯಾ ಸಾರ್ಧಂ ಶಂಖಚಕ್ರಗದಾಧರಃ ।**
**ಉದ್ದಿಶ್ಯ ಮಧುರಾಂ ಚಕ್ರೇ ಪ್ರಯಾಣಂ ಕಮಲಾಸನಃ ॥ ೨೭ ॥**

**ದೇವಕೀಜಠರೇ ಜನ್ಮ ಲೇಭೇ ತತ್ರ ಗದಾಧರಃ ।**
**ಯಶೋದಾಕುಕ್ಷಿಮಧ್ಯಾಸ್ತೇ ಶರ್ವಾಣೀ ಮೃಗಲೋಚನಾ ॥ ೨೮ ॥**

**ನವಮಾಸಾಂಶ್ಚ ವಿಶ್ರಮ್ಯ ಕುಕ್ಷೌ ನವದಿನಾಂತಕಾನ್ ।**
**ಭಾದ್ರೇ ಮಾಸ್ಯಸಿತೇ ಪಕ್ಷೇ ಚಾಷ್ಟಮೀಸಂಜ್ಞಕಾ ತಿಥಿಃ ॥ ೨೯ ॥**

**ರೋಹಿಣೀತಾರಕಾಯುಕ್ತಾ ರಜನೀ ಘನಘೋಷಿತಾ ।**
**ತಸ್ಯಾಂ ಜಾತೋ ಜಗನ್ನಾಥಃ ಕಂಸಾರಿರ್ವಸುದೇವಜಃ ॥ ೩೦ ॥**

**ವೈರಾಟೀ ನಂದಪತ್ನೀ ಚ ಯಶೋದಾಽಜೀಜನತ್ಸುತಾಂ ।**
**ಪುತ್ರಂ ಪದ್ಮಕರಂ ಪದ್ಮನಾಭಂ ಪದ್ಮದಲೇಕ್ಷಣಂ ॥ ೩೧ ॥**

**ತದಾ ಹರ್ಷಿತುಮಾರೇಭೇ ದೃಷ್ಟ್ವಾ ಆನಕದುಂದುಭಿಃ ।**
**ಕಂಸಾಸುರಭಯತ್ರಸ್ತಾ ಪ್ರೋವಾಚ ದೇವಕೀ ತದಾ ॥ ೩೨ ॥**

---

೨೭. ಉಮೆಯನ್ನು ರಕ್ಷಕಳನ್ನಾಗಿಟ್ಟುಕೊಂಡು ಆ ಜಗನ್ನಾಥನು ಮಧುರೆಯನ್ನು ಕುರಿತು ಹೊರಟನು. ಇತ್ತ ಬ್ರಹ್ಮಾದಿಗಳು ಹೊರಟುಹೋದರು.

೨೮. ದೇವಕಿಯ ಹೊಟ್ಟೆಯಲ್ಲಿ ವಿಷ್ಣುವು ಜನ್ಮವನ್ನು ತಾಳಿದನು. ಯಶೋದೆಯಲ್ಲಿ ಪಾರ್ವತಿಯು ಜನ್ಮವನ್ನು ಹೊಂದಿದಳು.

೨೯-೩೦. ಅಲ್ಲಿ ಅವರು ಒಂಭತ್ತು ತಿಂಗಳುಗಳನ್ನು ಒಂಭತ್ತು ದಿನಗಳನ್ನಾಗಿ ಕಳೆದು ಭಾದ್ರಪದಮಾಸದ ಕೃಷ್ಣಪಕ್ಷದ ಅಷ್ಟಮಿಯಲ್ಲಿ ರೋಹಿಣೀನಕ್ಷತ್ರವಿರಲು ಆ ರಾತ್ರಿಯು ಮೋಡಗಳಿಂದ ಧ್ವನಿಗೈಯುತ್ತಿರಲು ಕಂಸಾರಿಯಾದ ಸ್ವಾಮಿಯು ಆಗ ಅವತರಿಸಿದನು.

೩೧. ನಂದನ ಹೆಂಡತಿಯಾದ ವಿರಾಟದೇಶದ ಆ ಯಶೋದೆಯು ಮಗಳನ್ನು ಹೆತ್ತಳು. ಕೈಯಲ್ಲಿ ಕಮಲವುಳ್ಳ ಪದ್ಮನಾಭನನ್ನು ಈ ದೇವಿಯು ಹೆತ್ತಳು.

೩೨. ಆ ಮಗುವನ್ನು ನೋಡಿ ವಸುದೇವನು ಸಂತೋಷಪಟ್ಟನು. ಕಂಸನ ಭಯದಿಂದ ಹೆದರಿದ ಆ ದೇವಕಿಯು ಹೇಳಿದಳು.

ನೈರಾಟೀಂ ಗಚ್ಛ ಭೋ ನಾಥ ಸುತಂ ಪ್ರತ್ಯರ್ಪಿತುಂ ಕಿಲ ।
ಪುತ್ರಂ ದತ್ವಾ ಯಶೋದಾಯ್ಯೈ ಸುತಾಂ ತಸ್ಯಾಸ್ಸಮಾನಯ ॥ ೩೩ ॥

ತಸ್ಯಾ ವಚಸ್ಸಮಾಕರ್ಣ್ಯ ವಸುದೇವೋಽಪಿ ದುಃಖಿತಃ ।
ಅಂಕೇ ಕುಮಾರಮಾದಾಯ ನೈರಾಟ್ಯಭಿಮುಖಂ ಯಯೌ ॥ ೩೪ ॥

ಯಮುನಾ ಜಲಸಂಪೂರ್ಣಾ ತತ್ಪಥೇ ಮಧ್ಯವರ್ತಿನೀ ।
ಆಸೀದ್ಘೋರಾ ಮಹಾದೀರ್ಘಾ ಗಂಭಿರೋದಕಪೂರಭಾಕ್ ॥ ೩೫ ॥

ಏವಂ ದೃಷ್ಟ್ವಾ ತಟೇ ಸ್ಥಿತ್ವಾ ಯಮುನಾಮವಲೋಕಯನ್ ।
ವಸುದೇವೋಽಪಿ ದುಃಖಾರ್ತೋ ವಿಲಲಾಪಾತಿಚಿಂತಯಾ ॥ ೩೬ ॥

ಕಿಂ ಕರೋಮಿ ಕ್ವ ಗಚ್ಛಾಮಿ ವಿಧಿನಾಪಿ ಹಿ ವಂಚಿತಃ ।
ಕಥಮತ್ರ ಗಮಿಷ್ಯಾಮಿ ನೈರಾಟೀಂ ನಂದಮಂದಿರಂ ॥ ೩೭ ॥

ಹರಿಣಾ ತತ್ರ ಸಾನಂದಂ ಮಾಯಯಾ ವಂಚಿತಃ ಪಿತಾ ।
ಕ್ಷಣಮಾತ್ರಂ ತಟೇ ಸ್ಥಿತ್ವಾ ಯಮುನಾಮವಲೋಕಯನ್ ॥ ೩೮ ॥

---

೩೩. ಎಲೈ ! ಸ್ವಾಮಿಯೇ, ನೀನು ವಿರಾಟದೇಶದ ಯಶೋದೆಯ ಬಳಿಗೆ ಹೋಗಿ ಈ ಗಂಡುಮಗುವನ್ನು ಅವಳಿಗೆ ಕೊಟ್ಟು ಅವಳ ಹೆಣ್ಣು ಮಗುವನ್ನು ತೆಗೆದುಕೊಂಡು ಬಾ.

೩೪. ಅವಳ ಆ ಮಾತನ್ನು ಕೇಳಿ ವಸುದೇವನು ದುಃಖಿಸುತ್ತ ಕೈಯಲ್ಲಿ ಮಗುವನ್ನು ತೆಗೆದುಕೊಂಡು ಆ ಯಶೋದೆಯ ಬಳಿಗೆ ಹೊರಟನು.

೩೫. ಯಮುನೆಯು ದಾರಿಯ ಮಧ್ಯದಲ್ಲಿ ಪೂರ್ಣಪ್ರವಾಹಹೊಂದಿ ಘೋರವಾಗಿದ್ದಿತು.

೩೬. ಇದನ್ನು ನೋಡಿ ದಡದಲ್ಲಿ ನಿಂತು ಯಮುನೆಯನ್ನು ನೋಡುತ್ತ ವಸುದೇವನು ದುಃಖಪಡುತ್ತಿದ್ದನು.

೩೭. ಏನು ಮಾಡಲಿ ? ಎಲ್ಲಿ ಹೋಗಲಿ ? ವಿಧಿಯು ವಂಚಿಸಿತಲ್ಲ. ನಂದನ ಮನೆಗೆ ಹೇಗೆ ಹೋಗಲಿ ?

೩೮. ಮಾಯೆಯಿಂದ ವಂಚಿತನಾದ ವಸುದೇವನು ಇಂತು ನೋಡುತ್ತ ದಡದಲ್ಲಿ ನಿಂತಿದ್ದನು.

ತೇನ ದೃಷ್ಟ್ವಾ ಪುನಸ್ಸಾಪಿ ಕ್ಷಣಾಜ್ಜಾನುವಹಾಽಭವತ್ ।
ತಾಂ ದೃಷ್ಟ್ವಾ ಹೃಷ್ಟ ಉತ್ತಸ್ಥೌ ಪ್ರಸ್ಥಾನಮಕರೋದ್ಯಥಾ
ಮಾಯಾಂ ಕೃತ್ವಾ ಜಗನ್ನಾಥಃ ಪಿತುರಂಕಾಜ್ಜಲೇ ಪತತ್ ॥ ೩೯ ॥

ತಂ ಪುತ್ರಂ ಪತಿತಂ ದೃಷ್ಟ್ವಾ ಹಾಹಾ ಕೃತ್ವಾ ಸುದುಃಖಿತಃ ।
ಮಹಾಪಾಪಂ ಪುನಃ ಕರ್ತುಂ ವಿಧಿನಾ ತೇನ ವಂಚಿತಃ ॥ ೪೦ ॥

ತ್ರಾಹಿ ಮಾಂ ಜಗತಾಂ ನಾಥ ಸುತಂ ರಕ್ಷ ಸುರೋತ್ತಮ ।
ಜನಕಕ್ರಂದಿತಂ ದೃಷ್ಟ್ವಾ ಕಂಸಾರಿಃ ಕೃಪಯಾ ಮುಹುಃ ॥ ೪೧ ॥

ಜಲಕ್ರಿಡಾಂ ಸಮಾಚರ್ಯ ಪಿತುಃ ಕ್ರೋಡಮಗಾತ್ಪುನಃ ।
ಯಥಾ ತೇನ ಯದುಶ್ರೇಷ್ಠೋ ಜಗಾಮ ನಂದಮಂದಿರಂ ॥ ೪೨ ॥

ಸುತಂ ದತ್ವಾ ಯಶೋದಾಯೈ ಸುತಾಂ ತಸ್ಯಾಸ್ಸಮಾನಯತ್ ।
ನಿಜಾಗಾರಂ ತತಃ ಪ್ರಾಪ್ಯ ಪತ್ನ್ಯೈ ಪ್ರತ್ಯರ್ಪಿತಾ ಸುತಾ ॥ ೪೩ ॥

---

೩೯. ಪುನಃ ನೋಡಲು ಆ ನದಿಯು ಮಂಡಿಯುದ್ದಕ್ಕೆ ಕಂಡುಬಂದಿತು. ಅದನ್ನು ನೋಡಿ ಎದ್ದು ಹೊರಡಲು ಅನುವಾದನು. ಆಗ ಮಾಯೆಯಿಂದ ಆ ಹರಿಯು ಆ ವಸುದೇವನ ಕೈಯಿಂದ ಕೆಳಗೆ ಬಿದ್ದನು.

೪೦. ಬಿದ್ದ ಆ ಮಗುವನ್ನು ನೋಡಿ ಹಾ ಹಾ ಎಂದು ದುಃಖಿಸುತ್ತ ಪುನಃ ಪಾಪಮಾಡಲು ವಿಧಿಯು ನನ್ನನ್ನು ವಂಚಿಸಿದನು.

೪೧-೪೨. ಎಲೈ! ಜಗನ್ನಾಥನೇ, ನನ್ನನ್ನು ಕಾಪಾಡು ಎಂದು ದುಃಖಿಸುತ್ತಿರಲು ಆ ದುಃಖವನ್ನು ಕೇಳಿ ಕೃಪೆಯಿಂದ ಕೃಷ್ಣನು ಜಲಕ್ರೀಡೆಯನ್ನಾಡಿ ಮತ್ತೆ ಆ ವಸುದೇವನ ಕೈಗೆ ಬಂದನು. ಅವನನ್ನು ತೆಗೆದುಕೊಂಡು ವಸುದೇವನು ನಂದನ ಮನೆಗೆ ಹೋದನು.

೪೩. ಯಶೋದೆಗೆ ಈ ಮಗುವನ್ನು ಕೊಟ್ಟು ಅವಳ ಹೆಣ್ಣು ಮಗುವನ್ನು ತಂದನು. ತನ್ನ ಮನೆಗೆ ಬಂದು ದೇವಕಿಗೆ ಆ ಮಗುವನ್ನು ಕೊಟ್ಟನು.

ದೇವಕೀ ಚ ಪ್ರಸೂತೇತಿ ವಾರ್ತಾಂ ಶ್ರುತ್ವಾ ಸುರಾರಿಣಾ ।
ಆನೇತುಂ ಪ್ರಸ್ಥಿತಾ ದೂತಾಃ ಸುತಂ ದುಹಿತರಂ ತದಾ ॥ ೪೪ ॥

ಆಗತ್ಯ ಕಂಸದೂತಾಸ್ತೇ ಸುತಾಂ ನೇತುಂ ಪ್ರಚಕ್ರಮುಃ ।
ಬಲಾದೇನಾಂ ಸಮಾಕೃಷ್ಯ ದೇವಕೀವಸುದೇವಯೋಃ ॥ ೪೫ ॥

ಕಂಸದೂತೈರ್ಗೃಹೀತ್ವಾ ಸಾ ಅರ್ಪಿತಾ ತು ಸುರಾರಿಣೇ ।
ಸ ಧೃತ್ವಾ ತಾಂ ಮಹಾರಾಜಃ ಸಭಯೋಽಭೂದ್ದುರಾಸದಃ ॥ ೪೬ ॥

ಶುದ್ಧಕಾಂಚನವರ್ಣಾಭಾಂ ಪೂರ್ಣೇಂದುಸದೃಶಾನನಾಂ ।
ಕಂಸೋ ಹಸತಿ ತಾಂ ದೃಷ್ಟ್ವಾ ವಿದ್ಯುತ್ಸ್ಫುರಿತಲೋಚನಾಂ ॥ ೪೭ ॥

ಆದಿದೇಶಾಸುರಶ್ರೇಷ್ಠೋ ಜಹಿ ನೀತ್ವಾ ಶಿಲೋಪರಿ ।
ಆಜ್ಞಾಂ ಲಬ್ಧ್ವಾಸುರಾಸ್ತೇ ವೈ ನಿಷ್ಪೇಷ್ಟುಂ ತಾಂ ಪ್ರವರ್ತಿತಾಃ ।
ವಿದ್ಯುಚ್ಚೀಘ್ರತರಾ ಗೌರೀ ಜಗಾಮ ಸಹಸಾಂಬರಂ ॥ ೪೮ ॥

---

೪೪. ದೇವಕಿಯು ಹೆತ್ತಳೆಂದು ಕೇಳಿ ಆ ಕಂಸನು ಆ ಮಗುವನ್ನು ತರುವಂತೆ ಆಳುಗಳನ್ನು ಕಳುಹಿಸಿದನು.

೪೫. ಕಂಸದೂತರು ದೇವಕೀವಸುದೇವರಿಂದ ಮಗುವನ್ನು ಬಲಾತ್ಕಾರದಿಂದ ಕಸಿದುಕೊಂಡು ಹೋಗಲು ಬಂದರು.

೪೬. ಕಂಸನ ದೂತರು ಆ ಮಗುವನ್ನು ತೆಗೆದುಕೊಂಡು ಹೋಗಿ ಕಂಸನಿಗೆ ಕೊಟ್ಟರು. ಆ ಮಗುವನ್ನು ಮುಟ್ಟುತ್ತಲೂ ಅವನಿಗೂ ಅದು ಭಯವಾಗುವಂತೆ ಮಾಡಿತು.

೪೭. ಶುದ್ಧವಾದ ಚಿನ್ನದ ಬಣ್ಣವುಳ್ಳ, ಪೂರ್ಣೇಂದುವಂತೆ ಮುಖವುಳ್ಳ, ಮಿಂಚಿನಂತೆ ಕಣ್ಣುಳ್ಳ ಆ ಮಗುವನ್ನು ನೋಡಿ ಕಂಸನು ನಕ್ಕನು.

೪೮. ಆಗ ಕಂಸನು ಇದನ್ನು ಆ ಕಲ್ಲಿನಮೇಲೆ ಬಡಿದು ಕೊಲ್ಲಿರಿ ಎಂದು ಆಜ್ಞಾಪಿಸಿದನು. ಆ ಅಸುರರು ಅವನ ಆಜ್ಞೆಯಂತೆ ಕೊಲ್ಲಲು ಹೋದಾಗ ಮಿಂಚಿನಂತೆ ವೇಗವುಳ್ಳ ಆ ಮಗುವು ಸರ್ರನೆ ಅಂತರಿಕ್ಷಕ್ಕೆ ಹಾರಿತು.

॥ ಗೌರ್ಯುವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಯತ್ರಾಸ್ತೇ ಶತ್ರುರುತ್ತಮಃ ।
ನಂದಸ್ಯ ನಿಲಯೇ ಗುಪ್ತಸ್ತವ ಹಂತಾಸುರೋತ್ತಮ ॥ ೪೯ ॥

॥ ವಸಿಷ್ಠ ಉವಾಚ ॥

ಏವಮುಕ್ತ್ವಾ ತು ಸಾ ದೇವೀ ಜಗಾಮ ನಿಜಮಂದಿರಂ ।
ಶ್ರುತ್ವಾ ವಾಕ್ಯಂ ತತೋ ದೇವ್ಯಾಃ ಕಂಸೋ ರಾಜಾ ಸುದುಃಖಿತಃ ।
ಭಗನೀಂ ಪೂತನಾಮಾಹ ಗಚ್ಛ ತ್ವಂ ನಂದಮಂದಿರಂ ॥ ೫೦ ॥

ಛದ್ಮನಾ ತತ್ಸುತಂ ಹತ್ವಾಽಽಗಚ್ಛ ತೇ ವಾಂಛಿತಂ ಬಹು ।
ದಾಸ್ಯಾಮಿ ಶತ್ರುಂ ಹಂತುಂ ಮೇ ವ್ರಜ ಶೀಘ್ರತರಂ ಶುಭೇ ॥ ೫೧ ॥

ಆಜ್ಞಾಂ ಪ್ರಾಪ್ಯ ರಾಕ್ಷಸೀ ಸಾ ಗೋಕುಲಾಭಿಮುಖಂ ಗತಾ ।
ಮಾಯಯಾ ಸುಂದರೀರೂಪಾ ಪ್ರವಿಷ್ಟಾ ತತ್ರ ಗೋಕುಲೇ ॥ ೫೨ ॥

ಪಯೋಧರೇ ಗರಂ ಸಾ ತು ಧೃತ್ವಾ ಹಂತುಮುಪಾಗತಾ ।
ಪಶುಪಾನಾಂ ಗೃಹದ್ವಾರಿ ಪ್ರವಿಷ್ಟಾಲಕ್ಷಿತೇತಿ ಚ ॥ ೫೩ ॥

---

೪೯. ಗೌರಿಯು ಹೇಳಿದನು :—ಎಲೈ ! ರಾಜನೇ, ನಿನ್ನ ಶತ್ರುವೆಲ್ಲಿರುವನೆಂಬುದನ್ನು ಹೇಳುತ್ತೇನೆ, ಕೇಳು. ನಿನ್ನನ್ನು ಕೊಲ್ಲುವ ಆ ಸುರೋತ್ತಮನು ನಂದನ ಮನೆಯಲ್ಲಿ ಗುಟ್ಟಾಗಿದ್ದಾನೆ.

೫೦. ವಸಿಷ್ಠನು ಹೇಳಿದನು :—ಹೀಗೆಂದು ಹೇಳಿ ಆ ಮಾಯೆಯು ತನ್ನ ಸ್ಥಾನಕ್ಕೆ ಹೋದಳು. ಈ ಮಾತನ್ನು ಕೇಳಿ ಕಂಸನು ದುಃಖಗೊಂಡನು.

೫೧. ಸೋದರಿಯಾದ ಪೂತನಿಗೆ ನೀನು ನಂದಮಂದಿರಕ್ಕೆ ಹೋಗೆಂದು ಹೇಳಿದನು. ಕಪಟದಿಂದ ಆ ಶತ್ರುವನ್ನು ಕೊಂದು ಬಾ. ಆ ಶತ್ರುವನ್ನು ಕೊಲ್ಲಲು ನಿನಗೆ ಬೇಕಾದುದನ್ನು ಕೊಡುತ್ತೇನೆ.

೫೨. ಆಜ್ಞಪ್ತಳಾದ ಆಕೆಯು ಗೋಕುಲಕ್ಕೆ ಹೊರಟಳು. ಮಾಯೆಯಿಂದ ಅತಿ ಸುಂದರಿಯಾಗಿ ಗೋಕುಲವನ್ನು ಹೊಕ್ಕಳು.

೫೩. ಸ್ತನಗಳಲ್ಲಿ ವಿಷವನ್ನು ತುಂಬಿಕೊಂಡು ಈ ಪಶುಪಾಲರ ಮನೆಗೆ ಬಂದು ಕಾಣದಂತಿದ್ದಳು.

ಗತ್ವಾಂತರುತ್ಥಾಪ್ಯ ಶಿಶುಂ ಸ್ತನಂ ದತ್ವಾಽಽಪ ಸದ್ಗತಿಂ ।
ತತಸ್ತು ಶಕಟಂ ಕ್ಷಿಪ್ತ್ವಾ ತೃಣಾವರ್ತಾದಿಮರ್ದನಂ ॥ ೫೪ ॥

ಕಾಳೀಯಮರ್ದನಂ ಕೃತ್ವಾ ಗತೋ ಮಧುಪುರೀಂ ತತಃ ।
ಗತ್ವಾ ಹಂಸೋ ಹತಃ ಕ್ರೂರಃ ಕಂಸಮಲ್ಲಾನಜೀಜಯತ್ ॥ ೫೫ ॥

ಏತತ್ತೇ ಕಥಿತಂ ರಾಜನ್ ವಿಷ್ಣೋರ್ಜನ್ಮದಿನವ್ರತಂ ।
ಶ್ರುತ್ವಾ ಪಾಪಾನಿ ನಶ್ಯಂತಿ ಕುರ್ಯಾತ್ಕಿಂ ವಾ ಭವಿಷ್ಯತಿ ॥ ೫೬ ॥

ಯ ಇದಂ ಕುರುತೇ ಮರ್ತ್ಯೋ ಯಾ ಚ ನಾರೀ ಹರೇರ್ವ್ರತಂ ।
ಐಶ್ವರ್ಯಮತುಲಂ ಪ್ರಾಪ್ಯ ಜನ್ಮನ್ಯತ್ರ ಯಥೇಪ್ಸಿತಂ ॥ ೫೭ ॥

ಪೂರ್ವವಿದ್ಧಾ ನ ಕರ್ತವ್ಯಾ ತೃತೀಯಾ ಷಷ್ಠಿರೇವ ಚ ।
ಅಷ್ಟಮ್ಯೇಕಾದಶೀಭೂತಾ ಧರ್ಮಕಾಮಾರ್ಥವಾಂಛಿಭಿಃ ॥ ೫೮ ॥

ವರ್ಜಯಿತ್ವಾ ಪ್ರಯತ್ನೇನ ಸಪ್ತಮೀಸಂಯುತಾಷ್ಟಮೀಂ ।
ವಿನಾಋಕ್ಷಂ ಪ್ರಕರ್ತವ್ಯಾ ನವಮೀಸಂಯುತಾಷ್ಟಮೀ ॥ ೫೯ ॥

---

೫೪. ಒಳಗೆ ಹೋಗಿ ಮಗುವನ್ನು ಎಬ್ಬಿಸಿ ಮೊಲೆಕೊಟ್ಟು ಆ ಮಗುವು ಜೀವನಾಡಿಯನ್ನೇ ಹೀರಲಾಗಿ ಆಕೆಯು ಸದ್ಗತಿಯನ್ನು ಹೊಂದಿದಳು. ಅನಂತರ ತೃಣಾವರ್ತ, ಶಕಟಾಸುರರನ್ನು ಕೊಂದನು.

೫೫. ಅನಂತರ ಕಾಳೀಯನೆಂಬ ಸರ್ಪವನ್ನು ಮರ್ದಿಸಿ ಮಥುರಾಪುರಿಗೆ ಹೋಗಿ ಕಂಸನನ್ನು ಕೊಂದು ಕಂಸನ ಆಳುಗಳನ್ನು ಜಯಿಸಿದನು.

೫೬. ಈ ರೀತಿಯಾಗಿ ಎಲೈ! ದೊರೆಯೇ, ವಿಷ್ಣುವಿನ ಜನ್ಮದಿನವ್ರತವನ್ನು ಹೇಳಿದ್ದೇನೆ. ಇದನ್ನು ಕೇಳಿದರೆ ಪಾಪವೆಲ್ಲವೂ ನಾಶವಾಗಿ ಬೇಕಾದುದು ಫಲಿಸುತ್ತದೆ.

೫೭. ಗಂಡಸು, ಹೆಂಗಸು ಯಾರೇ ಇದನ್ನು ಮಾಡಿದರೂ ಬಹು ಐಶ್ವರ್ಯವನ್ನು ಹೊಂದಿ ಸುಖವಾಗಿರುತ್ತಾರೆ.

೫೮. ಧರ್ಮಕಾಮಗಳನ್ನು ಅಪೇಕ್ಷಿಸುವವರು ಪೂರ್ವವಿದ್ಧವಾದ ತದಿಗೆ, ಷಷ್ಠಿ, ಅಷ್ಟಮಿ, ಏಕಾದಶಿಗಳನ್ನು ಮಾಡಬಾರದು. (ವಿದ್ಧವೆಂದರೆ ಬೆರೆತಿರುವುದು).

೫೯. ಆದ್ದರಿಂದ ಸಪ್ತಮಿಯಿಂದ ಕೂಡಿದ ಅಷ್ಟಮಿಯನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು, ನಕ್ಷತ್ರವು ಇಲ್ಲದಿದ್ದರೂ ನವಮಿಯಿಂದ ಕೂಡಿದ ಅಷ್ಟಮಿಯನ್ನೇ ಮಾಡಬೇಕು.

**ಉದಯೇ ಚಾಷ್ಟಮೀ ಕಿಂಚಿತ್ಸಕಲಾ ನವಮೀ ಯದಿ ।**
**ಮುಹೂರ್ತರೋಹಿಣೀಯುಕ್ತಾ ಸಂಪೂರ್ಣಾ ಚಾಷ್ಟಮೀ ಭವೇತ್ ॥ ೬೦ ॥**

**ಅಷ್ಟಮೀ ಬುಧವಾರೇಣ ರೋಹಿಣೀಸಹಿತಾ ಯದಿ ।**
**ಸೋಮೇನೈವ ಭವೇದ್ರಾಜನ್ ಕಿಂ ಕೃತೈರ್ವ್ರತಕೋಟಿಭಿಃ ॥ ೬೧ ॥**

**ನವಮ್ಯಾಮುದಯಾತ್ಕಿಂಚಿತ್ಸೋಮೇ ಸಾಪಿ ಬುಧೇಽಪಿ ಚ ।**
**ಅಪಿ ವರ್ಷಶತೇನಾಪಿ ಲಭ್ಯತೇ ವಾ ನ ಲಭ್ಯತೇ ॥ ೬೨ ॥**

**ವಿನಾ ಋಕ್ಷಂ ನ ಕರ್ತವ್ಯಾ ನವಮೀಸಂಯುತಾ ನ ಹಿ ।**
**ಕಾರ್ಯಾ ವಿದ್ಧಾಪಿ ಸಪ್ತಮ್ಯಾಂ ರೋಹಿಣೀಸಂಯುತಾಷ್ಟಮೀ ॥ ೬೩ ॥**

**ಕಲಾಕಾಷ್ಠಮುಹೂರ್ತೇಽಪಿ ಯದಾ ಕೃಷ್ಣಾಷ್ಟಮೀ ತಿಥಿಃ ।**
**ನವಮ್ಯಾಂ ಸೈವ ಯಾ ಗ್ರಾಹ್ಯಾ ಸಪ್ತಮೀಸಂಯುತಾ ನ ಹಿ ॥ ೬೪ ॥**

---

೬೦. ಉದಯದಲ್ಲಿ ಸ್ವಲ್ಪ ಅಷ್ಟಮಿ ಇದ್ದು, ಪೂರ್ತಿಯಾಗಿ ನವಮಿ ಇದ್ದು, ಮುಹೂರ್ತಕಾಲ ರೋಹಿಣೀನಕ್ಷತ್ರವಿದ್ದರೂ ಆ ದಿನವೆಲ್ಲಾ ಅಷ್ಟಮಿಯೆಂದೇ ತಿಳಿದು ವ್ರತವನ್ನಾಚರಿಸಬೇಕು.

೬೧. ಅಷ್ಟಮಿಯು ಬುಧವಾರ ಬಂದು ರೋಹಿಣೀನಕ್ಷತ್ರವಿದ್ದರೂ, ಸೋಮವಾರ ಬಂದು ಆ ನಕ್ಷತ್ರವಿದ್ದರೂ, ಅದನ್ನು ಮಾಡಿದರೆ ಕೋಟ್ಯಂತರ ವ್ರತಗಳಿಂದೇನು ಫಲ ?

೬೨. ನವಮಿಯು ಬುಧವಾರ ಅಥವಾ ಸೋಮವಾರ ಬಂದು, ಅಂದು ಪ್ರಾತಃಕಾಲ ಅಷ್ಟಮಿಯಿದ್ದರೆ, ಅದು ನೂರು ವರ್ಷಕ್ಕೊಂದು ಸಲ ಲಭಿಸುತ್ತದೆಯೋ ಇಲ್ಲವೋ. ಎಂದರೆ ಬಹು ಪ್ರಶಸ್ತವಾದುದು.

೬೩. ನವಮಿಯದಿನ ನಕ್ಷತ್ರವಿಲ್ಲದಿದ್ದರೆ ಅಂದು ವ್ರತವನ್ನಾಚರಿಸಬಾರದು. ಅಷ್ಟಮಿಯು ನಕ್ಷತ್ರದಿಂದ ಕೂಡಿದ್ದರೂ ಸಪ್ತಮಿಯಿಂದ ವಿದ್ಧವಾಗಿದ್ದರೆ ಮಾಡಬಾರದು.

೬೪. ಕಲಾ, ಕಾಷ್ಠಾ, ಮುಹೂರ್ತಗಳಷ್ಟು ಹೊತ್ತಿದ್ದರೂ ಅಷ್ಟಮಿಯನ್ನು ನವಮಿಯ ದಿನವೇ ಮಾಡಬೇಕು. ಅದು ಸಪ್ತಮಿಯಿಂದ ವಿದ್ಧವಾಗಿದ್ದರೆ ಮಾಡಲೇಬಾರದು. ಎಂದರೆ ಪೂರ್ವದಿನ ಅಷ್ಟಮಿಯು ಸಪ್ತಮಿಯಿಂದ ವಿದ್ಧವಾಗಿದ್ದರೆ ಮಾರನೆಯ ಕಲಾ, ಕಾಷ್ಠ, ಮುಹೂರ್ತಗಳಷ್ಟು ಇದ್ದರೆ, ಮಾರನೆಯ ದಿನವಷ್ಟೇ ಮಾಡೆಂದು ಅರ್ಥ.

ಕಿಂ ಪುನರ್ಬುಧವಾರೇಣ ಸೋಮೇನಾಪಿ ವಿಶೇಷತಃ ।
ಕಿಂ ಪುನರ್ನವಮೀಯುಕ್ತಾ ಕುಲಕೋಟ್ಯಾಸ್ತು ಮುಕ್ತಿದಾ ॥ ೬೫ ॥

ಪಲವೇಧೇನ ರಾಜೇಂದ್ರ ಸಪ್ತಮ್ಯಾಮಷ್ಟಮೀಂ ತ್ಯಜೇತ್ ।
ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭಃಕಲಶಂ ಯಥಾ ॥ ೬೬ ॥

॥ ದಿಲೀಪ ಉವಾಚ ॥

ಕೇನ ಚಾದೌ ಕೃತಂ ಚೇದಂ ಕೇನ ವಾ ತತ್ಪ್ರಕಾಶಿತಂ ।
ಕಿಂ ಪುಣ್ಯಂ ಕಿಂ ಫಲಂ ಚೈವ ಕಥಯಸ್ವ ಮಹಾಮುನೇ ॥ ೬೭ ॥

॥ ವಸಿಷ್ಠ ಉವಾಚ ॥

ಚಿತ್ರಸೇನೋ ಮಹಾರಾಜಾ ಮಹಾಪಾಪಪರೋ ಮಹಾನ್ ।
ಅಗಮ್ಯಾಗಮನಂ ಕೃತ್ವಾ ಸ್ವರ್ಣಸ್ತೇಯಂ ದ್ವಿಜಸ್ಯ ಚ ।
ಸುರಾಯಾಂ ಚ ಸದಾ ತೃಪ್ತೋ ವೃಥಾ ಮಾಂಸೇ ಸದಾ ರತಃ ॥ ೬೮ ॥

---

೬೫. ಬುಧವಾರ, ಸೋಮವಾರಗಳಲ್ಲಿ ಈ ರೀತಿ ಅಷ್ಟಮಿಯು ಸಿಕ್ಕಿದರೆ ಅದು ನವಮೀಯುಕ್ತವಾಗಿದ್ದರೆ ಕುಲಗಳ ಕೋಟಿಯನ್ನು ಪವಿತ್ರವನ್ನಾಗಿ ಮಾಡುತ್ತದೆ.

೬೬. ಒಂದು ಸಲ ಸಪ್ತಮಿಯಿಂದ ವೇಧೆಯನ್ನು ಹೊಂದಿದ್ದರೂ ಆ ಅಷ್ಟಮಿಯನ್ನು ಮಾಡಬಾರದು. ಗಂಗೆಯ ಕಲಶಕ್ಕೆ ಒಂದು ಬಿಂದು ಹೆಂಡವು ಸೋಕಿದರೂ ಅದು ತ್ಯಾಜ್ಯವಷ್ಟೆ?

೬೭. ದಿಲೀಪನು ಕೇಳಿದನು:—ಹಿಂದೆ ಯಾರು ಮಾಡಿದರು? ಇದನ್ನು ಯಾರು ಪ್ರಕಾಶಿಸಿದರು? ಇದಕ್ಕೆ ಪುಣ್ಯವೇನು? ಫಲವೇನು? ಇದನ್ನು ಹೇಳು.

೬೮. ವಸಿಷ್ಠನು ಹೇಳಿದನು:—ಚಿತ್ರಸೇನನೆಂಬೊಬ್ಬ ರಾಜನಿದ್ದನು. ಅವನು ಮಹಾಪಾಪಿ. ಅಗಮ್ಯಾಗಮನ, ಚಿನ್ನವನ್ನು ಕದಿಯುವುದು, ಹೆಂಡ ಕುಡಿಯುವುದು, ವ್ಯರ್ಥವಾಗಿ ಮಾಂಸವನ್ನು ತಿನ್ನುವುದು, ಇವೆಲ್ಲವನ್ನೂ ಮಾಡುತ್ತಿದ್ದನು.

**ಏವಂ ಪಾಪಸಮಾಯುಕ್ತೋ ನಿತ್ಯಂ ಪ್ರಾಣಿವಧೇ ರತಃ ।**
**ಚಾಂಡಾಲೈಃ ಪತಿತೈಃ ಸಾರ್ಧಮಾಲಾಪಂ ಸರ್ವದಾಽಕರೋತ್ ॥ ೬೯ ॥**

**ಏತದೇವಂವಿಧೋ ರಾಜಾ ಮೃಗಯಾಯಾಂ ಮನೋ ದಧೇ ।**
**ಅರಣ್ಯೇ ದ್ವೀಪಿನಂ ಜ್ಞಾತ್ವಾ ವೇಷ್ಟಯಿತ್ವಾ ಚ ಸರ್ವತಃ ॥ ೭೦ ॥**

**ಸಾವಧಾನಂ ಭಟಾನ್ ಸರ್ವಾನ್ ವಾಕ್ಯಮೇತದುವಾಚ ಹ ।**
**ಅಹಮೇವ ನಿಹನ್ಮ್ಯೇನಂ ಯೋಽನ್ಯೋಽಸ್ಮಿನ್ಪ್ರಹರಿಷ್ಯತಿ ॥ ೭೧ ॥**

**ಸ ವಧ್ಯೋ ನಾತ್ರ ಸಂದೇಹೋ ವ್ಯಾಘ್ರೋ ರಾಜ್ಞಃ ಪಥಾ ಯಯೌ ।**
**ಸಲಜ್ಜೋಽಪಿ ತತೋ ರಾಜಾ ವ್ಯಾಘ್ರಂ ಪಶ್ಚಾಜ್ಜಗಾಮ ಹ ॥ ೭೨ ॥**

**ಅನೇಕಕ್ಲೇಶದುಃಖೇನ ವ್ಯಾಘ್ರಂ ಹಂತುಂ ಸಮಾಹಿತಃ ।**
**ಕ್ಷುತ್ಪಿಪಾಸಾಕುಲಕ್ಲೇಶಃ ಸಂಧ್ಯಾಯಾಂ ಯಮುನಾತಟೇ ॥ ೭೩ ॥**

---

೬೯. ಈ ರೀತಿ ಪಾಪಮಾಡುತ್ತ ಯಾವಾಗಲೂ ಪ್ರಾಣಿವಧೆಯಲ್ಲಿ ನಿರತನಾಗಿ, ಚಾಂಡಾಲರೊಡನೆಯೂ ಪತಿತರೊಡನೆಯೂ ಯಾವಾಗಲೂ ಸರಸಸಲ್ಲಾಪ ಮಾಡುತ್ತಿದ್ದನು.

೭೦. ಈ ರೀತಿಯಾದ ಇವನು ಒಂದು ದಿನ ಬೇಟೆಗೆ ಮನಸ್ಸುಮಾಡಿ ಹೋದನು. ಕಾಡಿನಲ್ಲಿ ಆನೆಯಿರುವುದನ್ನು ಎಲ್ಲಕಡೆಯಲ್ಲಿಯೂ ಬಂಧಿಸಿ ಆಳುಗಳನ್ನೆಲ್ಲ ಕುರಿತು ಜೋಪಾನವಾಗಿರಿ ಎಂದು ಇಂತೆಂದನು.

೭೧-೭೨. ನಾನೇ ಈ ಆನೆಯನ್ನು ಕೊಲ್ಲುತ್ತೇನೆ. ಮತ್ತಾವನಾದರೂ ಹೊಡೆದರೆ ಅವನನ್ನು ನಾನೇ ಕೊಲ್ಲುತ್ತೇನೆಂದನು. ಹೀಗೆ ಹೇಳಿ ಹೋಗಲು ಎದುರಿಗೆ ಹುಲಿಯು ಬಂದಿತು. ಅದನ್ನೇ ಅನುಸರಿಸಿ ರಾಜನೂ ಹೋದನು.

೭೩. ವ್ಯಾಘ್ರವನ್ನು ಕೊಲ್ಲಲು ಹೋದವನು ಬಹುಕಷ್ಟಪಟ್ಟು ಹಸಿವು ಬಾಯಾರಿಕೆಗಳಿಂದ ಕೂಡಿಕೊಂಡು ಯಮುನಾದಡಕ್ಕೆ ಬಂದನು.

ಅಷ್ಟಮಿಮಾ ರೋಹಿಣೀಯುಕ್ತಾ ತದ್ದಿನಂ ಜನ್ಮವಾಸರಂ ।
ಶ್ವಃಕನ್ಯಾ ಯಮುನಾಯಾಂ ವೈ ವ್ರತಂ ಚಕ್ರುರ್ನರಾಧಿಪ ॥ ೭೪ ॥

ನಾನೋಪಹಾರೈರ್ದ್ರವ್ಯೈಶ್ಚ ಧೂಪದೀಪೈಸ್ಸುಶೋಭನೈಃ ।
ಗಂಧಪುಷ್ಪಂ ತಥಾ ದ್ರವ್ಯಂ ಕುಂಕುಮಾದಿ ಮನೋಹರಂ ॥ ೭೫ ॥

ಅನ್ನಂ ಬಹುಗುಣಂ ದೃಷ್ಟ್ವಾ ಭಕ್ತಂ ತನ್ಮಾನಸಂ ಕೃತಂ ।
॥ ರಾಜೋವಾಚ ॥
ಅನ್ನಾಭಾವಾನ್ಮಮಾದ್ಯಾಶು ಪ್ರಾಣಾಯಾಸ್ಯಂತಿ ನಿಶ್ಚಯಃ ॥ ೭೬ ॥

॥ ಸ್ತ್ರಿಯ ಊಚುಃ ॥
ಜನ್ಮಾಷ್ಟಮ್ಯಾಂ ಹರೇರದ್ಯ ನ ಭೋಕ್ತವ್ಯಂ ತ್ವಯಾನಘ ।
ಗೃಧ್ರಮಾಂಸಂ ಖರಂ ಕಾಕಂ ಗೋಮಾಂಸಮನ್ನಮೇವ ಚ ॥ ೭೭ ॥

ಭುಕ್ತವಾನ್ನಾತ್ರ ಸಂದೇಹೋ ಯೋ ಭುಂಕ್ತೇ ಕೃಷ್ಣಜನ್ಮನಿ ।
ಕಿಂ ಕಿಂ ಛಿದ್ರಂ ನ ಸಂಜಾತಂ ಸಂಸಾರೇ ವಸತಾಂ ನೃಣಾಂ ॥ ೭೮ ॥

---

೭೪-೭೫. ಆ ದಿನ ರೋಹಿಣೀಸಹಿತವಾದ ಅಷ್ಟಮಿಯಾಗಿತ್ತು. ಅಂದು ಜನ್ಮವಾರವಾಗಿದ್ದಿತು. ಅಂದು ಈತನು ಉಪವಾಸಮಾಡಿದಂತಾಯಿತು. ನಾಳೆ ಯಮುನೆಯಲ್ಲಿ ವ್ರತವನ್ನು ಮಾಡಲು ಅನೇಕ ಪೂಜಾದ್ರವ್ಯಗಳಿಂದಲೂ ಧೂಪ ದೀಪಗಳಿಂದಲೂ ಗಂಧಪುಷ್ಪಕುಂಕುಮಗಳಿಂದಲೂ ಸಿದ್ಧಪಡಿಸಿ, ಅನೇಕ ವಿಧವಾದ ಅನ್ನಗಳನ್ನು ಮಾಡಿದ್ದರು. ಇದನ್ನು ನೋಡಿ ರಾಜನ ಮನಸ್ಸು ಭಕ್ತಿಯಿಂದ ಕೂಡಿತು.

೭೬. ರಾಜನು ಹೇಳಿದನು :—ಅನ್ನವನ್ನು ತಿನ್ನದಿದ್ದುದರಿಂದ ನನ್ನ ಪ್ರಾಣ ಗಳು ನಿಶ್ಚಯವಾಗಿಯೂ ನಾಶವಾಗುತ್ತವೆ.

೭೭. ಹೆಂಗಸರು ಹೇಳಿದರು :—ಅಪ್ಪ! ಇಂದು ಕೃಷ್ಣಜನ್ಮಾಷ್ಟಮಿಯು. ಊಟಮಾಡಬಾರದು. ಇಂದು ಊಟಮಾಡಿದರೆ ಹದ್ದು, ಕಾಗೆ, ಕತ್ತೆ, ಗೋಮಾಂಸ ಗಳನ್ನು ತಿಂದಂತೆಯೇ ಸರಿ.

೭೮. ಸಂಸಾರದಲ್ಲಿ ವಾಸಿಸುತ್ತಿರುವ ಜನರಿಗೆ ಯಾವ ಯಾವ ತೊಂದರೆಗಳು ತಾನೆ ಉಂಟಾಗುವುದಿಲ್ಲ? ತಪ್ಪುಗಳನ್ನು ತಾನೆ ಮಾಡುವುದಿಲ್ಲ?

ಯೇನ ದೇಹೇ ಸ್ಥಿತೇ ಪ್ರಾಣೇ ಜಯಂತೀ ನ ಕೃತಾ ನೃಪ ।
ತತ್ರಾಕೃತೋಪವಾಸಸ್ಯ ಶಾಸನಂ ಯಮಮಂದಿರಂ ॥ ೭೯ ॥

ಯದ್ದತ್ತಂ ಪಿತರೋ ನಿತ್ಯಂ ನ ಗೃಹ್ಣಂತಿ ಯಥಾವಿಧಿ ।
ಪಿತರಃ ಪಾತಿತಾಸ್ಸರ್ವೇ ಜಯಂತ್ಯಾಂ ಭೋಜನೇ ಕೃತೇ ॥ ೮೦ ॥

ಇತಿ ಶ್ರುತ್ವಾ ತತೋ ರಾಜಾ ವ್ರತಂ ಚಕ್ರೇ ನರಾಧಿಪ ।
ಕಿಂ ಚಿತ್ಪುಷ್ಪಂ ಕಿಯದ್ಗಂಧಂ ವಸ್ತ್ರಂ ಚಾನೀಯ ಹರ್ಷತಃ ॥ ೮೧ ॥

ವ್ರತಸ್ಯಾಸ್ಯ ಪ್ರಭಾವೇನ ಚಿತ್ರಸೇನೋ ಹರೇರ್ಗೃಹಂ ।
ದಿವ್ಯಂ ವಿಮಾನಮಾರುಹ್ಯ ಗತವಾನ್ಪಿತೃಭಿಸ್ಸಹ ॥ ೮೨ ॥

ಯತ್ಫಲಂ ಮಥುರಾಂ ಗತ್ವಾ ದೃಷ್ಟ್ವಾ ಕೃಷ್ಣಮುಖಾಂಬುಜಂ ।
ತತ್ಫಲಂ ಪ್ರಾಪ್ಯತೇ ಪುಂಸಾ ಕೃಷ್ಣಜನ್ಮಾಷ್ಟಮೀವ್ರತಾತ್ ॥ ೮೩ ॥

---

೭೯. ದೇಹದಲ್ಲಿ ಪ್ರಾಣವಿರುವವರೆಗೂ ಜಯಂತಿಯನ್ನು ಮಾಡದವನಿಗೆ, ಆವಾಗ ಉಪವಾಸವಿಲ್ಲದವನಿಗೆ ಶಿಕ್ಷೆಯು ಯಮನ ಮನೆಯೇ ಸರಿ.

೮೦. ಪಿತೃಗಳಿಗೆ ಕೊಟ್ಟುದನ್ನು ಅವರು ಸ್ವೀಕರಿಸುವುದಿಲ್ಲ. ಪಿತೃಗಳು ನರಕಭಾಗಿಗಳಾಗುತ್ತಾರೆ. ಆದ್ದರಿಂದ ಅಂದು ಊಟಮಾಡಬಾರದು.

೮೧. ಸ್ವಲ್ಪ, ಹೂ, ಗಂಧಗಳನ್ನು, ವಸ್ತ್ರವನ್ನೂ ತಂದು ಈ ವ್ರತವನ್ನು ಸಂತೋಷದಿಂದ ಆ ರಾಜನು ಮಾಡಿದನು.

೮೨. ಈ ವ್ರತದ ಪ್ರಭಾವದಿಂದ ಚಿತ್ರಸೇನನು ದಿವ್ಯವಾದ ವಿಮಾನದಲ್ಲಿ ಪಿತೃಗಳೊಡನೆ ವಿಷ್ಣುಲೋಕಕ್ಕೆ ಹೋದನು.

೮೩. ಮಥುರೆಗೆ ಹೋಗಿ ಕೃಷ್ಣದರ್ಶನವನ್ನು ಮಾಡಿದರೆ ಯಾವ ಪುಣ್ಯವು ಬರುತ್ತದೋ ಕೃಷ್ಣಜನ್ಮಾಷ್ಟಮೀ ವ್ರತದಿಂದ ಆ ಪುಣ್ಯವು ಬರುತ್ತದೆ.

**ಯತ್ಫಲಂ ದ್ವಾರಕಾಂ ಗತ್ವಾ ದೃಷ್ಟ್ವೇ ವಿಶ್ವೇಶ್ವರೇ ಹರೌ ।**
**ತತ್ಫಲಂ ಪ್ರಾಪ್ಯತೇ ದೀನೈಃ ಕೃತ್ವಾ ಜನ್ಮಾಷ್ಟಮೀವ್ರತಂ ॥ ೮೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ**
**ಜನ್ಮಾಷ್ಟಮೀವ್ರತಮಾಹಾತ್ಮ್ಯಂ ನಾಮ**
**ತ್ರಯೋದಶೋಽಧ್ಯಾಯಃ**



---

೮೪. ದ್ವಾರಕೆಗೆ ಹೋಗಿ ವಿಶ್ವೇಶ್ವರನಾದ ಹರಿಯನ್ನು ನೋಡಿದರೆ ಬರುವ ಪುಣ್ಯವನ್ನು ಜನ್ಮಾಷ್ಟಮೀವ್ರತ ಮಾಡುವುದರಿಂದ ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಹರಿಜನ್ಮಾಷ್ಟಮೀವ್ರತ
ಮಹಿಮೆಯೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ಚತುರ್ದಶೋಽಧ್ಯಾಯಃ



॥ ಶೌನಕ ಉವಾಚ ॥

**ಕಥಯಸ್ವ ಮಹಾಪ್ರಾಜ್ಞ ಬ್ರಾಹ್ಮಣಸ್ಯ ಕೃಪಾರ್ಣವ ।**
**ಮಾಹಾತ್ಮ್ಯಂ ಸರ್ವವರ್ಣಾನಾಂ ಶ್ರೇಷ್ಠಸ್ಯ ಕೃಪಯಾ ಚ ಮೇ ॥ ೧ ॥**

॥ ಸೂತ ಉವಾಚ ॥

**ಬ್ರಾಹ್ಮಣಸ್ಸರ್ವವರ್ಣಾನಾಂ ಗುರುರೇವ ದ್ವಿಜೋತ್ತಮ ।**
**ಸರ್ವಾಮರಾಶ್ರಯೋ ಜ್ಞೇಯಃ ಸಾಕ್ಷಾನ್ನಾರಾಯಣಃ ಪ್ರಭುಃ ॥ ೨ ॥**

**ಕುರ್ಯಾತ್ಪ್ರಣಾಮಂ ಯೋ ವಿಪ್ರಂ ಹರಿಬುದ್ಧ್ಯಾ ತು ಭೂಸುರ ।**
**ಭಕ್ತ್ಯಾ ತಸ್ಯ ದ್ವಿಜಶ್ರೇಷ್ಠ ವರ್ಧತೇ ಸಂಪದಾದಿಕಂ ॥ ೩ ॥**

---

## ಹದಿನಾಲ್ಕನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಎಲೈ! ಮಹಾನುಭಾವನೇ, ಬ್ರಾಹ್ಮಣ ಮತ್ತು ಸರ್ವವರ್ಣಗಳ ಮಹಿಮೆಯನ್ನು ದಯವಿಟ್ಟು ಹೇಳು.

೨. ಸೂತನು ಹೇಳಿದನು :—ಬ್ರಾಹ್ಮಣನು ಎಲ್ಲಾ ವರ್ಣಗಳಿಗೂ ಗುರುವು. ಆ ಬ್ರಾಹ್ಮಣನು ದೇವತೆಗಳಿಗೆಲ್ಲಾ ಆಶ್ರಯನು. ಅವನೇ ನಾರಾಯಣನು.

೩. ದೇವನೆಂಬ ಬುದ್ಧಿಯಿಂದ ಬ್ರಾಹ್ಮಣನಿಗೆ ಭಕ್ತಿಯಿಂದ ನಮಸ್ಕರಿಸಿದರೆ ಸಂಪತ್ತು ಹೆಚ್ಚುತ್ತದೆ.

ನ ನಮೇದ್ಬ್ರಾಹ್ಮಣಂ ದೃಷ್ಟ್ವಾ ಹೇಲಯಾಪಿ ಚ ಗರ್ವಿತಃ ।
ಛೇದನಂ ತಸ್ಯ ಶಿರಸಃ ಕರ್ತುಮಿಚ್ಛೇತ್ಸದಾ ಹರಿಃ ॥ ೪ ॥

ಕೃತಾಪರಾಧಂ ವಿಪ್ರಂ ಯೇ ದ್ವಿಷಂತಿ ಪಾಪಬುದ್ಧಯಃ ।
ಹರಿದ್ವಿಷೋ ಹಿ ತೇ ಜ್ಞೇಯಾ ನಿರಯಂ ಯಾಂತಿ ದಾರುಣಂ ॥ ೫ ॥

ಯಃ ಕರ್ತುಂ ಪ್ರಾರ್ಥನಾಂ ವಿಪ್ರಂ ಪಶ್ಯೇತ್ಕ್ರೋಧೇನ ಚಾಗತಂ ।
ಕೃತಾಂತಶ್ಚಕ್ಷುಷೋಸ್ತಸ್ಯ ತಪ್ತಸೂಚೀಂ ದದಾತಿ ವೈ ॥ ೬ ॥

ಕುರುತೇ ಭೂಸುರಂ ಮೂಢೋ ಭರ್ತ್ಸನಂ ಯೋ ನರಾಧಮಃ ।
ಯಮದೂತಾ ಮುಖೇ ತಸ್ಯ ತಪ್ತಲೋಹಂ ದದಾತಿ ಚ ॥ ೭ ॥

ಯೇಷಾಂ ನಿಕೇತನೇ ಭುಂಕ್ತೇ ಕ್ಷ್ಮಾಸುರೋ ವೈ ತಪೋಧನಃ ।
ಸುಪರ್ವಾಣೈಃ ಸ್ವಯಂ ಕೃಷ್ಣೋ ಭುಂಕ್ತೇ ತೇಷಾಂ ನಿಕೇತನೇ ॥ ೮ ॥

---

೪. ಬ್ರಾಹ್ಮಣನನ್ನು ನೋಡಿ ಅವಮಾನಬುದ್ಧಿಯಿಂದಾಗಲಿ ಗರ್ವದಿಂದಲಾಗಲಿ ನಮಸ್ಕರಿಸದಿದ್ದರೆ, ಅವನ ತಲೆಯನ್ನು ಕತ್ತರಿಸಲು ಹರಿಯು ಇಚ್ಛಿಸುತ್ತಾನೆ.

೫. ಬ್ರಾಹ್ಮಣನು ತಪ್ಪುಮಾಡಿದ್ದರೂ ಯಾವ ಪಾಪಿಗಳು ದ್ವೇಷಿಸುತ್ತಾರೋ ಅವರನ್ನು ಹರಿಯ ದ್ವೇಷಿಗಳೆಂದು ತಿಳಿಯಬೇಕು. ಅವರು ನರಕಕ್ಕೆ ಹೋಗುತ್ತಾರೆ.

೬. ಬ್ರಾಹ್ಮಣನು ಯಾಚನೆಗೆ ಬಂದರೆ ಅವನನ್ನು ಕೋಪಗೊಂಡ ಕಣ್ಣುಗಳಿಂದ ನೋಡಿದರೆ, ಯಮನು ಅವರ ಕಣ್ಣುಗಳಿಗೆ ಕಾದಿರುವ ಸೂಜಿಯನ್ನು ಚುಚ್ಚುತ್ತಾನೆ.

೭. ಯಾವ ಮೂಢನು ಬ್ರಾಹ್ಮಣನನ್ನು ಗದರಿಸುತ್ತಾನೆಯೋ ಅವನ ಬಾಯಿಗೆ ಯಮದೂತರು ಕಾದ ಕಬ್ಬಿಣವನ್ನು ಹಾಕುತ್ತಾರೆ.

೮. ತಪಸ್ವಿಯಾದ ಬ್ರಾಹ್ಮಣನು ಯಾರ ಮನೆಯಲ್ಲಿ ಊಟಮಾಡುತ್ತಾನೋ ಅವನ ಮನೆಯಲ್ಲಿ ದೇವತೆಗಳೊಡನೆ ವಿಷ್ಣುವು ಊಟಮಾಡುತ್ತಾನೆ.

**ನಶ್ಯಂತಿ ಸರ್ವಪಾಪಾನಿ ದ್ವಿಜಹತ್ಯಾದಿಕಾನಿ ಚ ।**
**ಕಣಮಾತ್ರಂ ಲಿಹೇದ್ಯಸ್ತು ವಿಪ್ರಾಂಘ್ರಿಸಲಿಲಂ ನರಃ ॥ ೯ ॥**

**ಯೋ ನರಶ್ಚರಣಂ ಧೌತಂ ಕುರ್ಯಾದ್ಧಸ್ತೇನ ಭಕ್ತಿತಃ ।**
**ದ್ವಿಜಾತೇರ್ವಚ್ಮಿ ಸತ್ಯಂ ತೇ ಸ ಮುಕ್ತಸ್ಸರ್ವಪಾತಕೈಃ ॥ ೧೦ ॥**

**ಪುತ್ರಹೀನಾ ಚ ಯಾ ನಾರೀ ಮೃತವತ್ಸಾ ಚ ಯಾಂಗನಾ ।**
**ಸಪುತ್ರಾ ಜೀವವತ್ಸಾ ಸಾ ದ್ವಿಜಪಾದಾಂಘ್ರಿಸೇವನಾತ್ ॥ ೧೧ ॥**

**ಬ್ರಹ್ಮಾಂಡೇ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ ।**
**ಉದಧೌ ಯಾನಿ ತೀರ್ಥಾನಿ ತಿಷ್ಠಂತಿ ದ್ವಿಜಪಾದಯೋಃ ॥ ೧೨ ॥**

**ದ್ವಿಜಾಂಘ್ರಿಸಲಿಲೈರ್ಯುಕ್ತಂ ಸೇಚನಂ ಯಸ್ಯ ಮಸ್ತಕೇ ।**
**ಸ ಸ್ನಾತಸ್ಸರ್ವತೀರ್ಥೇಷು ಸ ಮುಕ್ತಸ್ಸರ್ವಪಾತಕೈಃ ॥ ೧೩ ॥**

---

೯. ಬ್ರಾಹ್ಮಣನ ಪಾದೋದಕವನ್ನು ಯಾವನು ಒಂದು ತೊಟ್ಟನ್ನಾದರೂ ಕುಡಿಯುವನೋ ಅವನ ಬ್ರಹ್ಮಹತ್ಯಾದಿ ಪಾಪವೆಲ್ಲ ಹೋಗುತ್ತದೆ.

೧೦. ಯಾವನು ಬ್ರಾಹ್ಮಣನ ಪಾದಗಳನ್ನು ಭಕ್ತಿಯಿಂದ ತನ್ನ ಕೈಯಿಂದಲೇ ತೊಳೆಯುತ್ತಾನೆಯೋ ಅವನ ಸರ್ವಪಾಪಗಳೂ ಹೋಗುತ್ತವೆ. ಸತ್ಯವು.

೧೧. ಮಕ್ಕಳಿಲ್ಲದ ಮತ್ತು ಮಕ್ಕಳು ಸಾಯುತ್ತಿರುವ ಹೆಂಗಸು ಬ್ರಾಹ್ಮಣನ ಪಾದಗಳನ್ನು ಸೇವಿಸಿದರೆ ಮಕ್ಕಳಾಗುತ್ತವೆ. ಮತ್ತು ಹುಟ್ಟಿದ ಮಕ್ಕಳು ಸಾಯುವುದಿಲ್ಲ.

೧೨. ಪ್ರಪಂಚದಲ್ಲಿರುವ ತೀರ್ಥಗಳೆಲ್ಲಾ ಸಮುದ್ರದಲ್ಲಿರುತ್ತವೆ. ಸಮುದ್ರದಲ್ಲಿರುವ ತೀರ್ಥಗಳೆಲ್ಲಾ ಬ್ರಾಹ್ಮಣದ ಪಾದಗಳಲ್ಲಿರುತ್ತವೆ.

೧೩. ಬ್ರಾಹ್ಮಣನ ಪಾದೋದಕವನ್ನು ತಲೆಯಲ್ಲಿ ಪ್ರೋಕ್ಷಿಸಿಕೊಂಡವನು ಸರ್ವತೀರ್ಥಗಳಲ್ಲಿ ಸ್ನಾನಮಾಡಿದಂತಾಗಿ ಪಾಪದಿಂದ ಮುಕ್ತನಾಗುತ್ತಾನೆ.

ಶೃಣು ಶೌನಕ ವಕ್ಷ್ಯಾಮಿ ಮಾಹಾತ್ಮ್ಯಂ ಪಾಪನಾಶನಂ ।
ವಿಪ್ರಪಾದೋದಕಸ್ಯಾಹಮಿತಿಹಾಸಂ ತಪೋಧನ ॥ ೧೪ ॥

ಆಸೀತ್ಪುರಾ ದ್ವಿಜಶ್ರೇಷ್ಠ ವೈಶ್ಯವೃತ್ತಿಪರಾಯಣಃ ।
ಶೂದ್ರೋ ಭೀಮೋ ದ್ವಾಪರೇ ಚ ಬ್ರಹ್ಮಹತ್ಯಾಸಹಸ್ರಕೃತ್ ॥ ೧೫ ॥

ನಿಷ್ಠುರಸ್ಸರ್ವದಾಽತುಷ್ಟಃ ಸ ಮಹಾವೈಶ್ಯಾಯಾ ಪುನಃ ।
ಶೂದ್ರಾಚಾರಪರಿಭ್ರಷ್ಟೋ ಭೀಮೋಽಸೌ ಗುರುತಲ್ಪಗಃ ॥ ೧೬ ॥

ಪ್ರತ್ಯೇಕಂ ವಚ್ಮಿ ಕಿಂ ತಸ್ಯ ದಸ್ಯೋಸ್ಸಂಖ್ಯಾ ನ ವಿದ್ಯತೇ ।
ಪಾಪಾನಾಂ ಮುನಿಶಾರ್ದೂಲ ಭೀಮಸ್ಯ ದುಷ್ಟಚೇತಸಃ ॥ ೧೭ ॥

ಏಕದಾ ಸ ಗತಃ ಕಸ್ಮಿದ್ಬ್ರಾಹ್ಮಣಸ್ಯ ನಿವೇಶನಂ ।
ಗತ್ವಾ ತಂ ತಸ್ಯ ಗೇಹಾತ್ತು ದ್ರವ್ಯಂ ನೇತುಂ ಮನೋ ದಧೇ ॥ ೧೮ ॥

---

೧೪. ಶೌನಕನೇ, ಹೇಳುವೆನು, ಕೇಳು. ಸರ್ವಪಾಪಹರವಾದ ಬ್ರಾಹ್ಮಣನ ಪಾದೋದಕದ ಇತಿಹಾಸವನ್ನು ಹೇಳುತ್ತೇನೆ.

೧೫. ಪೂರ್ವದಲ್ಲಿ ದ್ವಾಪರಯುಗದಲ್ಲಿ ವ್ಯಾಪಾರನಿರತನಾದ ಶೂದ್ರಜಾತಿಯ ಭೀಮನೆಂಬುವನೊಬ್ಬನಿದ್ದನು. ಅವನು ಅನೇಕ ಬ್ರಹ್ಮಹತ್ಯೆಗಳನ್ನು ಮಾಡಿದ್ದನು.

೧೬. ಕ್ರೂರಿ, ಯಾವಾಗಲೂ ಸಂತೋಷವಿಲ್ಲದವನು, ಅವನು ಒಬ್ಬಳು ವೈಶ್ಯಳೊಡನೆ ಶೂದ್ರಾಚಾರದಲ್ಲಿಯೇ ನಿರತನಾಗಿದ್ದನು. ಮತ್ತು ಗುರುವಿನ ಹೆಂಡತಿಯನ್ನು ಇಟ್ಟುಕೊಂಡಿದ್ದನು.

೧೭. ಅವನ ಕಳ್ಳತನಗಳನ್ನು ಬೇರೆಬೇರೆಯಾಗಿ ಹೇಳಬೇಕಾಗಿಲ್ಲ. ಅದರ ಲೆಖ್ಖವೇ ಸಿಕ್ಕುವಂತಿಲ್ಲ. ಆ ದುಷ್ಟನಾದ ಭೀಮನು ಪಾಪಿಯಾಗಿದ್ದನು.

೧೮. ಒಂದು ಸಾರಿ ಒಬ್ಬ ಬ್ರಾಹ್ಮಣನ ಮನೆಗೆ ಹೋದನು. ಅಲ್ಲಿಂದ ಅವನ ಹಣವನ್ನು ಕದಿಯಲು ಮನಸ್ಸುಮಾಡಿದನು.

ತತ್ರೋವಾಸ ಬ್ರಾಹ್ಮಣಸ್ಯ ಬಹಿರ್ದ್ವಾರಸಮೀಪತಃ ।
ದೈನ್ಯಯುಕ್ತಂ ವಚಃ ಪ್ರಾಹ ಕ್ಷ್ಮಾಸುರಂ ಸ ತಪೋಧನಂ ॥ ೧೯ ॥

ಭೋಸ್ಸ್ವಾಮಿನ್ ಶೃಣು ಮೇ ವಾಕ್ಯಂ ದಯಾಳುರಿವ ಮನ್ಯಸೇ ।
ಕ್ಷುಧಾರ್ತೋಽಹಂ ದೇಹಿ ಚಾನ್ನಂ ಪ್ರಾಣಾ ಯಾಸ್ಯಂತಿ ಮೇ ದ್ರುತಂ ॥೨೦॥

॥ ಬ್ರಾಹ್ಮಣ ಉವಾಚ ॥

ಕ್ಷುಧಾರ್ತ ಶೃಣು ಮೇ ಕಶ್ಚಿದ್ವಾಕ್ಯಂ ಕರ್ತುಂ ನ ವಿದ್ಯತೇ ।
ಪಾಕಂ ಮೇ ತಂಡುಲಾನ್ನಿತ್ಯಂ ನೀತ್ವಾ ಭುಂಕ್ಷ್ವ ಯಥಾಸುಖಂ ॥ ೨೧ ॥

ನಾಸ್ತಿ ಮೇ ಜನಕೋ ಮಾತಾ ನಾಸ್ತಿ ಸೂನುಃ ಸಹೋದರಃ ।
ನಾಸ್ತಿ ಜಾಯಾ ಮಾತೃಬಂಧುರ್ಮೃತಾಸ್ಸರ್ವೇ ವಿಹಾಯ ಮಾಂ ॥ ೨೨ ॥

ತಿಷ್ಠಾಮ್ಯೇಕೋ ಗೃಹೇಽಕರ್ಮಾ ಭಾಗ್ಯಹೀನೋಽತಿಥೇ ಹರಿಃ ।
ಏಕೋ ಮೇ ವಸತಶ್ಚಾಸ್ತಿ ನ ಜಾನೇ ತದ್ವಿನಾ ಕಿಲ ॥ ೨೩ ॥

---

೧೯. ಆ ಬ್ರಾಹ್ಮಣನ ಹೊರಬಾಗಿಲಿನ ಬಳಿಯಲ್ಲಿದ್ದು ದೀನತೆಯಿಂದ ಆ ಬ್ರಾಹ್ಮಣನನ್ನು ಕುರಿತು ಈ ರೀತಿ ಹೇಳಿದನು.

೨೦. ಸ್ವಾಮಿ, ನನ್ನ ಮಾತನ್ನು ಲಾಲಿಸಿ. ತಾವು ದಯೆಯುಳ್ಳವರಂತೆ ಕಾಣುತ್ತೀರಿ. ನನಗೆ ಹಸಿವಾಗುತ್ತಿದೆ. ಪ್ರಾಣಗಳು ಹೋಗುತ್ತಿವೆ. ಅನ್ನ ಹಾಕಿರಿ.

೨೧. ಬ್ರಾಹ್ಮಣನು ಹೇಳಿದನು:—ಎಲೈ! ಹಸಿವುಳ್ಳವನೇ, ನನ್ನ ಮಾತನ್ನು ಕೇಳು. ಅಡಿಗೆಮಾಡುವವರೊಬ್ಬರೂ ಇಲ್ಲ. ಅಕ್ಕಿಯನ್ನು ಕೊಡುತ್ತೇನೆ. ತೆಗೆದು ಕೊಂಡುಹೋಗಿ ಎಲ್ಲಾದರೂ ಕೊಟ್ಟು ಊಟಮಾಡು.

೨೨. ನನಗೆ ತಂದೆ, ತಾಯಿ, ಮಗ, ಸಹೋದರರು, ಹೆಂಡತಿ, ನೆಂಟರು ಒಬ್ಬರೂ ಇಲ್ಲ. ನನ್ನೊಬ್ಬನನ್ನು ಬಿಟ್ಟು ಎಲ್ಲರೂ ಸತ್ತುಹೋದರು.

೨೩. ಅಯ್ಯಾ! ಮನೆಯಲ್ಲಿ ಕೆಲಸವಿಲ್ಲದೆ ಭಾಗ್ಯಹೀನನಾಗಿ ಒಬ್ಬನೇ ಇದ್ದೇನೆ. ಬದುಕಿರುವ ನನಗೆ ಹರಿಯೊಬ್ಬನಿದ್ದಾನೆ. ಅವನ ಹೊರತು ಬೇರೆ ಯಾರನ್ನೂ ಕಾಣೆ.

॥ ಭೀಮ ಉವಾಚ ॥

ಮಮ ಕಶ್ಚಿದ್ದ್ವಿಜಶ್ರೇಷ್ಠ ನಾಸ್ತಿ ಸೇವಾಂ ತವಾಪಿ ಚ ।
ಶೂದ್ರೋಽಹಂ ನಿಲಯೇ ಜಾತ್ಯಾ ಕೃತ್ವಾ ಸ್ಥಾಸ್ಯಾಮಿ ತೇ ಸದಾ ॥ ೨೪ ॥

॥ ಸೂತ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಸಾನಂದಃ ಕ್ಷ್ಮಾಸುರಸ್ತದಾ ।
ಪಾಕಂ ವಿಧಾಯ ತೂರ್ಣಂ ಸ ದದಾವನ್ನಂ ತಪೋಧನ ॥ ೨೫ ॥

ಸೋಽಪಿ ಹರ್ಷಸಮಾಯುಕ್ತಸ್ತಸ್ಥೌ ತತ್ರ ದ್ವಿಜಾಲಯೇ ।
ಸೇವಾಂ ಕುರ್ವನ್ ಸ್ನೇಹಯುಕ್ತಾಂ ಭೂಸುರಸ್ಯ ಮನೋಹರಾಂ ॥ ೨೬ ॥

ಅದ್ಯ ಶ್ವೋ ವಾ ಹರಿಷ್ಯಾಮಿ ದ್ರವ್ಯಮಸ್ಯ ಮಮಾಪಿ ಚ ।
ನೇತುಂ ಯದಾ ಕರಿಷ್ಯಾಮಿ ನೇಷ್ಯಾಮಿ ನಾತ್ರ ಸಂಶಯಃ ॥ ೨೭ ॥

---

೨೪. ಭೀಮನು ಹೇಳಿದನು :—ಎಲೈ! ಬ್ರಾಹ್ಮಣನೇ, ನನಗೆ ಯಾರೂ ಇಲ್ಲ. ನಾನು ಶೂದ್ರ ಜಾತಿಯವನು. ಸೇವೆಮಾಡಿಕೊಂಡು ನಿನ್ನ ಮನೆಯಲ್ಲಿಯೇ ಇರುತ್ತೇನೆ.

೨೫. ಸೂತನು ಹೇಳಿದನು :—ಈ ಮಾತನ್ನು ಕೇಳಿ ಬ್ರಾಹ್ಮಣನು ಆನಂದ ಪಟ್ಟು, ಜಾಗ್ರತೆಯಾಗಿ ಅಡಿಗೆಮಾಡಿ ಅವನಿಗೆ ಅನ್ನವನ್ನು ಹಾಕಿದನು.

೨೬. ಅವನೂ ಹರ್ಷದಿಂದ ಆ ಬ್ರಾಹ್ಮಣನ ಮನೆಯಲ್ಲಿಯೇ ಇದ್ದು ಕೊಂಡು, ಆ ಬ್ರಾಹ್ಮಣನಿಗೆ ಭಕ್ತಿಯಿಂದ ಇಷ್ಟವಾದ ಸೇವೆಗಳನ್ನು ಮಾಡುತ್ತ ಲಿದ್ದನು.

೨೭. ಇಂದೋ, ನಾಳೆಯೋ ಈತನ ದ್ರವ್ಯವನ್ನು ಕದಿಯುವೆನು. ಇರಲಿ, ಮಾಡುವೆನು. ಹೊತ್ತುಕೊಂಡು ಹೋಗುವೆನು. ಸಂಶಯವಿಲ್ಲ.

ಪರಾಮೃಶ್ಯ ಚ ಹೃದ್ಯಂತಃ ಕೃತ್ವಾ ತಸ್ಯ ಕ್ರಿಯಾಂ ವದೇತ್ ।
ಪಾದಧೌತಾಧಿಕಂ ಚಾಸೌ ಶಿರಸಾ ಗತಪಾತಕಃ ।
ಆಚಮ್ಯಾಂಘ್ರಿಜಲಂ ದಧ್ರೇ ಛದ್ಮನಾ ಪ್ರತ್ಯಹಂ ದ್ವಿಜ ॥ ೨೮ ॥

ಏಕದಾ ಹಾರಕಃ ಕಶ್ಚಿದ್ದ್ರವ್ಯಂ ನೇತುಂ ಸಮಾಗತಃ ।
ಉದ್ಘಾಟ್ಯ ರಾತ್ರಾವರರಂ ಗತೋಽಸಾ ತದ್ಗೃಹಾಂತರಂ ॥ ೨೯ ॥

ದೃಷ್ಟ್ವಾ ಭೀಮಃ ಪ್ರಹಾರಾರ್ಥಂ ದಂಡಹಸ್ತಂ ಸಮಾಗತಃ ।
ಹಾರಕೋ ಮಸ್ತಕಂ ತಸ್ಯ ಛಿತ್ವಾ ತೂರ್ಣಂ ಪಲಾಯಿತಃ ॥ ೩೦ ॥

ಅಥ ತಸ್ಯ ಭಟಾ ವಿಷ್ಣೋಃ ಶಂಖಚಕ್ರಗದಾಧರಾಃ ।
ಸಮಾಯಾತಾಸ್ತಥಾ ನೇತುಂ ಭೀಮಂ ತಂ ವೀತಕಿಲ್ಬಿಷಂ ॥ ೩೧ ॥

ಸ್ಯಂದನಂ ಚಾಗತಂ ದಿವ್ಯಂ ರಾಜಹಂಸಯುತಂ ದ್ವಿಜ ।
ತತ್ರಾರೂಢೋ ಯಯೌ ವಿಷ್ಣೋರ್ಭವನಂ ದುರ್ಲಭಂ ಕಿಲ ॥ ೩೨ ॥

---

೨೮. ಮನಸ್ಸಿನಲ್ಲಿ ಹೀಗೆ ನಿರ್ಧರಿಸಿಕೊಂಡು ಆತನು ಹೇಳಿದ ಕೆಲಸಗಳನ್ನೆಲ್ಲಾ ಮಾಡುತ್ತ ಅವನು ಕೈಕಾಲುಗಳನ್ನು ತೊಳೆದು ತಲೆಯಲ್ಲಿ ಪ್ರೋಕ್ಷಿಸಿಕೊಳ್ಳುತ್ತಾ ಕುಡಿಯುತ್ತಲೂ ಕಪಟದಿಂದ ವರ್ತಿಸುತ್ತಿದ್ದನು.

೨೯. ಒಂದು ಸಾರಿ ಒಬ್ಬ ಕಳ್ಳನು ಕದಿಯಲು ಬಂದು ಬಾಗಿಲನ್ನು ತೆಗೆದು ಮನೆಯೊಳಕ್ಕೆ ನುಗ್ಗಿದನು.

೩೦. ಈ ಕಳ್ಳನನ್ನು ನೋಡಿ ಭೀಮನು ಅವನನ್ನು ಹೊಡೆಯಲು ದೊಣ್ಣೆಯನ್ನು ತೆಗೆದುಕೊಂಡು ಬಂದನು. ಕಳ್ಳನು ಆ ಭೀಮನ ತಲೆಯನ್ನು ಒಡೆದು ಜಾಗ್ರತೆಯಾಗಿ ಓಡಿಹೋದನು.

೩೧. ಅವನು ಸಾಯಲು, ವಿಷ್ಣುಭಟರು ಶಂಖಚಕ್ರಗದಾಧರರಾಗಿ ಬಂದು ನಿಷ್ಪಾಪನಾದ ಭೀಮನನ್ನು ಕರೆದುಕೊಂಡುಹೋಗಲು ಸಿದ್ಧರಾದರು.

೩೨. ಆಗ ರಾಜಹಂಸಗಳಿಂದ ಚಿತ್ರಿತವಾದ ರಥವೂ ಬಂದಿತು. ಅದರಲ್ಲಿ ಕೂತು ಇತರರಿಗೆ ದುರ್ಲಭವಾದ ವೈಕುಂಠವನ್ನು ಹೊಂದಿದನು.

**ಮಾಹಾತ್ಮ್ಯಂ ಭೂಮಿದೇವಸ್ಯ ಮಯಾ ತೇ ತತ್ಪ್ರಕೀರ್ತಿತಂ ।**
**ಶೃಣುಯಾದ್ಯೋ ನರೋ ಭಕ್ತ್ಯಾ ತಸ್ಯ ಪಾತಕನಾಶನಂ ॥ ೩೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ**
**ಬ್ರಾಹ್ಮಣಮಾಹಾತ್ಮ್ಯಕಥನಂನಾಮ**
**ಚತುರ್ದಶೋಽಧ್ಯಾಯಃ**

---

೩೩. ಬ್ರಾಹ್ಮಣನ ಮಹಿಮೆಯನ್ನು ನಿನಗೆ ಹೇಳಿದೆನು. ಇದನ್ನು ಯಾವನು ಭಕ್ತಿಯಿಂದ ಕೇಳುತ್ತಾನೋ ಅವನ ಪಾಪವೆಲ್ಲವೂ ನಾಶವಾಗುತ್ತದೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಬ್ರಾಹ್ಮಣಮಾಹಾತ್ಮ್ಯ
ಕಥನವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥



# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ಪಂಚದಶೋಽಧ್ಯಾಯಃ

॥ ಶೌನಕ ಉವಾಚ ॥

ಕಥಯಸ್ವ ಮಹಾಭಾಗ ಮಾಹಾತ್ಮ್ಯಂ ಪಾಪನಾಶನಂ ।
ಏಕಾದಶ್ಯಾಃ ಫಲಂ ಕಿಂ ವಾ ಕಿಲ್ಬಿಷಂ ಸ್ಯಾದಕುರ್ವತಃ ॥ ೧ ॥

॥ ಸೂತ ಉವಾಚ ॥

ಏಕಾದಶ್ಯಾಸ್ತು ಮಾಹಾತ್ಮ್ಯಂ ಕಿಮಹಂ ವಚ್ಮಿ ಸಾಂಪ್ರತಂ ।
ಶ್ರುತ್ವಾಚೈಕಾದಶೀನಾಮ ಯಮದೂತಾಶ್ಚ ಶಂಕಿತಾಃ
ಭವಂತಿ ನಾತ್ರ ಸಂದೇಹಃ ಸರ್ವಪ್ರಾಣಿಭಯಂಕರಾಃ ॥ ೨ ॥

ವ್ರತಾನಾಂ ಚೈವ ಸರ್ವೇಷಾಂ ಶ್ರೇಷ್ಠಾಂ ಚೈಕಾದಶೀಂ ಶುಭಾಂ ।
ಉಪೋಷ್ಯ ಜಾಗ್ರಯಾದ್ವಿಷ್ಣೋಃ ಕುರ್ಯಾಚ್ಚ ಮಂಡನಂ ಮಹತ್ ॥ ೩ ॥

---

## ಹದಿನೈದನೆಯ ಅಧ್ಯಾಯವು

೧. ಶೌನಕನು ಹೇಳಿದನು:—ಎಲೈ ಮಹಾನುಭಾವನೇ, ಪಾಪನಾಶಕವಾದ ಏಕಾದಶಿಯ ಮಹಿಮೆಯನ್ನು ಹೇಳು. ಅದರ ಫಲವೇನು? ಮಾಡದಿದ್ದರೆ ದೋಷವೇನು?

೨. ಸೂತನು ಹೇಳಿದನು:—ಏಕಾದಶಿಯ ಮಹಿಮೆಯನ್ನು ಎಷ್ಟೆಂದು ಹೇಳಲಿ? ಏಕಾದಶಿಯ ಹೆಸರನ್ನು ಕೇಳಿದ ಕೂಡಲೇ ಎಲ್ಲಾ ಪ್ರಾಣಿಗಳಿಗೂ ಭಯವನ್ನುಂಟುಮಾಡುವ ಯಮಕಿಂಕರರೂ ಕೂಡ ಹಿಂಜರಿಯುತ್ತಾರೆ.

೩. ಏಕಾದಶೀವ್ರತವು ಎಲ್ಲಾ ವ್ರತಗಳಿಗೂ ಶ್ರೇಷ್ಠವಾದುದು. ಆ ದಿನ ಉಪವಾಸವಿದ್ದು, ಜಾಗರಣೆ ಮಾಡಿ, ವಿಷ್ಣುವಿಗೆ ಅಲಂಕಾರ ಮಾಡಿ ಪೂಜೆ ಬೇಕು.

**ತುಲಸೀದಲೈಸ್ತು ಯೋ ಮರ್ತ್ಯೋ ಹರಿಪೂಜಾಂ ಕರೋತಿ ವೈ ।**
**ದಲೈನೇಕೇನ ಲಭತೇ ಕೋಟಿಯಜ್ಞಫಲಂ ದ್ವಿಜ ॥ ೪ ॥**

**ಅಗಮ್ಯಾಗಮನೇ ಚೈವ ಯತ್ಪಾಪಂ ಸಮುದಾಹೃತಂ ।**
**ತತ್ಪಾಪಂ ಯಾತಿ ವಿಲಯಂ ಚೈಕಾದಶ್ಯಾಮುಪೋಷಣಾತ್ ॥ ೫ ॥**

**ಘೃತಪೂರ್ಣಂ ಪ್ರದೀಪಂ ಯೋ ದದ್ಯಾದ್ವಿಷ್ಣೋರ್ದಿನೇ ದ್ವಿಜ ।**
**ಅಂತೇ ವಿಷ್ಣುಪುರಂ ಯಾತಿ ತಮೋ ಹತ್ವಾ ಸ್ವತೇಜಸಾ ॥ ೬ ॥**

**ಧನ್ಯಾ ಜನಪದಾಸ್ತೇ ವೈ ಧನ್ಯಸ್ಸ ಚ ಮಹೀಪತಿಃ ।**
**ಹರೇರ್ದಿನೇ ಯಸ್ಯ ರಾಜ್ಯೇ ಚೈಕಾದಶ್ಯಾಂ ಮಹೋತ್ಸವಃ ॥ ೭ ॥**

**ನಾರಾಯಣಸ್ಯ ಶಯನೇ ಪಾರ್ಶ್ವಸ್ಯ ಪರಿವರ್ತನೇ ।**
**ವಿಶೇಷೇಣ ಪ್ರಬೋಧಿನ್ಯಾಂ ನಿರಾಹಾರಾ ಭವಂತಿ ಯೇ ॥ ೮ ॥**

---

೪. ಆ ದಿನ ತುಲಸೀದಳದಿಂದ ಹರಿಯನ್ನು ಪೂಜಿಸಬೇಕು. ಆ ದಿನ ಒಂದು ದಳವನ್ನು ಪೂಜಿಸಿದರೂ ಕೋಟಿಯಜ್ಞದ ಫಲವನ್ನು ಹೊಂದುತ್ತಾನೆ.

೫. ಅಗಮ್ಯಾಗಮನಪಾಪವೂಕೂಡ ಏಕಾದಶೀಉಪವಾಸದಿಂದ ನಾಶವಾಗುತ್ತದೆ.

೬. ಆ ಏಕಾದಶೀ ದಿನ ತುಪ್ಪದ ದೀಪವನ್ನು ಹರಿಯ ಮುಂದೆ ಹಚ್ಚಿದರೆ ಅವನು ಪ್ರಕಾಶಕನಾಗಿ ತನ್ನ ತೇಜಸ್ಸಿನಿಂದ ಕತ್ತಲೆಯನ್ನು ನಿವಾರಿಸುತ್ತ ವೈಕುಂಠಕ್ಕೆ ಹೋಗುತ್ತಾನೆ.

೭. ಯಾವ ದೇಶದಲ್ಲಿ ಏಕಾದಶಿಯ ಉತ್ಸವವು ನಡೆಯುತ್ತದೆಯೋ ಆ ದೇಶವು ಧನ್ಯವಾದದ್ದು. ಆ ರಾಜನೂ ಆ ಪ್ರಜೆಗಳೂ ಧನ್ಯರು.

೮-೯. ಶಯನೈಕಾದಶಿ, ಪರಿವರ್ತನೈಕಾದಶೀ, ಉತ್ಥಾನೈಕಾದಶಿಗಳಲ್ಲಿ ಯಾರು ನಿರಾಹಾರನಾಗಿರುತ್ತಾನೋ, ಆ ಪ್ರಾಣಿಗಳು ಪುಣ್ಯಭಾಗಿಗಳು. ಅವ

**ಮದಂತಿಕಂ ನಾನಯಧ್ವಂ ಪ್ರಾಣಿನಃ ಪುಣ್ಯಭಾಗಿನಃ ।**
**ಅಹರ್ನಿಶಂ ಪಿತೃಪತಿಃ ಸಮಾದಿಶತಿ ದೂತಕಾನ್ ॥ ೯ ॥**

**ಏಕಾದಶೀ ಜಗನ್ನಾಥವಲ್ಲಭಾ ಪುಣ್ಯವರ್ಧಿನೀ ।**
**ವಿಷ್ಣುರ್ದೇಹಂ ದಹತ್ಯೇವ ತಸ್ಯಾಮನ್ನಸ್ಯ ಭಕ್ಷಣೇ ॥ ೧೦ ॥**

**ತೇಷಾಂ ಧಿಗ್ಜೀವನಂ ಪುಂಸಾಂ ಧಿಕ್ಸೌಂದರ್ಯಂ ಚ ವರ್ತಿತಾಂ ।**
**ಯೇಽನ್ನಮಶ್ನಂತಿ ಪಾಪಿಷ್ಠಾಶ್ಚೈಕಾದಶ್ಯಾಂ ಹಿ ವಿಡ್ಭುಜಃ ॥ ೧೧ ॥**

**ಏಕಾದಶ್ಯಾಂ ದ್ವಿಜಶ್ರೇಷ್ಠ ಭುಕ್ತಿಮಾಶ್ರಿತ್ಯ ಕೇವಲಂ ।**
**ಬಹೂನಿ ವಿವಿಧಾನ್ಯೇವ ತಿಷ್ಠಂತಿ ದುರಿತಾನಿ ಚ ॥ ೧೨ ॥**

**ಅಮಾವಾಸ್ಯಾಂ ಯಥಾ ಸ್ತ್ರೀಣಾಂ ಸಂಗಮೋ ಕಲುಷಂ ಮಹತ್ ।**
**ಏಕಾದಶ್ಯಾಂ ತಥೈವಾನ್ನಭಕ್ಷಣೇ ವೃಜಿನಂ ಭವೇತ್ ॥ ೧೩ ॥**

---

ರನ್ನು ನನ್ನ ಬಳಿಗೆ ಕರೆತರಬೇಡಿರೆಂದು ಯಮನು ತನ್ನ ದೂತರಿಗೆ ಹಗಲೂ ರಾತ್ರಿಯೂ ಅಪ್ಪಣೆ ಮಾಡುತ್ತಲೇ ಇರುತ್ತಾನೆ.

೧೦. ಏಕಾದಶಿಯು ವಿಷ್ಣುವಿಗೆ ಬಹು ಪ್ರಿಯವಾದುದು. ಪುಣ್ಯವರ್ಧಕವಾದುದು. ಆ ದಿನದಲ್ಲಿ ಅನ್ನ ತಿಂದರೆ ವಿಷ್ಣುವು ದೇಹವನ್ನು ದಹಿಸುತ್ತಾನೆ.

೧೧. ಯಾವನು ಏಕಾದಶಿಯ ದಿನ ಅನ್ನ ತಿನ್ನುವನೋ ಅವನ ಜನ್ಮವನ್ನು ಸುಡು. ಅವನ ಸೌಂದರ್ಯಕ್ಕೆ ಬೆಂಕಿಹಚ್ಚು. ಅವನು ತಿಂದ ಅನ್ನವು ಮಲವೆಂದು ತಿಳಿ.

೧೨. ಏಕಾದಶಿಯ ದಿನ ಅನ್ನವನ್ನಾಶ್ರಯಿಸಿಕೊಂಡು ನಾನಾ ಬಗೆಯ ಪಾಪಗಳು ಇರುತ್ತವೆ.

೧೩. ಅಮಾವಾಸ್ಯೆಯ ದಿನ ಸ್ತ್ರೀಸಂಗಮಾಡಿದರೆ ಹೇಗೆ ಬಹುಪಾಪ ಬರುತ್ತದೋ ಅಂತೆಯೇ ಏಕಾದಶಿಯ ದಿನ ಅನ್ನ ತಿಂದರೆ ಬಹುಪಾಪ ಬರುತ್ತದೆ.

ರೋಗಿಣಶ್ಚ ತಥಾ ಖಂಜಕಾಸಸೋದರಕುಷ್ಠಕಾಃ ।
ಭವಂತಿ ಪ್ರಾಣಿನಸ್ತೇ ವೈ ತಸ್ಯಾಮನ್ನಸ್ಯ ಭಕ್ಷಣೇ ॥ ೧೪ ॥

ಗ್ರಾಮಶೂಕರತಾಂ ಯಾಂತಿ ದಾರಿದ್ರ್ಯಂ ಚ ಪ್ರಯಾಂತಿ ವೈ ।
ರಾಜಬದ್ಧಾ ದ್ವಿಜಶ್ರೇಷ್ಠ ತಸ್ಯಾಮನ್ನಸ್ಯ ಭಕ್ಷಣೇ ॥ ೧೫ ॥

ಸಂಸಾರೇ ಯಾನಿ ಪಾಪಾನಿ ತಾನಿ ವಿಪ್ರ ಹರೇರ್ದಿನೇ ।
ಭುಕ್ತಿಮಾಶ್ರಿತ್ಯ ತಿಷ್ಠಂತಿ ಜಲಭಕ್ಷಣಮಾಜ್ಞಯಾ ॥ ೧೬ ॥

ಕುರ್ವತಾಂ ಸರ್ವಪಾಪಾನಿ ನರಕಾನ್ನಿಷ್ಕೃತಿರ್ಭವೇತ್ ।
ನ ನಿಷ್ಕೃತಿರ್ಭವೇನ್ನ್ನೃಣಾಂ ಭುಂಜತಾಂ ಚ ಹರೇರ್ದಿನೇ ॥ ೧೭ ॥

ನರಾ ಯಾವಂತಿ ಚಾನ್ನಾನಿ ಭುಂಜತೇ ಚ ಹರೇರ್ದಿನೇ ।
ಪ್ರತ್ಯನ್ನಂ ಚ ಬ್ರಹ್ಮಹತ್ಯಾಕೋಟಿಜಂ ವೃಜಿನಂ ಭವೇತ್ ॥ ೧೮ ॥

ಪುನರ್ವಚ್ಮಿ ಪುನರ್ವಚ್ಮಿ ಶ್ರೂಯತಾಂ ಶ್ರೂಯತಾಂ ನರಾಃ ।
ನ ಭೋಕ್ತವ್ಯಂ ನ ಭೋಕ್ತವ್ಯಂ ನ ಭೋಕ್ತವ್ಯಂ ಹರೇರ್ದಿನೇ ॥ ೧೯ ॥

---

೧೪. ಆ ದಿನ ಊಟಮಾಡಿದರೆ ರೋಗಿಗಳಾಗಿ ಕುಂಟ, ಕುರುಡ, ಉಬ್ಬಸರೋಗ, ಮಹೋದರ, ಕುಷ್ಠ ಇವುಗಳನ್ನು ಹೊಂದುತ್ತಾರೆ.

೧೫. ಆ ದಿನ ಅನ್ನವನ್ನು ತಿಂದರೆ ಊರ ಹಂದಿಯಾಗಿ ಹುಟ್ಟುತ್ತಾರೆ. ದರಿದ್ರರಾಗುತ್ತಾರೆ. ಸೆರೆಯಲ್ಲಿ ಸಿಕ್ಕುತ್ತಾರೆ.

೧೬-೧೭. ಸಂಸಾರದಲ್ಲಿ ಎಷ್ಟು ಪಾಪಗಳಿವೆಯೋ ಅವೆಲ್ಲವೂ ಏಕಾದಶಿಯ ದಿನ ಅನ್ನವನ್ನು ಆಶ್ರಯಿಸಿಕೊಂಡಿರುತ್ತವೆ. ಆದರಿಂದ ಆ ದಿನ ಊಟಮಾಡಬಾರದು, ನೀರನ್ನು ವಿಷ್ಣುವಿನ ಆಜ್ಞೆಯಿಂದ ಕುಡಿಯಬೇಕು. ಅವನು ನರಕದಿಂದ ಪಾರಾಗುವನು. ಏಕಾದಶಿಯ ದಿನ ಊಟಮಾಡುವವನಿಗೆ ಪ್ರಾಯಶ್ಚಿತ್ತವೇ ಇಲ್ಲ.

೧೮. ಮನುಷ್ಯರು ಹರಿಯ ದಿನದಲ್ಲಿ ಎಷ್ಟು ಅನ್ನವನ್ನು ತಿನ್ನುತ್ತಾರೋ ಒಂದೊಂದು ಅಗುಳಿಗೂ ಕೋಟಿ ಬ್ರಹ್ಮಹತ್ಯೆಗಳ ಪಾಪವು ಬರುತ್ತದೆ.

೧೯. ಬಾರಿಬಾರಿಗೂ ಹೇಳುತ್ತೇನೆ. ಎಲೈ! ಮನುಷ್ಯರಿರಾ, ಕೇಳಿರಿ, ಹರಿಯ ದಿನದಲ್ಲಿ ಊಟಮಾಡಬಾರದು. ಊಟಮಾಡಬಾರದು. ಊಟ ಮಾಡಲೇ ಬಾರದು.

**ಗಂಗಾದಿಷು ಚ ತೀರ್ಥೇಷು ಸ್ನಾತ್ವಾ ಯತ್ಫಲಮಾಪ್ಯತೇ ।**
**ಚಂದ್ರಸೂರ್ಯೋಪರಾಗೇ ಚ ಚೈಕಾದಶ್ಯಾಮುಪೋಷಣಾತ್ ॥ ೨೦ ॥**

**ಅರ್ಚಿತ್ವೋತ್ಪಲಮಾಲಾಭಿಸ್ತಸ್ಯಾಂ ಚ ಕಮಲಾಪತಿಂ ।**
**ವಿಧಿವತ್ಪಾರಣಂ ಕೃತ್ವಾ ನ ಮಾತುರ್ಗರ್ಭಭಾಜನಂ ॥ ೨೧ ॥**

**ಏಕಾದಶ್ಯಾಂ ಹರೇರ್ಗೇಹೇ ಕರೋತಿ ಮಂಡನಂ ದ್ವಿಜ ।**
**ಪರಮಾಂ ಗತಿಮಾಸಾದ್ಯ ತಿಷ್ಠೇದ್ವಿಷ್ಣುನಿಕೇತನೇ ॥ ೨೨ ॥**

**ಏಕಾದಶೀಂ ಸಮಾಸಾದ್ಯ ನಿರಾಹಾರಾ ಭವಂತಿ ಯೇ ।**
**ತೇಷಾಂ ವಿಷ್ಣುಪುರೇ ಶಶ್ವತ್ಸ್ಥಾನಮೇವ ನ ಸಂಶಯಃ ॥ ೨೩ ॥**

**ತುಳಸೀಭಕ್ತಿಸಂಲೀನಂ ಮನೋ ಯೇಷಾಂ ವಿರಾಜತೇ ।**
**ತೇಷಾಂ ವಿಷ್ಣುಪುರೇ ಶಶ್ವತ್ಸ್ಥಾನಮೇವ ನ ಸಂಶಯಃ ॥ ೨೪ ॥**

**ಪರದ್ರವ್ಯೇಷ್ವಭಿರುಚಿರ್ಯೇಷಾಂ ಚೈವ ನ ವಿದ್ಯತೇ ।**
**ಸಂತುಷ್ಟಮನಸೋ ಯೇಽಪಿ ತೇಷಾಂ ವಿಷ್ಣುಪುರಂ ಧ್ರುವಂ ॥ ೨೫ ॥**

---

೨೦. ಸೂರ್ಯ ಚಂದ್ರ ಗ್ರಹಣಗಳಲ್ಲಿ ಗಂಗಾದಿ ತೀರ್ಥಗಳಲ್ಲಿ ಸ್ನಾನಮಾಡಿದರೆ ಬರುವ ಫಲವು ಏಕಾದಶಿಯ ಉಪವಾಸದಿಂದ ಬರುತ್ತದೆ.

೨೧. ಆ ಏಕಾದಶಿಯ ದಿನ ಉತ್ಪಲದ ಹೂವಿನ ಮಾಲೆಗಳಿಂದ ಕೃಷ್ಣನನ್ನು ಪೂಜಿಸಿ ಶಾಸ್ತ್ರೋಕ್ತವಾಗಿ ಪಾರಣೆಮಾಡಿದರೆ ಪುನರ್ಜನ್ಮವಿಲ್ಲ.

೨೨. ಏಕಾದಶಿಯ ದಿನ ದೇವಸ್ಥಾನವನ್ನು ಅಲಂಕರಿಸಿದರೆ ಉತ್ತಮಗತಿಯನ್ನು ಹೊಂದಿ ವೈಕುಂಠಕ್ಕೆ ಹೋಗುತ್ತಾನೆ.

೨೩. ಏಕಾದಶಿಯ ದಿನ ನಿರಾಹಾರಮಾಡಿದವರು ಅವರು ಯಾವಾಗಲೂ ವೈಕುಂಠದಲ್ಲೇ ಇರುತ್ತಾರೆ.

೨೪. ಯಾರ ಮನಸ್ಸು ತುಳಸಿಯ ಭಕ್ತಿಯಲ್ಲಿದೆಯೋ ಅವರೂ ವಿಷ್ಣುಲೋಕದಲ್ಲಿ ಶಾಶ್ವತವಾಗಿರುತ್ತಾರೆ.

೨೫. ಪರದ್ರವ್ಯವನ್ನು ಯಾರು ಅಪೇಕ್ಷಿಸುವುದಿಲ್ಲವೋ ಅವರು ಸಂತೋಷಗೊಂಡು ವಿಷ್ಣುಪುರದಲ್ಲಿ ವಾಸಿಸುತ್ತಾರೆ.

ದುರ್ಭಿಕ್ಷಕಾಲಮಾಸಾದ್ಯ ಪ್ರಾಣಿಭ್ಯೋ ಯೇ ನರೋತ್ತಮಾಃ ।
ವದತ್ಯನ್ನಂ ಹರೇಸ್ಸದ್ಮ ತೇಷಾಂ ಚೈವ ನ ಸಂಶಯಃ ॥ ೨೬ ॥

ಗವಾಂ ದ್ವಿಜಾನಾಂ ತ್ರಾಣಾಯ ಸ್ವಾಮಿನೋ ಯೋಷಿತಸ್ತಥಾ ।
ಪ್ರಾಣಾನ್ಸಂತ್ಯಜಂತಿ ಯೇ ಮರ್ತ್ಯಾಸ್ತೇಷಾಂ ವಿಷ್ಣುಪುರಂ ಧ್ರುವಂ ॥ ೨೭ ॥

ಪ್ರಾಣಿಭಿರ್ದಶಮೀವಿದ್ಧಾ ನ ಚೋಪೋಷ್ಯಾ ಕದಾಚನ ।
ಪರಿಹಾರ್ಯಂ ದ್ವಿಜಶ್ರೇಷ್ಠ ದುರ್ಜನಸ್ಯಾಂತಿಕಂ ಯಥಾ ॥ ೨೮ ॥

ಅರುಣೋದಯವೇಳಾಯಾಂ ದಶಮೀ ಸಂಗತಾ ಯದಿ ।
ತತ್ರೋಪೋಷ್ಯಾ ದ್ವಾದಶೀ ಸ್ಯಾತ್ತ್ರಯೋದಶ್ಯಾಂ ತು ಪಾರಣಂ ॥ ೨೯ ॥

ದಶಮೀಶೇಷಸಂಯುಕ್ತೋ ಯದಿ ಸ್ಯಾದರುಣೋದಯಃ ।
ವೈಷ್ಣವೇನ ನ ಕರ್ತವ್ಯಂ ತದ್ದಿನೈಕಾದಶೀವ್ರತಂ ॥ ೩೦ ॥

ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ ।
ಯತೀನಾಂ ಸ್ನಾನಕಾಲೋಽಯಂ ಗಂಗಾಭಸ್ಸದೃಶಸ್ಸ್ಮೃತಃ ॥ ೩೧ ॥

---

೨೬. ಕ್ಷಾಮಕಾಲ ಬಂದಾಗ ಪ್ರಾಣಿಗಳಿಗೆ ಅನ್ನಹಾಕಿದರೆ ಅವರಿಗೆ ವಿಷ್ಣುಲೋಕವು ಸಿಕ್ಕುತ್ತದೆ.

೨೭. ಗೋವುಗಳು, ಬ್ರಾಹ್ಮಣರು, ಸ್ವಾಮಿ, ಹೆಂಗಸರು ಇವರಿಗೋಸ್ಕರ ಪ್ರಾಣಬಿಡುವವರಿಗೆ ವಿಷ್ಣುಪುರವು ಲಭಿಸುತ್ತದೆ.

೨೮. ದಶಮಿಯಿಂದ ವಿದ್ಧವಾದ ಏಕಾದಶಿಯು ಉಪೋಷ್ಯಯೋಗ್ಯವಾದುದಲ್ಲ. ಅದನ್ನು ದುರ್ಜನರ ಸಂಗದಂತೆ ತ್ಯಜಿಸಬೇಕು.

೨೯. ಏಕಾದಶೀತಿಥಿಯ ದಿನ ಅರುಣೋದಯದಲ್ಲಿ ದಶಮಿಯಿದ್ದರೆ ಆ ದಿನ ಉಪವಾಸಮಾಡದೆ ದ್ವಾದಶಿ ದಿನ ಉಪವಾಸಮಾಡಿ, ತ್ರಯೋದಶಿ ದಿನ ಪಾರಣೆ ಮಾಡಬೇಕು.

೩೦. ಅರುಣೋದಯವು ದಶಮಿಯ ಶೇಷದಿಂದ ಕೂಡಿದ್ದರೆ ವಿಷ್ಣುಭಕ್ತನು ಆ ದಿನ ಏಕಾದಶೀವ್ರತವನ್ನು ಮಾಡಬಾರದು.

೩೧. ಪ್ರಾತಃಕಾಲದ ನಾಲ್ಕು ಘಳಿಗೆಗಳನ್ನು ಅರುಣೋದಯವೆಂದು ಹೇಳುತ್ತಾರೆ. ಅದು ಯತಿಗಳ ಸ್ನಾನಕಾಲವು. ಆಗ ನೀರೆಲ್ಲವೂ ಗಂಗೆಗೆ ಸಮವಾಗುವುವು.

**ಅರುಣೋದಯಕಾಲೇ ತು ದಶಮೀ ಯದಿ ದೃಶ್ಯತೇ ।**
**ನ ತತ್ರೈಕಾದಶೀ ಕಾರ್ಯಾ ಧರ್ಮಕಾಮಾರ್ಥನಾಶಿನೀ ॥ ೩೨ ॥**

**ಸ್ವಲ್ಪಾಂ ಚ ದಶಮೀವಿದ್ಧಾಂ ತ್ಯಜೇದೇಕಾದಶೀಂ ಬುಧಃ ।**
**ಸುರಾಬಿಂದುಸುಸಂಪರ್ಕಾತ್ ಘೃತಕುಂಭಂ ತ್ಯಜೇದ್ಯಥಾ ॥ ೩೩ ॥**

**ಸಂಪೂರ್ಣೈಕಾದಶೀ ಯತ್ರ ದ್ವಾದಶ್ಯಾಂ ಪುನರೇವ ಸಾ ।**
**ಉತ್ತರಾ ಯತಿಭಿಃ ಕಾರ್ಯಾ ಪೂರ್ವಾಮುಪವಸೇದ್ಗೃಹೀ ॥ ೩೪ ॥**

**ಏಕಾದಶೀಕಲಾ ಯತ್ರ ದ್ವಾದಶೀ ಪರತೋ ನ ಚೇತ್ ।**
**ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಾ ॥ ೩೫ ॥**

**ಏಕಾದಶೀ ವಿಲುಪ್ತಾ ಚೇತ್ಪರತೋ ದ್ವಾದಶೀಯುತಾ ।**
**ಉಪೋಷ್ಯಾ ದ್ವಾದಶೀ ಪೂರ್ಣಾ ಯದೀಚ್ಛೇತ್ಪರಮಾಂ ಗತಿಂ ॥ ೩೬ ॥**

---

೩೨. ಅರುಣೋದಯ ಕಾಲದಲ್ಲಿ ದಶಮಿಯು ಕಂಡರೆ ಅಂದು ಏಕಾದಶಿಯನ್ನು ಆಚರಿಸಬಾರದು. ಧರ್ಮಕಾಮಾರ್ಥಗಳು ನಾಶವಾಗುತ್ತವೆ.

೩೩. ಏಕಾದಶಿಯು ದಶಮಿಯಿಂದ ಸ್ವಲ್ಪ ವಿದ್ಧವಾಗಿದ್ದರೂ ಮದ್ಯದ ಬಿಂದುವಿನಿಂದ ಸಂಪರ್ಕವನ್ನು ಹೊಂದಿದ ತುಪ್ಪದ ಕೊಡವನ್ನು ತ್ಯಜಿಸುವಂತೆ, ತ್ಯಜಿಸಬೇಕು.

೩೪. ಒಂದು ದಿನ ಸಂಪೂರ್ಣವಾಗಿ ಏಕಾದಶಿ ಇದ್ದು, ದ್ವಾದಶಿಯ ದಿನವೂ ಇದ್ದರೆ ಆ ದ್ವಾದಶಿಯಲ್ಲಿ ಏಕಾದಶಿಯನ್ನು ಯತಿಗಳಾಚರಿಸಬೇಕು. ಗೃಹಸ್ಥರು ಹಿಂದಿನದಿನ ಮಾಡಬೇಕು.

೩೫. ದ್ವಾದಶಿಯದಿನ ಏಕಾದಶಿಯಿದ್ದು ತ್ರಯೋದಶಿಯ ದಿನ ದ್ವಾದಶಿಯಿಲ್ಲದಿದ್ದರೆ, ತ್ರಯೋದಶಿಯದಿನ ಪಾರಣೆ ಮಾಡಬೇಕು. ಆ ದ್ವಾದಶಿಯ ಉಪವಾಸ ಮಾಡಿದರೆ ನೂರು ಯಾಗಗಳನ್ನು ಮಾಡಿದ ಪುಣ್ಯಬರುತ್ತದೆ.

೩೬. ಏಕಾದಶಿಯು ದಶಮಿಯಿಂದ ವಿದ್ಧವಾಗಿದ್ದು ಮಾರನೆಯ ದಿನ ದ್ವಾದಶಿಯೇ ಆಗಿದ್ದರೆ, ದ್ವಾದಶಿಯ ದಿನವೇ ಉಪೋಷ್ಯಮಾಡತಕ್ಕದ್ದು.

**ಸಂಪೂರ್ಣೈಕಾದಶೀ ಯತ್ರ ಪ್ರಭಾತೇ ಪುನರೇವ ಸಾ ।**
**ಸರ್ವೈರೇವೋತ್ತರಾ ಕಾರ್ಯಾ ಪರತೋ ದ್ವಾದಶೀ ಯದಿ ॥ ೩೭ ॥**

**ಏಕಾದಶೀವ್ರತೇ ಯೇಷಾಂ ಮನಃ ಸಂಲೀಯತೇ ನೃಣಾಂ ।**
**ತೇಷಾಂ ಸ್ವರ್ಗೇ ಹಿ ವಾಸೋಽಥ ಯಾಂತಿ ತೇ ಸದನಂ ಹರೇಃ ॥ ೩೮ ॥**

**ಏಕಾದಶ್ಯಾಃ ಪರಂ ನಾಸ್ತಿ ಪರಲೋಕಸ್ಯ ಸಾಧನಂ ।**
**ಬಹುಪಾಪಸಮಾಯುಕ್ತಃ ಕರೋತಿ ಹರಿವಾಸರಂ ।**
**ಸರ್ವಪಾಪವಿನಿರ್ಮುಕ್ತಃ ಸ ಯಾತಿ ಹರಿಮಂದಿರಂ ॥ ೩೯ ॥**

**ಪತಿಸಹಿತಾ ಯಾ ಯೋಷಿತ್ಕರೋತಿ ಹರಿವಾಸರಂ ।**
**ಸುಪುತ್ರಾ ಸ್ವಾಮಿಸುಭಗಾ ಯಾತಿ ಪ್ರೇತ್ಯ ಹರೇರ್ಗೃಹಂ ॥ ೪೦ ॥**

**ಯೋ ಯಚ್ಛತಿ ಹರೇರಗ್ರೇ ಪ್ರದೀಪಂ ಭಕ್ತಿಭಾವತಃ ।**
**ಹರೇರ್ದಿನೇ ದ್ವಿಜಶ್ರೇಷ್ಠ ಪುಣ್ಯಸಂಖ್ಯಾ ನ ವಿದ್ಯತೇ ॥ ೪೧ ॥**

---

೩೭. ಒಂದು ದಿನ ಪೂರ್ಣವಾಗಿ ಏಕಾದಶಿಯಿದ್ದು ಮಾರನೆಯದಿನ ಪ್ರಾತಃಕಾಲದಲ್ಲಿಯೂ ಏಕಾದಶಿಯಿದ್ದರೆ, ಎಲ್ಲರೂ ಮಾರನೆಯ ದಿನದ ದ್ವಾದಶಿ ಯಿಂದ ಕೂಡಿದ ಏಕಾದಶಿಯನ್ನೇ ಆಚರಿಸಬೇಕು.

೩೮. ಏಕಾದಶಿಯಲ್ಲಿ ಯಾರ ಮನಸ್ಸು ಕೂಡಿದೆಯೋ ಅವರಿಗೆ ಸ್ವರ್ಗವಾಸ ಸಿದ್ಧ. ವೈಕುಂಠವನ್ನು ಹೊಂದುತ್ತಾರೆ.

೩೯. ಪರಲೋಕಕ್ಕೆ ಸಾಧನವಾದುದು ಏಕಾದಶಿಗಿಂತ ಮತ್ತೊಂದಿಲ್ಲ. ಬಹು ಪಾಪಮಾಡಿದ್ದರೂ ಏಕಾದಶೀವ್ರತವನ್ನು ಮಾಡಿದರೆ ಅವೆಲ್ಲವೂ ಹೋಗಿ ಸ್ವರ್ಗಕ್ಕೆ ಹೋಗುತ್ತಾನೆ.

೪೦. ಹೆಂಗಸು ಗಂಡನೊಡನೆ ಹರಿವಾಸರವನ್ನು ಮಾಡಿದರೆ, ಗಂಡ ಮಕ್ಕ ಳೊಡನೆ ಸ್ವರ್ಗಕ್ಕೆ ಹೋಗುತ್ತಾಳೆ.

೪೧. ಹರಿಯ ಮುಂದೆ ಭಕ್ತಿಯಿಂದ ದೀಪವನ್ನು ಹಚ್ಚಿದರೆ ಆ ಪುಣ್ಯಕ್ಕೆ ಲೆಖ್ಖವೇ ಇರುವುದಿಲ್ಲ.

ಯಾಂಗನಾ ಭರ್ತೃಸಹಿತಾ ಕುರುತೇ ಜಾಗರಂ ಹರೇಃ ।
ಹರೇರ್ನಿಕೇತನೇ ತಿಷ್ಠೇಚ್ಚಿರಂ ಪತ್ಯಾ ಸಹ ದ್ವಿಜ ॥ ೪೨ ॥

ಯತ್ಕಿಂಚಿದ್ಧರಯೇ ವಸ್ತು ಭಕ್ತ್ಯಾ ಯಚ್ಛತಿ ಯೋ ದ್ವಿಜ ।
ಹರೇರ್ದಿನೇ ತಸ್ಯ ಪುಣ್ಯಮಕ್ಷಯಂ ಚೈವ ಸರ್ವದಾ ॥ ೪೩ ॥

ಪುರಾಸೀದ್ವಲ್ಲಭೋ ನಾಮ್ನಾ ನಗರೇ ಕಾಂಚನಾಹ್ವಯೇ ।
ಧನೇನ ಪುಷ್ಕಳೇನಾಪಿ ರಾಜತೇ ಸ ಧನೇಶ್ವರಃ ॥ ೪೪ ॥

ತಸ್ಯ ಪ್ರಿಯಾ ಮಹಾರೂಪಾ ನಾಮ್ನಾ ಹೇಮಪ್ರಭಾ ದ್ವಿಜ ।
ಗರೀಯಾನ್ಮುಖರಸ್ತತ್ರ ಚಾಧಿಕಶ್ಚ ಕಲೇರ್ಗುಣಃ ॥ ೪೫ ॥

ಸಾ ಸದಾ ಕಲಹಂ ಕುರ್ಯಾತ್ಪತ್ಯಾ ಸಹ ತಪೋಧನ ।
ಶಶ್ವದ್ಗುರುಜನಾನ್ಕಾಮಂ ಭರ್ತ್ಸನಾಂ ನೀಚಭಾಷಯಾ ॥ ೪೬ ॥

ಪಾಕಪಾತ್ರೇ ಸದಾಶ್ನೀಯಾದ್ಗುಪ್ತಾ ಸೈಕಾಂತಿಕೇ ಮಲಾ ।
ಉಚ್ಛಿಷ್ಟಂ ಗುರುಜನೇಭ್ಯಶ್ಚ ದದ್ಯಾದ್ವೈ ಪ್ರತಿವಾಸರಂ ॥ ೪೭ ॥

---

೪೨. ಗಂಡನೊಡನೆ ಜಾಗರಣೆಮಾಡಿದರೆ ಗಂಡನೊಡನೆಯೇ ಬಹುಕಾಲ ವೈಕುಂಠದಲ್ಲಿರುವಳು.

೪೩. ಏಕಾದಶಿಯ ದಿನ ಭಕ್ತಿಯಿಂದ ಯಾವ ವಸ್ತುವನ್ನು ದಾನ ಮಾಡಿದರೂ ಅವನು ಅಕ್ಷಯವಾದ ಪುಣ್ಯವನ್ನು ಹೊಂದುತ್ತಾನೆ.

೪೪. ಕಾಂಚನವೆಂಬ ಒಂದು ಪಟ್ಟಣದಲ್ಲಿ ವಲ್ಲಭನೆಂಬವನೊಬ್ಬನಿದ್ದನು. ಅವನು ಬಹು ಧನಿಕನು.

೪೫. ಅವನಿಗೆ ಹೇಮಪ್ರಭೆಯೆಂಬ ರೂಪವತಿಯಾದ ಹೆಂಡತಿಯಿದ್ದಳು. ಅಲ್ಲಿ ಕಲಿಯ ಗುಣವು (ಪಾಪಗಳು) ಬಹಳವಾಗಿದ್ದವು.

೪೬-೪೭. ಆಕೆಯು ಯಾವಾಗಲೂ ಗಂಡನೊಡನೆ ಜಗಳವಾಡುತ್ತಿದ್ದಳು. ದೊಡ್ಡವರನ್ನು ಗದರಿಸುತ್ತಿದ್ದಳು. ಕೆಟ್ಟಮಾತಿನಿಂದ ಬಯ್ಯುತ್ತಿದ್ದಳು. ಅಡಿಗೆಯ ಪಾತ್ರೆಯಲ್ಲಿ ಗುಟ್ಟಾಗಿ ತಿನ್ನುವಳು. ತಿಂದು ಮಿಕ್ಕ ಎಂಜಲನ್ನು ದೊಡ್ಡವರಿಗೆ ಪ್ರತಿದಿನವೂ ಬಡಿಸುವಳು.

ಜಾರೇ ಸದಾ ಸ್ಥಿತಂ ಚಿತ್ತಮಹಂ ಸಾಧ್ವೀತಿ ಸಾ ವದೇತ್ ।
ಸ್ವಾಮಿನಃ ಕಲಹೈರ್ಬ್ರಹ್ಮನ್ಮನೋದ್ವೇಗಕರಾ ಸದಾ ॥ ೪೮ ॥

ಏಕದಾ ಚಾಗತಾಂ ದೃಷ್ಟ್ವಾ ಚಕಾರ ಭರ್ತ್ಸನಾಂ ಚ ತಾಂ ।
ಭರ್ತಾ ತಸ್ಯಾಃ ಪ್ರಹಾರಂ ಚ ಸರ್ವಪಾಪಯುತಾಂ ದ್ವಿಜಃ ॥ ೪೯ ॥

ಸೈವ ರೋಷಸಮಾಯುಕ್ತಾ ಗತಾ ಶೂನ್ಯಗೃಹೇ ತು ವೈ ।
ಸುಪ್ತಾಽಜ್ಞಾತಾ ಸ್ಥಿತಾ ಕಸ್ಮಿಂಜ್ಜಲಾನ್ನಂ ನ ಚಖಾದ ಸಾ ॥ ೫೦ ॥

ದೈವಾತ್ತತ್ರ ದಿನೇ ವಿಷ್ಣೋಃ ಪಾರ್ಶ್ವಸ್ಯ ಪರಿವರ್ತನಂ ।
ಏಕಾದಶೀವ್ರತಂ ವಿಪ್ರ ಸರ್ವಪಾಪಪ್ರಣಾಶನಂ ॥ ೫೧ ॥

ತತಃ ಪ್ರಭಾತೇ ರಜನೀ ದ್ವಾದಶೀ ಶ್ರವಣಾನ್ವಿತಾ ।
ಆಗತಾ ತತ್ರ ಸಾ ನಾರೀ ರೋಷನಿರ್ಭರಮಾನಸಾ ॥ ೫೨ ॥

ನಿರಾಹಾರಕೃತಾದ್ವೈತ ಚ ನಿರ್ಮಲಾ ಸಾ ಬಭೂವ ಹ ।
ರಾತ್ರೌ ಚ ಪಂಚತಾಂ ಯಾತಾ ಜಯಂತೀವಾಸರೇ ದ್ವಿಜ ॥ ೫೩ ॥

---

೪೮. ಯಾವಾಗಲೂ ಜಾರನಲ್ಲಿಯೇ ಮನಸ್ಸಿಟ್ಟಿರುತ್ತಿದ್ದಳು. ನಾನು ಪತಿಪ್ರತೆಯೆಂದು ಹೇಳಿಕೊಳ್ಳುವಳು. ಗಂಡನೊಡನೆ ಯಾವಾಗಲೂ ಜಗಳವಾಡುತ್ತ ಮನಸ್ಸಿಗೆ ವ್ಯಥೆಯನ್ನುಂಟುಮಾಡುತ್ತಿದ್ದಳು.

೪೯. ಗಂಡನು ಒಂದುಬಾರಿ ನೋಡಿ ಬಯ್ದು ಆ ಪಾಪಿನಿಯನ್ನು ಹೊಡೆದನು.

೫೦. ಅವಳು ಕೋಪಗೊಂಡು ಪಾಳುಮನೆಯಲ್ಲಿ ಯಾರಿಗೂ ತಿಳಿಯದಂತೆ ಮಲಗಿಕೊಂಡಳು. ಅನ್ನ ನೀರುಗಳನ್ನು ತೆಗೆದುಕೊಳ್ಳಲೇ ಇಲ್ಲ.

೫೧. ಆ ದಿನ ಆಕಸ್ಮಾತ್ತಾಗಿ ಪರಿವರ್ತನ್ಯೈಕಾದಶಿಯಾಗಿದ್ದಿತು. ಅದು ಸರ್ವಪಾಪವನ್ನು ನಾಶಮಾಡುತ್ತದೆ.

೫೨. ಬೆಳಿಗ್ಗೆ ಮಾರನೆಯದಿನ ಶ್ರವಣದ್ವಾದಶಿಯು. ಆ ದಿನ ಬಹುಕೋಪದಿಂದ ಹೊರಗೆ ಬಂದಳು.

೫೩. ಉಪವಾಸಮಾಡಿದುದರಿಂದ ಆಕೆಯು ನಿರ್ಮಲಳಾದಳು. ಜಯಂತಿಯ ದಿನದ ಆ ರಾತ್ರಿಯೇ ಮೃತಳಾದಳು.

ಯಮಾಜ್ಞಯಾ ತತೋ ದೂತಾ ಆಗತಾಸ್ತಾಂ ತಥಾವಿಧಾಂ ।
ನೇತುಂ ಭಯಂಕರಾಸ್ತೇ ಚ ಪಾಶಮುದ್ಗರಪಾಣಯಃ ॥ ೩೪ ॥

ಬದ್ಧ್ವಾ ನೇತುಂ ಮನಶ್ಚಕ್ರುಃ ಕೃತಾಂತಸದನಂ ಯದಾ ।
ತದಾಗತಾ ವಿಷ್ಣುದೂತಾಃ ಶಂಖಚಕ್ರಗದಾಧರಾಃ ॥ ೩೫ ॥

ಛಿತ್ವಾ ಪಾಶಂ ತತೋ ದಿವ್ಯೇ ಸ್ಯಂದನೇ ತಾಂ ಗತೈನಸಂ ।
ತೇ ವೈ ಚಾರೋಹಯಾಮಾಸುರ್ನಿರ್ಮಲಾಂ ಭವನಂ ಹರೇಃ ॥ ೩೬ ॥

ಗತಾ ತೈರ್ವೇಷ್ಟಿತಾ ಸಾಥ ದುರ್ಲಭಂ ನಿರ್ಜರೈಶ್ಶುಭಂ ।
ವಿಷ್ಣೋರ್ದಿವಸಮಾಹಾತ್ಮ್ಯಂ ಕಥಿತಂ ತೇ ದ್ವಿಜರ್ಷಭ ॥ ೩೭ ॥

ಅನಿಚ್ಛಯಾಪಿ ಯಃ ಕುರ್ಯಾತ್ಸ ಯಾತಿ ಹರಿಮಂದಿರಂ ।
ಏಕಾದಶ್ಯಾ ದಿನೇ ಮರ್ತ್ಯೋ ದೀಪಂ ದಾತುಂ ಹರೇರ್ಗೃಹೇ ।
ಗಚ್ಛೇತ್ಪ್ರತಿಪದಂ ಸೋಽಪಿ ಚಾಶ್ವಮೇಧಫಲಾಧಿಕಂ ॥ ೩೮ ॥

---

೩೪. ಯಮನ ಅಪ್ಪಣೆಯಿಂದ ಭಯಂಕರರಾದ ದೂತರು ಅವಳನ್ನು ಕರೆದೊಯ್ಯಲು ಬಂದರು.

೩೫. ಕಟ್ಟಿಹಾಕಿ ಕರೆದುಕೊಂಡು ಹೋಗಲೆತ್ನಿಸಿದಾಗ, ಶಂಖಚಕ್ರಗದಾಪಾಣಿಗಳಾದ ವಿಷ್ಣುದೂತರು ಅಲ್ಲಿಗೆ ಬಂದರು.

೩೬. ಅವರು ಕಟ್ಟಿದ್ದ ಆ ಯಮಪಾಶವನ್ನು ಕತ್ತರಿ, ಉತ್ತಮವಾದ ರಥದಲ್ಲಿ ಕೂರಿಸಿಕೊಂಡು ವಿಷ್ಣುವಿನ ಮನೆಗೆ ಕರೆದುಕೊಂಡು ಹೋದರು.

೩೭. ಅವರೊಡನೆ ಅನಂತರ ದೇವತೆಗಳಿಗೂ ಹೊಂದಲಸಾಧ್ಯವಾದ ಶುಭವಾದ ವೈಕುಂಠವನ್ನು ಹೊಂದಿದಳು. ಈ ರೀತಿ ವಿಷ್ಣುದಿನದ ಮಹಿಮೆಯನ್ನು ಹೇಳಿದೆನು.

೩೮. ಇಚ್ಛೆಯಿಲ್ಲದೆ ಹರಿದಿನವನ್ನಾಚರಿಸಿದರೂ ಹರಿಮಂದಿರಕ್ಕೆ ಹೋಗುತ್ತಾನೆ. ಏಕಾದಶೀದಿನ ಹರಿಮಂದಿರಕ್ಕೆ ದೀಪವಿಚ್ಚಲು ಹೋಗುವವನು ಹೆಜ್ಜೆಹೆಜ್ಜೆಗೂ ಅಶ್ವಮೇಧಫಲವನ್ನು ಹೊಂದುತ್ತಾನೆ.

**ಶೃಣ್ವಂತಿ ಚ ಪುರಾಣಾನಿ ಪಠಂತಿ ಚ ಹರೇರ್ದಿನೇ ।**
**ಪ್ರತ್ಯಕ್ಷರಂ ಲಭಂತೇ ತೇ ಕಪಿಲಾದಾನಜಂ ಫಲಂ ॥ ೩೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಹರಿವಾಸರ ಮಾಹಾತ್ಮ್ಯಂ ನಾಮ ಪಂಚದಶೋಽಧ್ಯಾಯಃ**



---

೩೯. ಹರಿಯ ದಿನವಾದ ಏಕಾದಶಿಯದಿನ ಪುರಾಣಗಳನ್ನು ಓದಿದರೂ ಕೇಳಿದರೂ ಪ್ರತಿಯೊಂದು ಅಕ್ಷರಕ್ಕೂ ಕಪಿಲಾಗೋವಿನ ದಾನದ ಫಲವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಹರಿವಾಸರಮಾಹಾತ್ಮ್ಯ ಪಂಚ ದಶನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮ ಖಂಡೇ

## ಷೋಡಶೋಽಧ್ಯಾಯಃ

॥ ಶೌನಕ ಉವಾಚ ॥

ಕರ್ಮಣಾ ಕೇನ ಭೋಸ್ಸೂತ ಚೈನಸಾಂ ಸಂಕ್ಷಯೋ ಭವೇತ್ ।
ಶ್ರೀಹರೇಶ್ಚ ಕೃಪಾ ಭೂಯಾತ್ತದ್ವದಸ್ವಾನುಕಂಪಯಾ ॥ ೧ ॥

॥ ಸೂತ ಉವಾಚ ॥

ಶೃಣು ಶೌನಕ ವಕ್ಷ್ಯಾಮಿ ಶೃಣ್ವತಾಂ ಪಾಪನಾಶನಂ ।
ಯೇನ ವಿಷ್ಣೋಃ ಕೃಪಾ ಸ್ಯಾದ್ವೈ ವೃಜಿನಕ್ಷಯಕಾರಿಣೀ ॥ ೨ ॥

ಪೌರ್ಣಮಾಸ್ಯಾಂ ತು ಯೋ ವಿಪ್ರ ಭಕ್ತಿಭಾವಸಮನ್ವಿತಃ ।
ಕುರ್ಯಾನ್ನಾನಾವಿಧಾನೇನ ಸಪರ್ಯಾಂ ಶ್ರೀ ಜಗದ್ವಿಭೋಃ ॥ ೩ ॥

---

## ಹದಿನಾರನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಯಾವ ಕೆಲಸವನ್ನು ಮಾಡಿದರೆ ಪಾಪವೆಲ್ಲವೂ ನಾಶವಾಗುತ್ತದೆ? ಶ್ರೀಹರಿಯ ಕೃಪೆ ಬರುತ್ತದೆ? ಅದನ್ನು ಕೃಪೆಯಿಂದ ಹೇಳು.

೨. ಸೂತನು ಹೇಳಿದನು :—ಕೇಳುವವರಿಗೆ ಪಾಪನಾಶಕವಾದ, ವಿಷ್ಣುವಿನ ಕೃಪೆಯು ಉಂಟಾಗುವ ಬಗೆಯನ್ನು ಹೇಳುತ್ತೇನೆ ಕೇಳು.

೩. ಹುಣ್ಣಿಮೆಯದಿನ ಭಕ್ತಿಯಿಂದ ಸ್ವಾಮಿಯಾದ ವಿಷ್ಣುವಿನ ಪೂಜೆಮಾಡಬೇಕು.

ಕಲುಷಂ ತಸ್ಯ ನಶ್ಯೇತ ಕೋಟಿಜನ್ಮಾರ್ಜಿತಂ ಮುನೇ ।
ತಸ್ಮಿನ್ ಶ್ರೀರಮಣಸ್ಯಾಸ್ಯ ಕೃಪಾ ಜಾತಾ ಭವೇದ್ಧ್ರುವಂ ॥ ೪ ॥

ದ್ವಾದಶ್ಯಾಮನ್ನದಾನಂ ಯೋ ಭಕ್ತ್ಯಾ ಕುರ್ಯಾದ್ದ್ವಿಜಾತಯೇ ।
ತಸ್ಯ ನಶ್ಯಂತಿ ಪಾಪಾನಿ ತಮಾಂಸೀವಾರುಣೋದಯೇ ॥ ೫ ॥

ಯೋ ನರಶ್ಶ್ರೀಹರೇಃ ಕುರ್ಯಾತ್ ಸ್ನಪನಂ ಪಯಸಾ ದ್ವಿಜ ।
ತಸ್ಯ ಪ್ರೀತಿಶ್ಶ್ರೀಹರೇಸ್ಸದ್ಯೋ ದ್ವಾದಶ್ಯಾಂ ಶರ್ಕರಾದಿಭಿಃ ॥ ೬ ॥

ಮಂತ್ರಂ ವಿನಾ ತು ಯೋ ವಿಪ್ರ ದದ್ಯಾಚ್ಛ್ರೀಹರಯೇ ಕಿಲ ।
ಪಾಷಾಣಸದೃಶಂ ಪುಷ್ಪಂ ದಾತಾ ಯಾತಿ ಅಧೋಗತಿಂ ॥ ೭ ॥

ಕ್ಷ್ಮಾಸುರಾಯ ಚ ಮೂರ್ಖಾಯ ಪಾಷಾಣಸದೃಶಂ ತು ಯತ್ ।
ದದ್ಯಾದ್ದಾನಂ ನರೋ ಯೋ ವೈ ತಸ್ಯ ಪುಣ್ಯಂ ನ ವಿದ್ಯತೇ ॥ ೮ ॥

ವಿದ್ಯಾಹೀನೋ ದ್ವಿಜೋ ಮೋಹಾದ್ದಾನಂ ಗೃಹ್ಣಾತಿ ಮೂಢಧೀಃ ।
ಕಾಲಾನಲಂ ಯಥಾ ಜೀರ್ಣಂ ತೇನಾಸೌ ನಿರಯಂ ವ್ರಜೇತ್ ॥ ೯ ॥

---

೪. ಅವನ ಅನೇಕ ಜನ್ಮಗಳಿಸಿದ ಪಾಪವು ನಾಶವಾಗಿ ಶ್ರೀರಮಣನ ದಯೆಯುಂಟಾಗುತ್ತವೆ.

೫. ದ್ವಾದಶಿಯದಿನ ಭಕ್ತಿಯಿಂದ ಅನ್ನದಾನಮಾಡಿದರೆ ಅವನ ಪಾಪಗಳು ಅರುಣೋದಯವಾದರೆ ಕತ್ತಲೆಯು ತೊಲಗುವಂತೆ ತೊಲಗುವುದು.

೬. ದ್ವಾದಶಿಯದಿನ ಹರಿಗೆ ಪಂಚಾಮೃತಸ್ನಾನವನ್ನು ಮಾಡಿಸಿದರೆ ಹರಿಯ ಪ್ರೀತಿಯು ಒಡನೆ ಉಂಟಾಗುತ್ತದೆ.

೭. ಮಂತ್ರವನ್ನು ಹೇಳದೆಯೂ, ಅರಳದಿರುವ ಕಠಿಣವಾದ ಹೂವನ್ನು ಯಾವನು ಪೂಜೆಮಾಡುತ್ತಾನೋ ಅವನು ನರಕವನ್ನು ಹೊಂದುತ್ತಾನೆ.

೮. ಬ್ರಾಹ್ಮಣನಿಗೆ ಕಲ್ಲಿನಂತೆ ಪ್ರಯೋಜನವಾಗದ ದಾನವನ್ನು ಕೊಟ್ಟರೆ ಅವನಿಗೆ ಪುಣ್ಯಬರುವುದಿಲ್ಲ.

೯. ವಿದ್ಯೆಯಿಲ್ಲದವನು ತಿಳುವಳಿಕೆಯಿಲ್ಲದೆ ದಾನ ತೆಗೆದುಕೊಂಡರೆ, ಆರಿ ಹೋದ ಬೆಂಕಿಯಂತೆ ಅವನು ನರಕಭಾಗಿಯಾಗುತ್ತಾನೆ.

ಯಥಾ ದಾರುಮಯೋ ಹಸ್ತೀ ಮೃಗಶ್ಚಿತ್ರಮಯೋ ಯಥಾ ।
ವಿದ್ಯಾಹೀನೋ ದ್ವಿಜೋ ವಿಪ್ರ ತ್ರಯಸ್ತೇ ನಾಮಧಾರಕಾಃ ॥ ೧೦ ॥

ಯಥಾಧ್ವನಿ ಸ್ಥಿತಂ ವಾರಿ ಪವನಾರ್ಕೇಣ ಶುಧ್ಯತಿ ।
ಭಕ್ತ್ಯಾ ತು ಪಾರ್ಷದಂ ದೃಷ್ಟ್ವಾ ತಸ್ಯ ನಶ್ಯತಿ ಕಲ್ಮಷಂ ॥ ೧೧ ॥

ಯೋ ನರಶ್ಚಾಶ್ವಿನೇ ಮಾಸಿ ಸಘೃತಾಂ ಪೂರ್ಣಿಮಾದಿನೇ ।
ದದ್ಯಾಚ್ಛ್ರೀಹರಯೇ ಲಾಜಾಂ ಕ್ರೀಡಾರ್ಥಂ ತು ವರಾಟಿಕಾಂ ॥ ೧೨ ॥

ಭಕ್ತ್ಯಾ ಯಾತಿ ಹರೇಸ್ಸ್ಥಾನಂ ಪುನರಾವೃತ್ತಿವರ್ಜಿತಃ ।
ನ ದದ್ಯಾದ್ಯೋ ನರೋ ಮೋಹಾತ್ತಸ್ಮಿನ್ನತುಷ್ಟಿದೋ ಹರಿಃ ॥ ೧೩ ॥

ವರಾಟಿಕಾಂ ಯಾವತೀಂ ಯೋ ಹರಯೇ ಪೂರ್ಣಿಮಾದಿನೇ ।
ತಾವದ್ದಿನಂ ಹರೇಸ್ಸ್ಥಾನಂ ಚಾಶ್ವಿನೇ ಸ ವಸೇದ್ಧ್ರುವಂ ॥ ೧೪ ॥

ಕರವೀರಪುರೇ ಹ್ಯಾಸೀತ್ಪುರಾ ಶೂದ್ರೋಽಪಿ ನಿರ್ದಯಃ ।
ಕಾಲದ್ವಿಜೋ ದ್ವಿಜಶ್ರೇಷ್ಠ ನಾಮ್ನಾ ಪಾಪೀ ಭಯಂಕರಃ ॥ ೧೫ ॥

---

೧೦. ಮರದ ಆನೆ, ಚಿತ್ರದಲ್ಲಿಬರೆದ ಮೃಗ, ವಿದ್ಯಾಹೀನನಾದ ಬ್ರಾಹ್ಮಣ, ಇವರು ಆಯಾ ಹೆಸರನ್ನು ಹೊಂದಿರುವವರೇ ಹೊರತು ಅವರ ಕ್ರಿಯೆ ಇರುವುದಿಲ್ಲ.

೧೧. ದಾರಿಯಲ್ಲಿರುವ ನೀರು ಸೂರ್ಯರಶ್ಮಿಯಿಂದ ಶುದ್ಧವಾಗುವಂತೆ ಭಕ್ತಿಯಿಂದ ಸಭೆಯನ್ನು ನೋಡಿಕೊಡುವುದರಿಂದ ಮಾತ್ರ ಪಾಪನಾಶವಾಗುತ್ತದೆ.

೧೨. ಆಶ್ವಯುಜದಲ್ಲಿ ಪೂರ್ಣಿಮೆಯಲ್ಲಿ ಹರಿಪ್ರೀತಿಯಾಗಿ ತುಪ್ಪದಿಂದ ಸೇರಿದ ಅರಳನ್ನೂ, ಕವಡೆಯನ್ನೂ ಕೊಡಬೇಕು.

೧೩. ಭಕ್ತಿಯಿಂದ ಪೂಜೆಮಾಡಿದರೆ ಪುನರಾವೃತ್ತಿರಹಿತವಾದ ಹರಿಯ ಸ್ಥಾನವನ್ನು ಹೊಂದುತ್ತಾನೆ. ಭಕ್ತಿಯಿಂದ ಕೊಡದಿದ್ದರೆ ಹರಿಗೆ ತೃಪ್ತಿಯಾಗುವುದಿಲ್ಲ.

೧೪. ಪೂರ್ಣಿಮೆಯಲ್ಲಿ ಹರಿಗೆ ಎಷ್ಟು ಕವಡೆಗಳನ್ನು ದಾನಮಾಡುತ್ತಾನೆಯೋ ಅಷ್ಟು ದಿನಗಳು ಹರಿಯ ಸ್ಥಾನದಲ್ಲಿರುತ್ತಾನೆ. ನಿಶ್ಚಯವು.

೧೫. ಕರವೀರಪುರದಲ್ಲಿ ನಿರ್ದಯನಾದ ಪಾಪಿಯೂ, ಭಯಂಕರನೂ ಆದ ಕಾಲದ್ವಿಜನೆಂಬ ಶೂದ್ರನಿದ್ದನು.

ಸ್ವಕಾರ್ಯನಿರತಸ್ಸೋಽಪಿ ಸ್ವಾಮಿಕಾರ್ಯಪ್ರಣಾಶಕಃ ।
ಏಕದಾ ಪಂಚತಾಂ ಯಾತೋ ಯಮದೂತಾ ಭಯಂಕರಾಃ ॥ ೧೬ ॥

ಆಗತಾಸ್ತಂ ಸಮಾನೇತುಂ ಯಮಸ್ಯ ತು ನಿಕೇತನಂ ।
ಬಧ್ವಾ ನಿನ್ಯುಶ್ಚ ತಂ ದೃಷ್ಟ್ವಾ ಪೃಷ್ಟವಾನ್ಸಚಿವಂ ಯಮಃ ॥ ೧೭ ॥

॥ ಯಮ ಉವಾಚ ॥
ಅಸ್ಯ ಕಿಂ ವಿದ್ಯತೇಽಮಾತ್ಯ ಕರ್ಮಾಪಿ ಚ ಶುಭಾಶುಭಂ ।
ಕಥಯಸ್ವ ಸಮೂಲಂ ತು ಚಿತ್ರಗುಪ್ತ ವಿಚಕ್ಷಣ ॥ ೧೮ ॥

॥ ಚಿತ್ರಗುಪ್ತ ಉವಾಚ ॥
ಅಸೌ ಪಾಪೀ ದುರಾಚಾರಃ ಸ್ವಾಮಿಕಾರ್ಯಪ್ರಣಾಶಕಃ ।
ನಾಸ್ತಿ ಪುಣ್ಯಂ ಚಾಣುಮಾತ್ರಂ ನರಕೇ ಪರಿಪಚ್ಯತಾಂ ॥ ೧೯ ॥

ಶತಮನ್ವಂತರಂ ರಾಜನ್ನಾಗಯೋನೌ ಚ ನಿಷ್ಠುರಃ ।
ಪಾಷಾಣಗೃಹಮಾಸಾದ್ಯ ಗೂಢಶ್ಚಾಸ್ತು ನಿರಂತರಂ ॥ ೨೦ ॥

---

೧೬-೧೭. ಅವನು ಯಾವಾಗಲೂ ತನ್ನ ಕೆಲಸಮಾಡಿಕೊಳ್ಳುವನು. ಸ್ವಾಮಿಕಾರ್ಯವನ್ನು ನಾಶಮಾಡುವನು. ಹೀಗಿರಲು ಸತ್ತುಹೋದನು. ಭಯಂಕರರಾದ ಯಮದೂತರು ಬಂದು ಕಟ್ಟಿಕೊಂಡು ಯಮನ ಬಳಿಗೆ ಕೊಂಡೊಯ್ದರು. ಅಲ್ಲಿ ಆ ಯಮನು ಚಿತ್ರಗುಪ್ತರನ್ನು ಪ್ರಶ್ನಿಸಿದನು.

೧೮. ಯಮನು ಹೇಳಿದನು :—ಎಲೈ ಚಿತ್ರಗುಪ್ತನೆ, ಇವನ ಪಾಪಪುಣ್ಯಕರವಾದ ಕರ್ಮಗಳೇನುಂಟು? ಹೇಳು.

೧೯. ಇವನು ಪಾಪಿಯು. ತನ್ನ ಕೆಲಸವನ್ನು ಮಾಡಿಕೊಳ್ಳುವನು. ಸ್ವಾಮಿಯ ಕೆಲಸವನ್ನು ನಾಶಮಾಡುವನು. ಆದ್ದರಿಂದ ಪುಣ್ಯವು ಸ್ವಲ್ಪವೂ ಇಲ್ಲ. ನರಕದಲ್ಲಿ ನೂಕು.

೨೦. ಒಬ್ಬರಿಗೂ ಕಾಣದಂತೆ ಕಲ್ಲಿನ ಮನೆಯಲ್ಲಿ ನೂರು ಮನ್ವಂತರಗಳು ಇರಲಿ. ಆಮೇಲೆ ಸರ್ಪದ ಜನ್ಮದಲ್ಲಿ ಹುಟ್ಟಲಿ.

॥ ಸೂತ ಉವಾಚ ॥

ತಾವತ್ಕಾಲಂ ತತೋ ವಿಪ್ರ ನಿರಯೇ ಸ ಪಪಾತ ಹ ।
ತತೋಽಪ್ಯಶ್ಮಗೃಹೇ ನಾಗಯೋನೌ ಜಾತಸ್ಸುದುಃಖಿತಃ ॥ ೨೧ ॥

ಏಕದಾಚಾಶ್ವಿನೇ ಮಾಸಿ ಪೌರ್ಣಮಾಸೀದಿನೇ ದ್ವಿಜ ।
ಲಾಜಾ ವರಾಟಿಕಾ ನಾಗೋ ಬಿಲಾತ್ಪ್ರಾಕ್ಷೇಯಯದ್ಬಹಿಃ ॥ ೨೨ ॥

ಪತಿತಾ ಸಾ ಹರೇರಗ್ರೇ ಪಾಪಮಸ್ಯ ಸ್ವಯಂ ಹರಿಃ ।
ತೂರ್ಣಂ ತು ನಾಶಯಾಮಾಸ ದಯಾಲುರ್ದುಃಖನಾಶಕಃ ॥ ೨೩ ॥

ಕದಾಚಿತ್ಪ್ರಾಪ್ತಕಾಲಸ್ತು ಪಂಚತ್ವಂ ಸ ಜಗಾಮ ಹ ।
ಯಮದೂತಾಸ್ಸಮಾನೇತುಮಾಗತಾ ಬಹುಶೋ ದ್ವಿಜ ॥ ೨೪ ॥

ಬದ್ಧ್ವಾ ನೇತುಂ ಯದಾ ಚಕ್ರುರ್ಯಮಸ್ಯ ಸದನಂ ಪ್ರತಿ ।
ತದಾಗತಾ ವಿಷ್ಣುದೂತಾಃ ಶಂಖಚಕ್ರಗದಾಧರಾಃ ॥ ೨೫ ॥

ಪಾಶಂ ಛಿತ್ವಾ ರಥೇ ದಿವ್ಯೇ ತಮಾಶು ಗತಕಿಲ್ಬಿಷಂ ।
ತತ್ರ ಚಾರೋಪಯಾಮಾಸುರ್ಯಮದೂತಾಃ ಪಲಾಯಿತಾಃ ॥ ೨೬ ॥

---

೨೧. ಆ ಶತಮನ್ವಂತರಗಳವರೆಗೂ ನರಕದಲ್ಲಿ ಹಾಕಿ ಕಲ್ಲಿನ ಮನೆಯಲ್ಲಿಟ್ಟಿದ್ದರು. ಅನಂತರ ಸರ್ಪದ ಹೊಟ್ಟೆಯಲ್ಲಿ ಹುಟ್ಟಿದನು.

೨೨. ಒಂದುಸಾರಿ ಕಾರ್ತಿಕಮಾಸದಲ್ಲಿ ಪೌರ್ಣಮಾಸ್ಯೆಯಲ್ಲಿ ಅರಳನ್ನೂ ಕವಡೆಯನ್ನೂ ಬಿಲದಿಂದ ಹೊರಕ್ಕೆ ಎಸೆಯಿತು.

೨೩. ಅದು ಹರಿಯ ಮುಂದೆ ಬಿದ್ದವು. ಅದರ ಪಾಪವನ್ನು ಹರಿಯು ನಾಶಮಾಡಿದನು. ಅದರ ದುಃಖವು ಹೋಯಿತು.

೨೪. ಹೀಗಿರಲು ಸತ್ತಿತು. ಆಗ ಬಹುಜನ ಯಮದೂತರು ಕೊಂಡೊಯ್ಯಲು ಬಂದರು.

೨೫. ಕಟ್ಟಿ ಯಮನ ಬಳಿಗೆ ತೆಗೆದುಕೊಂಡು ಹೋಗುವಷ್ಟರಲ್ಲಿ ವಿಷ್ಣು ದೂತರು ಬಂದರು.

೨೬. ಪಾಶವನ್ನು ಕತ್ತರಿಸಿ ದಿವ್ಯವಾದ ರಥದಲ್ಲಿ ಕೂರಿಸಿದರು. ಯಮ ದೂತರು ಓಡಿಹೋದರು.

ತತೋ ನಿಕೇತನಂ ವಿಷ್ಣೋರ್ನಾಗಸ್ತೈರ್ವೇಷ್ಟಿತೋ ಯಯೌ ।
ತತ್ರ ತಸ್ಥೌ ಹರೇರಗ್ರೇ ಪುನರಾವೃತ್ತಿವರ್ಜಿತಃ ॥ ೨೭ ॥

ಭಕ್ತ್ಯಾ ಯೋ ಹರಯೇ ದದ್ಯಾಲ್ಲಾಜಾಂ ಚ ಸಘೃತಾಂ ದ್ವಿಜ ।
ವರಾಟಿಕಾಂ ತಸ್ಯ ಪುಣ್ಯಂ ನ ಜಾನೇ ಕಿಂ ಭವೇದ್ಧ್ರುವಂ ॥ ೨೮ ॥

ಯ ಇಮಂ ಶೃಣುಯಾದ್ವಿಪ್ರ ಚಾಧ್ಯಾಯಂ ಪಾಪನಾಶನಂ ।
ತಸ್ಯ ನಶ್ಯಂತಿ ಪಾಪಾನಿ ಶ್ರೀಹರೇಃ ಕೃಪಯಾಪಿ ಚ ॥ ೨೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತ
ಶೌನಕಸಂವಾದೇ ಷೋಡಶೋಽಧ್ಯಾಯಃ

---

೨೭. ಆಮೇಲೆ ಆ ದೂತರೊಡನೆ ವಿಷ್ಣುವಿನ ಬಳಿಗೆ ಹೋಗಿ ಅವನ ಹತ್ತಿರವೇ ಪುನರಾವೃತ್ತಿಯಿಲ್ಲದೆ ಸುಖದಿಂದಿದ್ದಿತು.

೨೮. ಭಕ್ತಿಯಿಂದ ಅರಳನ್ನೂ ಕವಡೆಯನ್ನೂ ತುಪ್ಪವನ್ನೂ ಕೊಟ್ಟರೆ ಎಷ್ಟು ಪುಣ್ಯಬರುತ್ತದೆಯೋ ನಾನು ಕಾಣೆನು.

೨೯. ಈ ಅಧ್ಯಾಯವು ಪಾಪನಾಶಕವು. ಇದನ್ನು ಕೇಳಿದರೆ, ಹರಿಯ ಕೃಪೆಯಿಂದ ಆತನ ಪಾಪಗಳು ನಾಶವಾಗುತ್ತವೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಬ್ರಹ್ಮಖಂಡದಲ್ಲಿ ಸೂತಶೌನಕಸಂವಾದದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ಸಪ್ತದಶೋಽಧ್ಯಾಯಃ



॥ ಶೌನಕ ಉವಾಚ ॥

ವಿಷ್ಣುಪಾದೋದಕಸ್ಯಾಪಿ ಮಾಹಾತ್ಮ್ಯಂ ಪಾಪನಾಶನಂ ।
ಕಥಯಸ್ವ ಮಹಾಪ್ರಾಜ್ಞ ಸಮೂಲಂ ಮೇ ಕೃಪಾರ್ಣವ ॥ ೧ ॥

॥ ಸೂತ ಉವಾಚ ॥

ಸಮಸ್ತಪಾತಕಧ್ವಂಸಿ ವಿಷ್ಣುಪಾದೋದಕಂ ಶುಭಂ ।
ಕಣಮಾತ್ರಂ ವಹೇದ್ಯಸ್ತು ಸರ್ವತೀರ್ಥಫಲಂ ಲಭೇತ್ ॥ ೨ ॥

ವಿಷ್ಣುಪಾದೋದಕಂ ಪಾಪೀ ಯಃ ಪಿಬೇತ್ತಸ್ಯ ಕಲ್ಮಷಂ ।
ಶರೀರಸ್ಥಂ ಕ್ಷಯಂ ಯಾತಿ ಕೃತಂ ಬ್ರಹ್ಮನ್ನ ಸಂಶಯಃ ॥ ೩ ॥

---

### ಹದಿನೇಳನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಪಾಪನಾಶಕವಾದ ವಿಷ್ಣುಪಾದೋದಕದ ಮಹಿಮೆಯನ್ನು ಹೇಳು. ಕಾರಣಸಹಿತವಾಗಿ ಕೇಳಬೇಕೆಂಬ ಆಸೆಯಿದೆ.

೨. ಸೂತನು ಹೇಳಿದನು :—ವಿಷ್ಣುಪಾದೋದಕವು ಸಮಸ್ತ ಪಾಪಗಳನ್ನು ನಾಶಮಾಡುತ್ತದೆ. ಒಂದು ಬಿಂದುವನ್ನಾದರೂ ಧರಿಸಿದರೆ ಸರ್ವತೀರ್ಥಫಲವೂ ಬರುತ್ತದೆ.

೩. ಯಾವ ಪಾಪಿಯು ವಿಷ್ಣುಪಾದೋದಕವನ್ನು ಕುಡಿಯುತ್ತಾನೆಯೋ ಅವನ ದೇಹದಲ್ಲಿರುವ ಪಾಪವೆಲ್ಲಾ ಹೋಗುತ್ತದೆ. ಸಂಶಯವಿಲ್ಲ.

ವಿಷ್ಣುಪಾದೋದಕಂ ಬ್ರಹ್ಮನ್ ಸ್ಪರ್ಶನಾತ್ಪಾಪನಾಶನಂ ।
ಅಕಾಲಮರಣಂ ನಾಸ್ತಿ ಗಂಗಾಸ್ನಾನಫಲಂ ಲಭೇತ್ ॥ ೪ ॥

ತುಲಸೀಪರ್ಣಸಂಯುಕ್ತಂ ವಿಷ್ಣುಪಾದೋದಕಂ ದ್ವಿಜ ।
ಯೋ ವಹೇಚ್ಛಿರಸಾ ಭಕ್ತ್ಯಾ ಚಾಂತೇ ಯಾತಿ ಹರೇರ್ಗೃಹಂ ॥ ೫ ॥

ಮೇರುತುಲ್ಯಸುವರ್ಣಾನಿ ದತ್ವಾ ಯತ್ಫಲಮಾಪ್ಯತೇ ।
ಹರಿಪಾದೋದಕಂ ಸ್ಪೃಷ್ಟ್ವಾ ಪ್ರಾಪ್ಯತೇ ತತ್ಫಲಂ ನರೈಃ ॥ ೬ ॥

ಧೇನುಕೋಟಿಸಹಸ್ರಾಣಿ ಯತ್ಫಲಂ ಲಭತೇ ನರೈಃ ।
ದತ್ವಾ ಪಾದೋದಕಂ ಸ್ಪೃಷ್ಟ್ವಾ ತತ್ಫಲಂ ಪ್ರಾಪ್ಯತೇ ಧ್ರುವಂ ॥ ೭ ॥

ಕೋಟಿಕನ್ಯಾಪ್ರದಾನೇನ ಯತ್ಫಲಂ ಲಭ್ಯತೇ ಜನೈಃ ।
ವಿಷ್ಣುಪಾದೋದಕಂ ಸ್ಪೃಷ್ಟ್ವಾ ಫಲಂ ತಸ್ಮಾದ್ದ್ವಿಜಾಧಿಕಂ ॥ ೮ ॥

ಯಜ್ಞಕೋಟಿಸಹಸ್ರಾಣಿ ಕೃತ್ವಾ ಯತ್ಫಲಮಾಪ್ಯತೇ ।
ಹರಿಪಾದೋದಕಂ ಸ್ಪೃಷ್ಟ್ವಾ ಪ್ರಾಪ್ಯತೇ ತತ್ಫಲಂ ನರೈಃ ॥ ೯ ॥

---

೪. ವಿಷ್ಣುಪಾದೋದಕವನ್ನು ಸ್ಪರ್ಶಮಾಡಿದರೇನೆ ಪಾಪವೆಲ್ಲಾ ಹೋಗಿ ಅಕಾಲಮರಣವುಂಟಾಗದೆ ಗಂಗಾಸ್ನಾನಫಲವು ಬರುತ್ತದೆ.

೫. ವಿಷ್ಣುಪಾದೋದಕಕ್ಕೆ ತುಲಸೀಎಲೆಯನ್ನು ಹಾಕಿ ತೆಗೆದುಕೊಂಡರೆ ಅವನು ಕೊನೆಯಲ್ಲಿ ವಿಷ್ಣುಲೋಕವನ್ನು ಹೊಂದುತ್ತಾನೆ.

೬. ಮೇರುವಿನಷ್ಟು ಚಿನ್ನವನ್ನು ದಾನಮಾಡಿದರೆ ಬರುವ ಫಲವು ಹರಿಪಾದೋದಕವನ್ನು ಮುಟ್ಟಿದರೇನೆ ಬರುತ್ತದೆ.

೭. ಕೋಟಿ ಗೋದಾನವನ್ನು ಮಾಡಿದರೆ ಬರುವ ಫಲವು ಹರಿಪಾದೋದಕವನ್ನು ಮುಟ್ಟುವುದರಿಂದಲೇ ಬರುತ್ತದೆ.

೮. ಕೋಟಿಕನ್ಯಾದಾನದಿಂದ ಬರುವ ಫಲವು ವಿಷ್ಣುಪಾದೋದಕವನ್ನು ಮುಟ್ಟುವುದರಿಂದ ಬರುತ್ತದೆ.

೯. ಕೋಟಿ ಯಜ್ಞಗಳನ್ನು ಮಾಡಿದರೆ ಬರುವ ಫಲವು ಹರಿಪಾದೋದಕ ಮುಟ್ಟುವುದರಿಂದಲೇ ಬರುತ್ತದೆ.

ದಂತಿಕೋಟಿಪ್ರದಾನೇನ ಸಪ್ತಕೋಟಿಪ್ರದಾನತಃ ।
ಯತ್ಫಲಂ ಲಭತೇ ಮರ್ತ್ಯಃ ಸ್ಪೃಷ್ಟ್ವಾ ಪಾದೋದಕಂ ಹರೇಃ ॥ ೧೦ ॥

ದತ್ವಾ ಮರ್ತ್ಯಃ ಸಪ್ತದ್ವೀಪಾಂ ಸಸಸ್ಯಾಂ ಯತ್ಫಲಂ ಲಭೇತ್ ।
ವಿಷ್ಣುಪಾದೋದಕಂ ಸ್ಪೃಷ್ಟ್ವಾ ತಸ್ಮಾದ್ದ್ವಿಪ್ರಾಧಿಕಂ ಲಭೇತ್ ॥ ೧೧ ॥

ಶೃಣು ವಿಪ್ರ ಪ್ರವಕ್ಷ್ಯಾಮಿ ಸಂಕ್ಷೇಪಾದಧಿಕಂ ಕಿಮು ।
ವಿಷ್ಣುಪಾದೋದಕಂ ಸ್ಪೃಷ್ಟ್ವಾ ಪಾಪೀ ಯಾತಿ ಹರೇರ್ಗೃಹಂ ॥ ೧೨ ॥

॥ ಶೌನಕ ಉವಾಚ ॥

ಸ್ಪೃಷ್ಟ್ವಾ ಪೀತ್ವಾ ಪುರಾ ಕೇನ ಪ್ರಾಣಿನಾಽಪ್ರಾಪಿ ತಂ ಗೃಹಂ ।
ಕಥಯಸ್ವ ಹರೇಃ ಸೂತ ಮಮ ತ್ವಂ ಚಾನುಕಂಪಯಾ ॥ ೧೩ ॥

॥ ಸೂತ ಉವಾಚ ॥

ಪುರಾ ತ್ರೇತಾಯುಗೇ ಪಾಪೀ ನಾಮ್ನಾ ವಿಪ್ರಸ್ಸುದರ್ಶನಃ ।
ಜನಾರ್ದನದಿನೇ ನಿತ್ಯಮಶ್ನೀಯಾತ್ಸ ದ್ವಿಜೋತ್ತಮ ॥ ೧೪ ॥

---

೧೦. ಏಳು ಕೋಟಿ ಆನೆಗಳನ್ನು ದಾನಮಾಡಿದರೆ ಬರುವ ಪುಣ್ಯವು ಹರಿ ಪಾದೋದಕವನ್ನು ಮುಟ್ಟುವುದರಿಂದಲೇ ಬರುತ್ತದೆ.

೧೧. ಸಸ್ಯಗಳಿಂದ ಕೂಡಿದ ಸಪ್ತದ್ವೀಪಗಳನ್ನು ದಾನಮಾಡಿದರೆ ಬರುವ ಫಲಕ್ಕಿಂತಲೂ ಹೆಚ್ಚು ಫಲವು ವಿಷ್ಣುಪಾದೋದಕವನ್ನು ಮುಟ್ಟುವುದರಿಂದಲೇ ಬರುತ್ತದೆ.

೧೨. ಹೆಚ್ಚಿನಿಂದೇನು ? ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ವಿಷ್ಣು ಪಾದೋದಕವನ್ನು ಮುಟ್ಟಿದರೇನೆ ಪಾಪಿಯು ವಿಷ್ಣುಲೋಕವನ್ನು ಹೊಂದುತ್ತಾನೆ.

೧೩. ಶೌನಕನು ಕೇಳಿದನು:—ಮುಟ್ಟಿ, ಕುಡಿದು, ಮಾಡಿದುದರಿಂದ ಯಾವನು ವೈಕುಂಠಕ್ಕೆ ಹೋದನು ? ಇದನ್ನು ದಯೆಯಿಂದ ನನಗೆ ಹೇಳು.

೧೪. ಸೂತನು ಹೇಳಿದನು :—ಪೂರ್ವದಲ್ಲಿ ತ್ರೇತಾಯುಗದಲ್ಲಿ ಒಬ್ಬ ಸುದರ್ಶನನೆಂಬ ಬ್ರಾಹ್ಮಣನು ಇದ್ದನು ಅವನು ಮಹಾಪಾಪಿಯು. ಹರಿದಿನದಲ್ಲೆಲ್ಲಾ ಊಟಮಾಡುತ್ತಿದ್ದನು.

ಶಾಸ್ತ್ರನಿಂದಾಕರೋ ನಿತ್ಯಂ ವ್ರತನಿಂದಾಕರಸ್ಸದಾ ।
ಅಸಾವನ್ಯನ್ನ ಜಾನಾತಿ ಕೇವಲಂ ಸ್ವೋದರಂ ವಿನಾ ॥ ೧೫ ॥

ಏಕದಾ ಪ್ರಾಪ್ತಕಾಲಸ್ತು ನಿಧನಂ ಪ್ರಾಪ್ತವಾನ್ದ್ವಿಜ ।
ಯಮದೂತಾಸ್ಸಮಾಯಾತಾ ಬಧ್ವಾ ನೀತೋ ಯಮಾಲಯಂ ॥ ೧೬ ॥

ತಂ ದೃಷ್ಟ್ವಾ ಯಮುನಾಭ್ರಾತಾ ಪಪ್ರಚ್ಛ ಸಚಿವಂ ರುಷಾ ।
ಭೋಽಮಾತ್ಯ ಚಾಸ್ಯ ಯತ್ಪುಣ್ಯಂ ಪಾಪಂ ವದ ಸಮೂಲತಃ
ಅಸೌ ವಿಪ್ರೋ ಮಹಾಪಾಪೀ ಕ್ರೂರಕರ್ಮೈವ ದೃಶ್ಯತೇ । ॥ ೧೭ ॥

॥ ಚಿತ್ರಗುಪ್ತ ಉವಾಚ ॥

ಆಕರ್ಣಯ ಚಾಸ್ಯ ಪಾಪಂ ಪುಣ್ಯಂ ನಾಸ್ತ್ಯಣುಮಾತ್ರಕಂ ।
ವಾಸರೇಽಪಿ ಹರೇರ್ನಿತ್ಯಮಕರೋದ್ಭೋಜನಂ ವಿಭೋ ॥ ೧೮ ॥

ವಾಸರೇ ಕಮಲಾಭರ್ತುರ್ಯಶ್ಚಾಶ್ನೀಯಾದ್ಯೋ ನರಾಧಮಃ ।
ಪುರೀಷಂ ಸೋಽಶ್ನೀಯಾತ್ಪ್ರಾಜನ್ನಿರಯಂ ಯಾತಿ ದಾರುಣಂ ॥ ೧೯ ॥

---

೧೫. ಯಾವಾಗಲೂ ಶಾಸ್ತ್ರಗಳನ್ನೂ, ವ್ರತಗಳನ್ನೂ ನಿಂದಿಸುತ್ತಿದ್ದನು. ತಾನು ಹೊಟ್ಟೆತುಂಬಿಕೊಳ್ಳುವುದನ್ನು ಬಿಟ್ಟು ಮತ್ತೊಂದನ್ನೂ ತಿಳಿಯನು.

೧೬. ಹೀಗಿರಲು ಕಾಲ ಸಮೀಪಿಸಿದ್ದುದರಿಂದ ಸತ್ತನು. ಯಮದೂತರು ಬಂದು ಕಟ್ಟಿಕೊಂಡು ಯಮಪುರಕ್ಕೆ ಹೋದರು.

೧೭. ಅವನನ್ನು ನೋಡಿ ಯಮನು, ಎಲೈ ಚಿತ್ರಗುಪ್ತನೇ, ಇವನು ಮಾಡಿದ ಪುಣ್ಯಪಾಪಗಳೇನು? ಇವನುಮಹಾಪಾಪಿಯೆಂದೇ ಕಾಣುತ್ತಾನಲ್ಲ ಎನ್ನಲು

೧೮. ಚಿತ್ರಗುಪ್ತನು ಹೇಳಿದನು:-ಹೌದು, ಇವನು ಮಹಾಪಾಪಿಯು. ಪುಣ್ಯವೆಂಬುದು ಸ್ವಲ್ಪವೂ ಇಲ್ಲ. ಹರಿಯ ದಿನದಲ್ಲಿ ಕೂಡ ಊಟಮಾಡುತ್ತಿದ್ದನು.

೧೯. ಹರಿಯ ದಿನದಲ್ಲಿ ಊಟಮಾಡಿದರೆ ಅಮೇಧ್ಯವನ್ನು ತಿಂದಂತೆ ಆಗುತ್ತದೆ. ಆ ಪಾಪಿಯು ನರಕವನ್ನು ಹೊಂದುತ್ತಾನೆ.

ಮನ್ವಂತರಶತಂ ದೇಹಿ ಸ್ಥಾನಂ ತು ನಿರಯೇಽಸ್ಯಮುಂ ।
ಗ್ರಾಮಕ್ರೋಡಸ್ಯ ಯೋನೌ ಹಿ ತತೋ ಜನ್ಮ ಭವಿಷ್ಯತಿ ॥ ೨೦ ॥

॥ ಸೂತ ಉವಾಚ ॥

ಯಮಾಜ್ಞಯಾ ತತೋ ವಿಪ್ರ ತಸ್ಯ ದೂತೈರ್ಭಯಂಕರೈಃ ।
ಪಾತಿತಸ್ತು ಪುರೀಷೇ ವೈ ಮನ್ವಂತರಶತಾಧಿಕಂ ॥ ೨೧ ॥

ತತೋ ಮುಕ್ತೋಽಭವಚ್ಚಾಸೌ ಪೃಥಿವ್ಯಾಂ ಗ್ರಾಮಸೂಕರಃ ।
ಚಿರಂ ನರಕಭಕ್ಷ್ಯೋಽಭೂದ್ಧರಿವಾಸರಭೋಜನಾತ್ ॥ ೨೨ ॥

ತತೋ ವಿಪ್ರ ಪ್ರಾಪ್ತಕಾಲಃ ಪಂಚತ್ವಂ ಸ ಜಗಾಮ ಹ ।
ಕಾಕಯೋನೌ ಪುನರ್ಜನ್ಮ ಲೇಭೇಽಸೌ ವಿಡ್ಭುಜಸ್ಸದಾ ॥ ೨೩ ॥

ಏಕಸ್ಮಿನ್ದಿವಸೇ ವಿಪ್ರ ಶ್ರೀಹರೇಶ್ಚರಣೋದಕಂ ।
ದ್ವಾರದೇಶೇ ಸ್ಥಿತಂ ಪೀತ್ವಾ ಸರ್ವಪಾಪವಿವರ್ಜಿತಃ ॥ ೨೪ ॥

---

೨೦. ಇವನು ನೂರು ಮನ್ವಂತರಗಳ ಕಾಲವನ್ನು ನರಕದಲ್ಲಿ ಅನುಭವಿಸಲಿ ಆನಂತರ ಊರಹಂದಿಯಾಗಿ ಹುಟ್ಟಲಿ ಎಂದನು

೨೧. ಸೂತನು ಹೇಳಿದನು :—ಆಮೇಲೆ ಆ ಯಮದೂತರು ಯಮನ ಆಜ್ಞೆಯಿಂದ ಅವನನ್ನು ನರಕಕ್ಕೆ ಹಾಕಿದರು. ಅನಂತರ ಮಲದಲ್ಲಿ ನೂರು ಮನ್ವಂತರಗಳಿಗಿಂತಲೂ ಹೆಚ್ಚಾಗಿಯೇ ಇದ್ದನು.

೨೨. ಆ ನರಕವಾಸವಾದಮೇಲೆ ಭೂಮಿಯಲ್ಲಿ ಹಂದಿಯಾಗಿ ಹುಟ್ಟಿದನು. ಹರಿವಾಸರ ಭೋಜನದಿಂದ ಈರೀತಿ ನರಕವಾಸವುಂಟಾಯಿತು.

೨೩. ಆಮೇಲೆ ಆ ಹಂದಿಯು ಜಾತಿಯಿಂದ ಸತ್ತಮೇಲೆ ಕಾಗೆಯಾಗಿ ಹುಟ್ಟಿ ಆಗಲೂ ಮಲಭಕ್ಷಕನಾಗಿದ್ದನು.

೨೪. ಒಂದುದಿನ ಬಾಗಿಲಿನಲ್ಲಿ ಇಟ್ಟಿದ್ದ ಹರಿಚರಣೋದಕವನ್ನು ಕುಡಿದುದರಿಂದ ಪಾಪವೆಲ್ಲ ಹೋಯಿತು.

ತಸ್ಮಿನ್ನೇವ ದಿನೇ ಕಾಕಃ ಪತಿತಃ ಶಬರಸ್ಯ ಚ ।
ಕಾಲೇ ಮೃತ್ಯುದಶಾಂ ಪ್ರಾಪ್ತೋ ವ್ಯಾಧೇನ ವಾಯಸೋಽಪಿ ಚ ॥ ೨೫ ॥

ಆಗತೇ ಸ್ಯಂದನೇ ದಿವ್ಯೇ ರಾಜಹಂಸಯುತೇ ಶುಭೇ ।
ಆರುಹ್ಯ ಬಲಿಭುಗ್ವಿಪ್ರ ಯಯೌ ಸ ಹರಿಮಂದಿರಂ ॥ ೨೬ ॥

ಪಾದೋದಕಸ್ಯ ಮಾಹಾತ್ಮ್ಯಂ ಕಥಿತಂ ಪಾಪನಾಶನಂ ।
ಯಶ್ಶೃಣೋತಿ ನರಃ ಪಾಪೀ ತಸ್ಯ ಪಾಪಂ ವಿನಶ್ಯತಿ ॥ ೨೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತ
ಶೌನಕಸಂವಾದೇ ವಿಷ್ಣುಚರಣೋದಕಮಾಹಾತ್ಮ್ಯಂ
ನಾಮ ಸಪ್ತದಶೋಽಧ್ಯಾಯಃ

---

೨೫. ಆ ದಿನವೇ ಆ ಕಾಗೆಯು ಬೇಡನ ಬಲೆಗೆ ಬಿದ್ದು ಅವನಿಂದ ಕೊಲ್ಲ ಲ್ಪಟ್ಟಿತು.

೨೬. ಆಗ ರಾಜಹಂಸಗಳಿಂದ ಕೂಡಿದರಥವು ಬಂದಿತು. ಅದರಲ್ಲಿ ಆ ಕಾಗೆಯು ಕುಳಿತುಕೊಂಡು ವೈಕುಂಠಕ್ಕೆ ಹೋಯಿತು.

೨೭. ಹರಿಪಾದೋದಕದ ಮಹಿಮೆಯನ್ನು ಹೇಳಿದ್ದೇನೆ. ಇದು ಪಾಪ ನಾಶಕವಾದುದು. ಇದನ್ನು ಕೇಳಿದವನು ಪಾಪವನ್ನು ಕಳೆದುಕೊಳ್ಳುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕಸಂವಾದದಲ್ಲಿ ವಿಷ್ಣುಪಾದೋದಕಮಹಿಮೆಯೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ಅಷ್ಟಾದಶೋಽಧ್ಯಾಯಃ

---

॥ ಶೌನಕ ಉವಾಚ ॥

ಅಗಮ್ಯಾಗಮನಂ ಸೂತ ಕುರ್ಯಾದ್ಯೋ ವೈ ವಿಮೋಹಿತಃ ।
ತಸ್ಯ ಶುದ್ಧಿರ್ಭವೇತ್ಕೇನ ಕಥಯಸ್ವ ಸಮೂಲತಃ ॥ ೧ ॥

॥ ಸೂತ ಉವಾಚ ॥

ಅಭಿಗಚ್ಛತಿ ಚಾಂಡಾಲೀಂ ಶ್ವಪಾಕೀಂ ಯೋ ದ್ವಿಜೋತ್ತಮಃ ।
ಉಪವಾಸತ್ರಯಂ ಕುರ್ಯಾತ್ಪ್ರಾಜಾಪತ್ಯಂ ಚರೇತ್ತತಃ ॥ ೨ ॥

ಸಶಿಖಂ ವಪನಂ ಚೈವ ದದ್ಯಾದ್ಗೋದ್ವಯಮೇವ ಚ ।
ಯಥಾರ್ಥದಕ್ಷಿಣಾಂ ದತ್ವಾ ಶುದ್ಧಿಂ ಪ್ರಾಪ್ನೋತಿ ಸ ದ್ವಿಜಃ ॥ ೩ ॥

---

### ಹದಿನೆಂಟನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಮೂಢತನದಿಂದ ಕಾಮಲಂಪಟನಾಗಿ, ಯಾರ ಸಂಗವನ್ನು ಮಾಡಬೇಡವೆಂದು ಹೇಳಿದೆಯೋ ಅವರ ಸಂಗವನ್ನು ಮಾಡಿದರೆ ಅವರ ಶುದ್ಧಿಯು ಯಾವುದರಿಂದ ಆಗುತ್ತದೆ? ಅದನ್ನು ಹೇಳು.

೨. ಸೂತನು ಹೇಳಿದನು :—ಶ್ವಪಾಕಿಯಾದ ಚಂಡಾಲೀಗಮನ ಮಾಡಿದರೆ ಮೂರುದಿನ ಉಪವಾಸವಿದ್ದು ಆಮೇಲೆ ಪ್ರಾಜಾಪತ್ಯಕೃಚ್ಛ್ರವನ್ನು ಆಚರಿಸಬೇಕು.

೩. ಮುಂಡನಕ್ಷೌರವನ್ನು ಮಾಡಿಸಿಕೊಳ್ಳಬೇಕು. ಎರಡು ಗೋದಾನ ಮಾಡಬೇಕು. ಸರಿಯಾದ ದಕ್ಷಿಣೆಯನ್ನು ಕೊಟ್ಟರೆ ಶುದ್ಧನಾಗುತ್ತಾನೆ.

ಕ್ಷತ್ರಿಯೋ ವಾಪಿ ಚಾಂಡಾಲೀಂ ವೈಶ್ಯೋ ವಾ ಯದಿ ಗಚ್ಛತಿ ।
ಪ್ರಾಜಾಪತ್ಯಂ ಸಕೃಚ್ಛ್ರಂ ಚ ದದ್ಯಾದ್ಗೋಮಿಥುನದ್ವಯಂ ॥ ೪ ॥

ಅನುಗಚ್ಛತಿ ಶೂದ್ರೋ ಹಿ ಶ್ವಪಾಕೀಂ ಚ ತಪೋಧನ ।
ಚತುರ್ಗೋಮಿಥುನಂ ದದ್ಯಾತ್ಪ್ರಾಜಾಪತ್ಯವ್ರತಂ ಚರೇತ್ ॥ ೫ ॥

ಮಾತರಂ ಯದಿ ವಾ ಗಚ್ಛೇದ್ಭಗಿನೀಂ ಸ್ವಸುತಾಮಪಿ ।
ವಧೂಂ ಚ ಮೋಹಿತೋ ಗಚ್ಛಂಸ್ತ್ರೀಣಿ ಕೃಚ್ಛ್ರಾನ್ಯಥಾ ಚರೇತ್ ॥ ೬ ॥

ಚಾಂದ್ರಾಯಣತ್ರಯಂ ಕೃತ್ವಾ ದದ್ಯಾದ್ಗೋಮಿಥುನತ್ರಯಂ ।
ಸಶಿಖಂ ವಪನಂ ಕೃತ್ವಾ ಪಂಚಗವ್ಯಂ ಪಿಬೇತ್ತತಃ ॥ ೭ ॥

ಹುತೇ ಹ್ಯಗ್ನೌ ತಥಾಪ್ಯತ್ರ ಶುಧ್ಯತ್ಯೇವಂ ತಪೋಧನ ।
ಪಿತೃದಾರಾನ್ ದ್ವಿಜಶ್ರೇಷ್ಠ ಮಾತುಶ್ಚ ಭಗಿನೀಂ ತಥಾ ॥ ೮ ॥

ಗುರುಪತ್ನೀಂ ಮಾತುಲಾನೀಂ ಭ್ರಾತೃಭಾರ್ಯಾಂ ಸ್ವಗೋತ್ರಜಾಂ ।
ಯದಿ ಗಚ್ಛತಿ ಮೋಹೇನ ಪ್ರಾಜಾಪತ್ಯದ್ವಯಂ ಚರೇತ್ ॥ ೯ ॥

---

೪. ಕ್ಷತ್ರಿಯನಾಗಲಿ, ವೈಶ್ಯನಾಗಲಿ ಚಂಡಾಲೀಗಮನಮಾಡಿದರೆ ಪ್ರಾಜಾಪತ್ಯ ವ್ರತವನ್ನು ಕೃಚ್ಛ್ರದೊಡನಾಚರಿಸಿ ಎರಡು ಗೋಗಳನ್ನು ದಾನಮಾಡಬೇಕು.

೫. ಶೂದ್ರನು ಚಂಡಾಲೀಗಮನಮಾಡಿದರೆ ನಾಲ್ಕು ಹಸುಗಳನ್ನು ದಾನ ಮಾಡಿದರೆ ಶುದ್ಧನಾಗುವನು. ಪ್ರಾಜಾಪತ್ಯವ್ರತವನ್ನು ಮಾಡಬೇಕು.

೬. ತಾಯಿ, ಅಕ್ಕತಂಗಿಯರು. ಮಗಳು, ಸೊಸೆ, ಇವರಲ್ಲಿ ಗಮಿಸಿದರೆ ಮೂರು ಕೃಚ್ಛ್ರಗಳನ್ನು ಮಾಡಬೇಕು.

೭. ಆಮೇಲೆ ಮೂರು ಚಾಂದ್ರಾಯಣಗಳನ್ನು ಮಾಡಬೇಕು. ಮೂರು ಜೊತೆ ಗೋದಾನ ಮಾಡಬೇಕು. ಮುಂಡನ ಮಾಡಿಸಿಕೊಂಡು ಪಂಚಗವ್ಯವನ್ನು ಕುಡಿಯಬೇಕು. ಹೋಮಗಳನ್ನು ಮಾಡಬೇಕು. ಆಗ ಶುದ್ಧನಾಗುತ್ತಾನೆ.

೮-೯. ತಂದೆಯ ಹೆಂಡತಿ, ತಾಯಿಯ ಸಹೋದರಿ, ಗುರುವಿನ ಹೆಂಡತಿ, ಸೋದರಮಾವನ ಹೆಂಡತಿ, ಸಹೋದರನ ಹೆಂಡತಿ, ಸ್ವಗೋತ್ರದವಳು, ಇವರನ್ನು ಗಮಿಸಿದರೆ ಪ್ರಾಜಾಪತ್ಯಗಳೆರಡನ್ನು ಮಾಡಬೇಕು.

**ಚಾಂದ್ರಾಯಣತ್ರಯಂ ಬ್ರಹ್ಮನ್ ಪಂಚಗೋಮಿಥುನಾನಿ ಚ ।**
**ವಿಪ್ರೇಭ್ಯೋ ದಕ್ಷಿಣಾಂ ದದ್ಯಾಚ್ಛುಧ್ಯತೇ ನಾತ್ರ ಸಂಶಯಃ ॥ ೧೦ ॥**

**ಗಾಂ ಚ ಗಚ್ಛತಿ ಯೋ ಮೂಢ ಉಪವಾಸತ್ರಯಂ ಚರೇತ್ ।**
**ಧೇನುಂ ದದ್ಯಾತ್ತಥಾ ಚಾನ್ನಂ ಶುಧ್ಯತ್ಯೇವ ನ ಸಂಶಯಃ ॥ ೧೧ ॥**

**ವೇಶ್ಯಾಂ ಖರೀಂ ಸೂಕರೀಂ ಚ ವಾನರೀಂ ಮಹಿಷೀಂ ದ್ವಿಜ ।**
**ಆಕಂಠತಃ ಸಮಾಕ್ಷಿಪ್ಯ ಗೋಮಯೋದಕಕರ್ದಮೇ ।**
**ತತ್ರ ತಿಷ್ಠೇನ್ನಿರಾಹಾರಸ್ತ್ರಿರಾತ್ರೇಣೈವ ಶುಧ್ಯತಿ ॥ ೧೨ ॥**

**ಸಶಿಖಂ ವಪನಂ ಕೃತ್ವಾ ತ್ರ್ಯಹಂ ಚೋಪವಸೇತ್ಪುನಃ ।**
**ಏಕರಾತ್ರಂ ಜಲೇ ಸ್ಥಿತ್ವಾ ಶುಧ್ಯತ್ಯೇವ ನ ಸಂಶಯಃ ॥ ೧೩ ॥**

**ಬ್ರಾಹ್ಮಣೀಂ ತು ಯದಾ ಗಚ್ಛೇದ್ಯೋ ನರಃ ಕಾಮಮೋಹಿತಃ ।**
**ಪ್ರಾಜಾಪತ್ಯತ್ರಯಂ ಕುರ್ಯಾಚ್ಚಾಂದ್ರಾಯಣತ್ರಯಂ ತಥಾ ॥ ೧೪ ॥**

---

೧೦. ಮೂರು ಚಾಂದ್ರಾಯಣಗಳನ್ನು ಮಾಡಬೇಕು. ಐದು ಗೋಮಿಥುನಗಳನ್ನು ಕೊಡಬೇಕು. ವಿಪ್ರರಿಗೆ ದಕ್ಷಿಣೆಕೊಟ್ಟರೆ ಶುದ್ಧವಾಗುತ್ತಾನೆ.

೧೧. ಗೋವಿನಲ್ಲಿ ಮೈಥುನ ಮಾಡಿದರೆ ಮೂರು ಉಪವಾಸಗಳನ್ನು ಮಾಡಬೇಕು. ಗೋದಾನಮಾಡಿ ಅನ್ನದಾನ ಮಾಡಿದರೆ ಶುದ್ಧನಾಗುತ್ತಾನೆ.

೧೨. ವೇಶ್ಯೆ, ಕತ್ತೆ, ಹಂದಿ, ಕಪಿ, ಎಮ್ಮೆಗಳಲ್ಲಿ ಮೈಥುನಮಾಡಿದರೆ ಹಸುವಿನ ಸಗಣಿಯನ್ನು ನೀರಿನಲ್ಲಿ ಕದಡಿ ಬಗ್ಗಡದಂತೆ ಮಾಡಿ ಅದರಲ್ಲಿ ಕತ್ತಿನವರೆಗೂ ಬರುವಂತೆ ನಿಂತುಕೊಂಡು ಮೂರುದಿನ ನಿರಾಹಾರನಾಗಿರಬೇಕು.

೧೩. ಶಿಖೆ ಇರುವಂತೆ ಕ್ಷೌರಮಾಡಿಸಿಕೊಂಡು ಮೂರು ದಿನ ಉಪವಾಸ ಮಾಡಬೇಕು. ಒಂದು ರಾತ್ರಿ ನೀರಿನಲ್ಲಿ ನಿಂತಿರಬೇಕು. ಹೀಗಾದರೆ ಶುದ್ಧನಾಗುತ್ತಾನೆ. ಸಂಶಯವಿಲ್ಲ.

೧೪. ಬ್ರಾಹ್ಮಣಸ್ತ್ರೀಗಮನವನ್ನು ಮಾಡಿದರೆ ಪ್ರಾಜಾಪತ್ಯಗಳು ಮೂರನ್ನು ಆಚರಿಸಿ ಚಾಂದ್ರಾಯಣಗಳು ಮೂರನ್ನು ಮಾಡಬೇಕು.

ಗೋತ್ರಯಂ ತು ತಥಾ ದದ್ಯಾಚ್ಛುಧ್ಯತೇ ಚ ತಪೋಧನ ।
ಬ್ರಾಹ್ಮಣೀ ಪಂಚಗವ್ಯಂ ತು ಪಂಚರಾತ್ರಂ ಪಿಬೇದ್ದ್ವಿಜ ।
ಗೋದ್ವಯಂ ದಕ್ಷಿಣಾಂ ದದ್ಯಾಚ್ಛುಧ್ಯತ್ಯತ್ರ ನ ಸಂಶಯಃ ॥ ೧೫ ॥

ಪರಾಂಗನಾಂ ಯದಾ ಗಚ್ಛೇತ್ಕೃಚ್ಛ್ರಂ ಸಾಂತಪನಂ ಚರೇತ್ ।
ಯಥಾರ್ಗಳಾ ತಥಾ ಯೋಷಿತ್ತಸ್ಮಾತ್ತಾಂ ಪರಿವರ್ಜಯೇತ್ ॥ ೧೬ ॥

ವರ್ಣಬಾಹ್ಯಾಂ ತಥಾ ನೀಚಾಮನುಗಚ್ಛೇತ್ಸಕೃನ್ನರಃ ।
ಪ್ರಾಜಾಪತ್ಯಂ ಚರೇತ್ಕೃಚ್ಛ್ರಂ ಶುಧ್ಯತ್ಯೇವ ನ ಸಂಶಯಃ ॥ ೧೭ ॥

ಅಂಗಾರಸದೃಶೀ ಯೋಷಿತ್ಸರ್ಪಿಃಕುಂಭಸಮಃ ಪುಮಾನ್ ।
ತಸ್ಯಾಃ ಪರಿಸರೇ ಬ್ರಹ್ಮನ್ ಸ್ಥಾತವ್ಯಂ ನ ಕದಾಚನ ॥ ೧೮ ॥

ಜಾರೇಣ ಜನಯೇದ್ಗರ್ಭಂ ಯಾ ಚ ನಾರೀ ಕುಲಾಂತಕಾ ।
ತ್ಯಾಜ್ಯಾ ಸಾ ಸರ್ವಥಾ ಬ್ರಹ್ಮಂಸ್ತತ್ರ ದೋಷೋ ನ ವಿದ್ಯತೇ ॥ ೧೯ ॥

---

೧೫. ಗೋವುಗಳು ಮೂರನ್ನು ದಾನಮಾಡಿದರೆ ಶುದ್ಧನಾಗುತ್ತಾನೆ. ಆ ಬ್ರಾಹ್ಮಣಿಯು ಪಂಚಗವ್ಯವನ್ನು ಐದು ರಾತ್ರಿಗಳು ಕುಡಿದರೆ ಶುದ್ಧಳಾಗುತ್ತಾಳೆ. ಮತ್ತು ಎರಡು ಗೋವುಗಳನ್ನು ದಕ್ಷಿಣೆಯನ್ನಾಗಿ ಕೊಡಬೇಕು.

೧೬. ಪರಾಂಗನೆಯ ಗಮನಮಾಡಿದರೆ ಕೃಚ್ಛ್ರಸಹಿತವಾದ ಸಾಂತಪನವನ್ನು ಮಾಡಬೇಕು. ಹೆಂಗಸು ಬಂಧನದಂತಾದುದರಿಂದ ಅವಳನ್ನು ಬಿಡಬೇಕು.

೧೭. ಬೇರೆ ಜಾತಿಯವಳನ್ನು ಗಮಿಸಿದರೆ ಪ್ರಾಜಾಪತ್ಯವನ್ನು ಮಾಡಿದರೆ ಶುದ್ಧನಾಗುತ್ತಾನೆ.

೧೮. ಹೆಂಗಸು ಕೆಂಡಕ್ಕೆ ಸಮಳು. ಗಂಡಸು ತುಪ್ಪದ ಗಡಿಗೆಯಂತಿರುವನು. ಅವರಿಬ್ಬರೂ ಒಂದೆಡೆಯಲ್ಲಿರಬಾರದು.

೧೯. ಜಾರನಿಂದ ಗರ್ಭೋತ್ಪತ್ತಿಯಾದರೆ ಆಕೆಯು ಕುಲಾಂತಕಳು. ಅದ್ದರಿಂದ ಆಕೆಯನ್ನು ಬಿಟ್ಟು ಬಿಡಬೇಕು. ದೋಷವಿಲ್ಲ.

ಯಾ ಚ ನಾರೀ ಗೃಹಾದ್ಗಚ್ಛೇತ್ತ್ಯಕ್ತ್ವಾ ಬಂಧೂನ್ಸ್ವಕಾನಪಿ ।
ನಷ್ಟಾ ಸಾ ಚ ಕುಲಭ್ರಷ್ಟಾ ನ ತಸ್ಯಾಸ್ಸಂಗಮಃ ಪುನಃ ॥ ೨೦ ॥

ಯಾ ತು ನಾರೀ ಯದಾ ಗಚ್ಛೇನ್ಮೋಹಿತಾ ಪರಪೂರುಷಂ ।
ಪ್ರಾಜಾಪತ್ಯಂ ಚರೇತ್ಕೃಚ್ಛ್ರಂ ಪಂಚಗವ್ಯಂ ಪಿಬೇತ್ತಥಾ ।
ಗೋದ್ವಯಂ ತು ತದಾ ದದ್ಯಾಚ್ಛುಧ್ಯತ್ಯೇವ ನ ಸಂಶಯಃ ॥ ೨೧ ॥

ಬ್ರಾಹ್ಮಣೀ ಬಾಲಿಶಾ ಬ್ರಹ್ಮನ್ಮೋಹಿತಾ ಪರಪೂರುಷಂ ।
ಯದಾ ಗಚ್ಛೇತ್ತದಾ ತ್ಯಾಜ್ಯಾ ಜನ್ಯೈರ್ದೋಷೋ ನ ವಿದ್ಯತೇ ॥ ೨೨ ॥

ಯೋ ಗಚ್ಛೇದ್ಬ್ರಾಹ್ಮಣೀಂ ವಿಪ್ರ ಭೂಸುರಃ ಕಾಮಮೋಹಿತಃ ।
ಗೋತಿಲಾಂಶ್ಚ ತಥಾ ದದ್ಯಾಚ್ಛುಧ್ಯತ್ಯತ್ರ ನ ಸಂಶಯಃ ॥ ೨೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕ
ಸಂವಾದೇ ಅಷ್ಟಾದಶೋಧ್ಯಾಯಃ

---

೨೦. ಯಾವ ಹೆಂಗಸು ಎಲ್ಲರನ್ನೂ ಬಿಟ್ಟು ಮನೆಯಿಂದ ಹೊರಟು ಹೋಗುತ್ತಾಳೋ ಅವಳು ಹೋದಂತೆಯೇ. ಅವಳು ಕುಲಭ್ರಷ್ಟಳು, ಅವಳ ಸಂಗಮವು ಕೂಡದು.

೨೧. ಸ್ತ್ರೀಯು ಮೋಹಿತಳಾಗಿ ಪರಪುರುಷರನ್ನು ಹೊಂದಿದರೆ, ಅವಳು ಪ್ರಾಜಾಪತ್ಯವನ್ನೂ, ಕೃಚ್ಛ್ರವನ್ನೂ ಮಾಡಿ ಪಂಚಗವ್ಯವನ್ನು ಕುಡಿದು ಗೋದ್ವಯವನ್ನು ದಾನಮಾಡಿದರೆ ಶುದ್ಧಳಾಗುತ್ತಾಳೆ.

೨೨. ಬ್ರಾಹ್ಮಣ ಸ್ತ್ರೀಯು ಅಜ್ಞಾನದಿಂದ ಪರಪುರುಷನಲ್ಲಿ ಮೋಹಿತಳಾದರೆ ಅವಳನ್ನು ಬಿಟ್ಟುಬಿಡಬಹುದು. ದೋಷವಿಲ್ಲ.

೨೩. ಬ್ರಾಹ್ಮಣನು ಮೋಹಿತನಾಗಿ ಬ್ರಾಹ್ಮಣಸ್ತ್ರೀಯನ್ನು ಗಮಿಸಿದರೆ ಗೋವನ್ನೂ ಎಳ್ಳನ್ನೂ ದಾನಮಾಡಿದರೆ ಶುದ್ಧನಾಗುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕ
ಸಂವಾದದ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ಏ ಕೋ ನ ವಿಂ ಶ ತಿ ತ ಮೋ ಧ್ಯಾ ಯಃ



**॥ ಸೂತ ಉವಾಚ ॥**

**ಅಜ್ಞಾನಾತ್ಪ್ರಾಶ್ಯ ವಿಣ್ಮೂತ್ರಂ ಸುರಾಂ ಸಂಸ್ಪೃಶ್ಯ ವೈ ಪುನಃ ।**
**ಯಥಾ ಶುದ್ಧಿರ್ಭವೇತ್ತೇಷಾಂ ಕಥಯಾಮಿ ಶೃಣು ದ್ವಿಜ ॥ ೧ ॥**

**ಪ್ರಾಜಾಪತ್ಯದ್ವಯಂ ಕುರ್ಯಾತ್ತೀರ್ಥಾಭಿಗಮನಂ ಮುನೇ ।**
**ವೃಷೈಕಾದಶದಾನಂ ಚ ಸಶಿಖಂ ವಪನಂ ತತಃ ॥ ೨ ॥**

**ಗತ್ವಾ ಚತುಷ್ಪಥಂ ಸರ್ವಂ ಪ್ರಾಜಾಪತ್ಯವ್ರತಂ ತಥಾ ।**
**ಗೋದ್ವಯಂ ತು ತತೋ ದದ್ಯಾತ್ಪಂಚಗವ್ಯಂ ಪಿಬೇತ್ತತಃ ॥ ೩ ॥**

---

### ಹತ್ತೊಂಭತ್ತನೆಯ ಅಧ್ಯಾಯವು

೧. ಸೂತನು ಹೇಳಿದನು:—ಅಜ್ಞಾನದಿಂದ ಮೂತ್ರವನ್ನಾಗಲಿ, ಮಲವನ್ನಾಗಲಿ, ಸೇವಿಸಿದರೆ ಅಥವಾ ಹೆಂಡವನ್ನು ಮುಟ್ಟಿದರೆ ಶುದ್ಧಿಯಾಗುವ ಬಗೆಯನ್ನು ಹೇಳುತ್ತೇನೆ, ಕೇಳು.

೨-೩. ಎರಡು ಪ್ರಾಜಾಪತ್ಯಗಳನ್ನು ಮಾಡಿ ತೀರ್ಥಯಾತ್ರೆಗಳನ್ನು ಮಾಡಬೇಕು. ಹನ್ನೊಂದು ಎತ್ತುಗಳನ್ನು ದಾನಮಾಡಬೇಕು. ಶಿಖೆಯನ್ನು ಇಟ್ಟುಕೊಂಡು ಕ್ಷೌರಮಾಡಿಸಿಕೊಳ್ಳಬೇಕು. ನಾಲ್ಕು ದಾರಿ ಸೇರಿದ್ದ ಜಾಗಕ್ಕೆ ಹೋಗಿ ಅಲ್ಲಿ ಪ್ರಾಜಾಪತ್ಯವನ್ನು ಆಚರಿಸಬೇಕು. ಗೋವುಗಳೆರಡನ್ನು ದಾನಮಾಡಬೇಕು. ಆಮೇಲೆ ಪಂಚಗವ್ಯವನ್ನು ಕುಡಿದು ಬ್ರಾಹ್ಮಣಭೋಜನ ಮಾಡಿಸಬೇಕು. ಆಗ ಶುದ್ಧನಾಗುತ್ತಾನೆ.

ಬ್ರಾಹ್ಮಣಾನ್ಭೋಜಯಿತ್ವಾ ತು ಶುಧ್ಯತ್ಯತ್ರ ನ ಸಂಶಯಃ ।
ಚಾಂಡಾಲಾನ್ನಂ ಜಲಂ ಚೈವ ಜ್ಞಾನತೋಽಪಿ ವಿಪತ್ತಿಷು ॥ ೪ ॥

ಯದಿ ಭುಂಕ್ತೇ ನರಃ ಕಶ್ಚಿತ್ಕೃಚ್ಛ್ರಂ ಚಾಂದ್ರಾಯಣಂ ಚರೇತ್ ।
ಸಶಿಖಂ ವಪನಂ ಕೃತ್ವಾ ಪಂಚಗವ್ಯಂ ಪಿಬೇತ್ತತಃ ॥ ೫ ॥

ಏಕದ್ವಿತ್ರಿಚತುರ್ಗಾವೋ ದೇಯಾ ವಿಪ್ರೇಷ್ವನುಕ್ರಮಾತ್ ।
ವೃಷಲಾನ್ನಂ ಸೂತಕಾನ್ನಮಭೋಜ್ಯಾನ್ನಂ ಜಲಂ ಚ ವೈ ।
ಶೂದ್ರೋಚ್ಛಿಷ್ಟಂ ಯದಾ ಭುಂಕ್ತೇ ಜ್ಞಾನತೋ ವಾ ವಿಪತ್ತಿಷು ॥ ೬ ॥

ಪ್ರಾಜಾಪತ್ಯದ್ವಯಂ ಕುರ್ಯಾಚ್ಚಾಂದ್ರಾಯಣತ್ರಯಂ ತಥಾ ।
ಗೋದ್ವಯಂ ತು ತತೋ ದದ್ಯಾತ್ಪಂಚಗವ್ಯಂ ಪಿಬೇದ್ದ್ವಿಜ ॥ ೭ ॥

ಹುತ್ವಾ ಹ್ಯಗ್ನೌ ಬಹೂನ್ವಿಪ್ರಾನ್ಭೋಜ್ಯ ಶುದ್ಧೋ ಭವೇದ್ಧ್ರುವಂ ॥ ೮ ॥

ಆಖುನಕುಲಮಾರ್ಜಾರೈರನ್ನಂ ಚೇದ್ಭಕ್ಷಿತಂ ದ್ವಿಜ ।
ತಿಲದರ್ಭೋದಕೈಃ ಪ್ರೋಕ್ಷ್ಯ ಶುಧ್ಯತೇ ಚ ನ ಸಂಶಯಃ ॥ ೯ ॥

---

೪-೫. ಜ್ಞಾನವಿದ್ದು ಆಪತ್ಕಾಲದಲ್ಲಿ ಚಂಡಾಲಾನ್ನವನ್ನು ತಿಂದರೆ ಕೃಚ್ಛ್ರವನ್ನೂ, ಚಾಂದ್ರಾಯಣವನ್ನೂ ಮಾಡಿ ಶಿಖೆಸಹಿತವಾಗಿ ಮುಂಡನಮಾಡಿಸಿಕೊಂಡು ಒಬ್ಬನಿಗೆ ಒಂದು,.ಒಬ್ಬನಿಗೆ ಎರಡು, ಒಬ್ಬನಿಗೆ ಮೂರು, ಮತ್ತೊಬ್ಬನಿಗೆ ನಾಲ್ಕು, ಈರೀತಿ ಗೋದಾನಮಾಡಬೇಕು.

೬-೭. ಶೂದ್ರಾನ್ನ, ಸೂತಕಾನ್ನ, ಇವು ತಿನ್ನಲ್ಪಡತಕ್ಕವಲ್ಲ. ಅವರು ಮುಟ್ಟಿದ ನೀರನ್ನು ಕುಡಿಯಕೂಡದು. ಜ್ಞಾನವಿದ್ದು ವಿಪತ್ತಿನಲ್ಲಿ ಶೂದ್ರನು ತಿಂದು ಮಿಕ್ಕಿದನ್ನು ಊಟಮಾಡಿದರೆ ಪ್ರಾಜಾಪತ್ಯಗಳೆರಡನ್ನು ಮಾಡಬೇಕು. ಚಾಂದ್ರಾಯಣಗಳು ಮೂರನ್ನು ಮಾಡಬೇಕು. ಎರಡು ಗೋದಾನಗಳನ್ನು ಮಾಡಬೇಕು. ಪಂಚಗವ್ಯವನ್ನು ಕುಡಿಯಬೇಕು.

೮. ಅಗ್ನಿಯಲ್ಲಿ ಹೋಮಮಾಡಿ ಬ್ರಾಹ್ಮಣನನ್ನು ಭೋಜನಮಾಡಿಸಿದರೆ ಶುದ್ಧನು.

೯. ಇಲಿ, ಮುಂಗಿಸಿ, ಬೆಕ್ಕುಗಳು ತಿಂದ ಅನ್ನವನ್ನು ಎಳ್ಳು ದರ್ಭೆಗಳ ನೀರಿನಿಂದ ಪ್ರೋಕ್ಷಿಸಿದರೆ ಶುದ್ಧವಾಗುತ್ತದೆ.

ಪಲಾಂಡುಂ ಲಶುನಂ ಶಿಗ್ರುಮಲಾಬುಂ ಗೃಂಜನಂ ಪಲಂ ।
ಭುಂಕ್ತೇ ಯೋ ವೈ ನರೋ ಬ್ರಹ್ಮನ್ ವ್ರತಂ ಚಾಂದ್ರಾಯಣಂ ಚರೇತ್ ॥

ಮದ್ಯಮಾಂಸಪ್ರಿಯಂ ಶೂದ್ರಂ ನೀಚಕರ್ಮಾನುವರ್ತನೈಃ ।
ತಂ ಶೂದ್ರಂ ವರ್ಜಯೇದ್ವಿಪ್ರ ಶ್ವಪಾಕಮಿವ ದೂರತಃ ॥ ೧೧ ॥

ದ್ವಿಜಸೇವಾನುರಕ್ತಾ ಯೇ ಮದ್ಯಮಾಂಸವಿವರ್ಜಿತಾಃ ।
ದಾನಸ್ವಕರ್ಮನಿರತಾಸ್ತೇ ಜ್ಞೇಯಾ ವೃಷಲೋತ್ತಮಾಃ ॥ ೧೨ ॥

ಅಜ್ಞಾನಾದ್ಭುಂಜತೇ ವಿಪ್ರ ಸೂತಕೇ ಮೃತಕೇ ಯದಿ ।
ಗಾಯತ್ರೀದಶಭಿರ್ವಿಪ್ರಃ ಸಹಸ್ರೈಶ್ಚ ಶುಚಿರ್ಭವೇತ್ ॥ ೧೩ ॥

ಸಹಸ್ರೈಃ ಕ್ಷತ್ರಿಯಶ್ಚೈವ ವೈಶ್ಯಃ ಪಂಚಸಹಸ್ರಕೈಃ ।
ಪಂಚಗವ್ಯೈರ್ಭವೇಚ್ಛುದ್ಧೋ ವೃಷಲೋಽಪಿ ತಪೋಧನ ॥ ೧೪ ॥

ಆಜ್ಯಂ ತು ತೋಯಂ ನೀಚಸ್ಯ ಭಾಂಡಸ್ಥಂ ದಧಿ ಯಃ ಪಿಬೇತ್ ।
ಅಜ್ಞಾನತೋಽಪಿ ಯೋ ವರ್ಣಃ ಪ್ರಾಜಾಪತ್ಯವ್ರತಂ ಚರೇತ್ ॥ ೧೫ ॥

---

೧೦. ಈರುಳ್ಳಿ, ಬೆಳ್ಳುಳ್ಳಿ, ನುಗ್ಗೆಕಾಯಿ, ಸೋರೇಕಾಯಿ, ಮೂಲಂಗಿ, ಮಾಂಸಗಳನ್ನು ತಿಂದರೆ ಚಾಂದ್ರಾಯಣವನ್ನು ಮಾಡಬೇಕು.

೧೧. ಮದ್ಯ ಮಾಂಸಗಳಲ್ಲಿ ಆಸಕ್ತನಾದ ಶೂದ್ರನನ್ನು ಚಂಡಾಲನಂತೆ ದೂರದಲ್ಲಿ ಬಿಡಬೇಕು.

೧೨. ಮದ್ಯಮಾಂಸಗಳನ್ನು ಬಿಟ್ಟು ಬ್ರಾಹ್ಮಣಸೇವೆ ಮಾಡಿಕೊಂಡಿರುವ ಶೂದ್ರನು ಶ್ರೇಷ್ಠನಾದ ಶೂದ್ರನೆಂದು ತಿಳಿಯಬೇಕು.

೧೩. ಅಜ್ಞಾನದಿಂದ ಮೃತಸೂತಕದ ಅನ್ನವನ್ನು ತಿಂದರೆ ಒಂದುಸಾವಿರದ ಮೇಲೆ ಹತ್ತು ಗಾಯಿತ್ರಿಗಳನ್ನು ಮಾಡಿದರೆ ಶುದ್ಧನಾಗುತ್ತಾನೆ.

೧೪. ಕ್ಷತ್ರಿಯನು ಒಂದುಸಾವಿರ ಗಾಯಿತ್ರಿಗಳಿಂದಲೂ ವೈಶ್ಯನು ಐದು ಸಾವಿರ ಗಾಯಿತ್ರಿಜಪದಿಂದಲೂ, ಶೂದ್ರನು ಪಂಚಗವ್ಯವನ್ನು ಕುಡಿಯುವುದರಿಂದಲೂ ಶುದ್ಧರಾಗುತ್ತಾರೆ.

೧೫. ನೀಚಜಾತಿಯವರ ಮಡಕೆಯಲ್ಲಿ ನೀರನ್ನಾಗಲಿ, ತುಪ್ಪವನ್ನಾಗಲಿ, ಮೊಸರನ್ನಾಗಲಿ ಕುಡಿದರೆ ಪ್ರಾಜಾಪತ್ಯವ್ರತವನ್ನು ಮಾಡಬೇಕು.

ದಾನಂ ಬಹುತರಂ ದದ್ಯಾಚ್ಛುದ್ಧೋ ಹ್ಯಗ್ನೌ ಯಥಾವಿಧಿ ।
ಶೂದ್ರಾಣಾಂ ನೋಪವಾಸೋಽಪಿ ದಾನೇನೈವ ವಿಶುದ್ಧ್ಯತಿ ॥ ೧೬ ॥

ಸಶಿಖಂ ವಪನಂ ಕುರ್ಯಾದಹೋರಾತ್ರೋಪವಾಸತಃ ।
ನೀಚೈರ್ದಂಡಾದಿಭಿಶ್ಚೈವ ತಾಡಿತೋ ಯೋ ನರೋ ದ್ವಿಜ ॥ ೧೭ ॥

ಪ್ರಾಜಾಪತ್ಯಂ ವ್ರತಂ ಕುರ್ಯಾಚ್ಚಾಂದ್ರಾಯಣ ವ್ರತಂ ತು ವಾ ।
ಸಶಿಖಂ ವಪನಂ ಚೈವ ಪಂಚಗವ್ಯಂ ಪಿಬೇತ್ತತಃ ॥ ೧೮ ॥

ಗೋದ್ವಯಂ ತು ತತೋ ದದ್ಯಾದ್ಧ್ಯಗ್ನೌ ಚಾನ್ನಾದಿಕಂ ಹುತಂ ।
ಮದ್ಯಪಾನಂ ಗೃಹೇ ವಿಪ್ರ ಜ್ಞಾನತೋಽಪಿ ಯದೃಚ್ಛಯಾ ॥ ೧೯ ॥

ಯದಿ ಭುಂಕ್ತೇ ನರಃ ಕಶ್ಚಿತ್ಪ್ರಾತ್ಯಸ್ತೋಽಪಿ ಕುಲಾನ್ನರಃ ।
ಗೋಬೀಜಹಂತಾ ಯೋ ವಿಪ್ರ ಭೇದಕಶ್ಚ ದಳಸ್ಯಚ ॥ ೨೦ ॥

---

೧೬. ಅಗ್ನಿಯಲ್ಲಿ ಹೋಮಮಾಡಿ ಅನೇಕ ದಾನಗಳನ್ನು ಕೊಡಬೇಕು. ಶೂದ್ರನಾದರೆ ಉಪವಾಸಮಾಡಬೇಕಾದ್ದಿಲ್ಲ. ದಾನಮಾಡಿದರೆ ಶುದ್ಧನಾಗುತ್ತಾನೆ.

೧೭. ನೀಚರು ದ್ವಿಜರನ್ನು ಹೊಡೆದರೂ ಅಥವಾ ಯಾವವಿಧವಾಗಿ ಶಿಕ್ಷಿಸಿದರೂ ಶಿಖೆಯನ್ನು ಬೋಳಿಸಿಕೊಂಡು ಅಹೋರಾತ್ರಿ ಉಪವಾಸಮಾಡಬೇಕು.

೧೮. ಪ್ರಾಜಾಪತ್ಯಕೃಚ್ಛ್ರವನ್ನಾಚರಿಸಿ ಚಾಂದ್ರಾಯಣವ್ರತವನ್ನು ಮಾಡಬೇಕು. ಆಮೇಲೆ ಪಂಚಗವ್ಯ ಪಾನಮಾಡಬೇಕು.

೧೯. ಎರಡು ಹಸುಗಳನ್ನು ದಾನಮಾಡಬೇಕು. ಅಗ್ನಿಯಲ್ಲಿ ಹೋಮ ಮಾಡಬೇಕು. ಅನ್ನದಾನ ಮಾಡಬೇಕು. ಇದಿಷ್ಟು ಮದ್ಯಪಾನವನ್ನು ಜ್ಞಾನದಿಂದ ಮಾಡಿದರೆ ಶಿಕ್ಷೆಯು (ಪ್ರಾಯಶ್ಚಿತ್ತವು).

೨೦. ನೀಚಜಾತಿಯವನ ಮನೆಯಲ್ಲಿ ಊಟಮಾಡಿದರೆ ಅವನನ್ನು ಬಿಟ್ಟುಬಿಡಬೇಕು.

**ಸ್ವರ್ಣಸ್ತೇಯೀ ಭವೇತ್ಕೃಚ್ಛ್ರಪ್ರಾಜಾಪತ್ಯತ್ರಯಂ ಚರೇತ್ ।**
**ಸಶಿಖಂ ವಪನಂ ಕೃತ್ವಾ ಪಂಚಗವ್ಯಂ ತಥಾ ಪಿಬೇತ್ ॥ ೨೧ ॥**

**ಯಥಾವಿಧಿ ಹುತಂ ಚಾಗ್ನೌ ದದ್ಯಾದ್ಧೇನುತ್ರಯಂ ತಥಾ ।**
**ತಸ್ಯ ಭುಕ್ತಂ ಜಲಂ ಚೈವ ಗ್ರಾಹ್ಯಂ ಸ್ಯಾದ್ವೈ ತಪೋಧನ ॥ ೨೨ ॥**

**ಪ್ರಾತಸ್ತ್ರ್ಯಹಂ ತು ಚಾಶ್ನೀಯಾತ್ ತ್ರ್ಯಹಂ ಸಾಯಮಯಾಚಿತಂ ।**
**ತ್ರ್ಯಹಂ ಚೈವ ತು ನಾಶ್ನೀಯಾತ್ಪ್ರಾಜಾಪತ್ಯಮಿದಂ ವ್ರತಂ ॥ ೨೩ ॥**

**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।**
**ದಿನದ್ವಯಂ ಪಿಬೇದ್ವಿಪ್ರ ಚೈಕರಾತ್ರಮುಪೋಷಿತಃ ।**
**ಸರ್ವಪಾಪಹರಂ ಕೃಚ್ಛ್ರಂ ಮುನೇ ಸಾಂತಪನಂ ಸ್ಮೃತಂ ॥ ೨೪ ॥**

**ಗ್ರಾಸಂ ತ್ರ್ಯಹಂ ತು ಚೈಕೈಕಂ ಪ್ರಾತಸ್ಸಾಯಮಯಾಚಿತಂ ।**
**ಅದ್ಯಾತ್ತ್ರ್ಯಹಂ ಚೋಪವಸೇದತಿಕೃಚ್ಛ್ರಮಿದಂ ಸ್ಮೃತಂ ॥ ೨೫ ॥**

---

೨೧-೨೨. ಗೋವಿನ ಬೀಜಗಳನ್ನು ಚಚ್ಚುವುದು, ಅದನ್ನು ಕತ್ತರಿಸುವುದು, ಇಂತಹ ಬ್ರಾಹ್ಮಣನು ಸ್ವರ್ಣಸ್ತೇಯ ಮಾಡಿದ ಪಾಪಕ್ಕೊಳಗಾಗುವನು. ಪ್ರಾಜಾಪತ್ಯಗಳು ಮೂರನ್ನು ಮಾಡಬೇಕು. ಶಿಖೆಸಹಿತವಾಗಿ ತಲೆಬೋಳಿಸಿಕೊಂಡು ಪಂಚಗವ್ಯಪ್ರಾಶನಮಾಡಬೇಕು. ಹೋಮಾದಿಗಳನ್ನು ಮಾಡಿ ಮೂರು ಗೋದಾನಗಳನ್ನು ಮಾಡಬೇಕು. ಆಗ ಅವನ ಅನ್ನವನ್ನು ಊಟಮಾಡಬಹುದು. ನೀರನ್ನು ಕುಡಿಯಬಹುದು.

೨೩. ಪ್ರಾಜಾಪತ್ಯವೆಂದರೆ ಬೆಳಿಗ್ಗೆ ಮೂರುದಿನ ಊಟಮಾಡಕೂಡದು. ಸಾಯಂಕಾಲದಲ್ಲಿ ಯಾಚಿಸದೆ ದೊರೆತ ಅನ್ನವನ್ನು ಊಟಮಾಡಬೇಕು. ಮತ್ತೆ ಮೂರು, ದಿನಗಳು ಊಟವೇ ಕೂಡದು.

೨೪. ಸಾಂತಪನವೆಂದರೆ—ಹಿಂದಿನ ರಾತ್ರಿ ಉಪೋಷ್ಯವಿದ್ದು ಗೋಗಂಜಲು ಗೋಸಗಣಿ, ಹಾಲು, ಮೊಸರು, ತುಪ್ಪ, ಕುಶೋದಕ (ಪಂಚಗವ್ಯ) ಗಳನ್ನು ಎರಡು ಎರಡುದಿನ ಕುಡಿಯಬೇಕು. ಅದು ಸರ್ವಪಾಪಹರವು.

೨೫. ಬೆಳಿಗ್ಗೆ ಸಾಯಂಕಾಲಗಳಲ್ಲಿ ಮೂರುದಿನದವರಿಗೆ ಯಾಚಿಸದೆ ದೊರೆತರೆ ಒಂದೊಂದು ಗ್ರಾಸವನ್ನು ತಿಂದು ಉಪವಾಸವಿದ್ದರೆ ಅದು ಅತಿಕೃಚ್ಛ್ರವೆನ್ನಿಸಿಕೊಳ್ಳುತ್ತದೆ.

**ಪ್ರತಿತ್ರ್ಯಹಂ ಪಿಬೇದುಷ್ಣಂ ಜಲಂ ಕ್ಷೀರಂ ಘೃತಂ ದ್ವಿಜ ।**
**ಸಕೃತ್ಸ್ನಾಯೀ ತಪ್ತಕೃಚ್ಛ್ರಂ ಸ್ಮೃತಂ ಪಾಪಹರಂ ಮುನೇ ॥ ೨೬ ॥**

**ಅಭೋಜನಂ ದ್ವಾದಶಾಹಂ ಕೃಚ್ಛ್ರೋಽಯಂ ಪಾಪನಾಶನಃ ।**
**ಪರಾಕೋನಾಮ ವಿಜ್ಞೇಯಃ ಪ್ರಸಿದ್ಧಶ್ಚ ತಪೋಧನ ॥ ೨೭ ॥**

**ಏಕೈಕಂ ವರ್ಧಯೇತ್ಪಿಂಡಂ ಶುಕ್ಲೇ ಕೃಷ್ಣೇ ಚ ಹ್ರಾಸಯೇತ್ ।**
**ಇಂದುಕ್ಷಯೇ ನ ಭುಂಜೀತ ಚಾಂದ್ರಾಯಣವ್ರತಂ ಸ್ಮೃತಂ ॥ ೨೮ ॥**

**ಅಶ್ನೀಯಾಚ್ಚತುರಃ ಪ್ರಾತಃ ಪಿಂಡಾನ್ವಿಪ್ರ ಸಮಾಹಿತಃ ।**
**ಚತುರೋಽಸ್ತಮಿತೇ ಚಾರ್ಕೇ ಶಿಶುಚಾಂದ್ರಾಯಣಂ ಸ್ಮೃತಂ ॥ ೨೯ ॥**

**ಕೂಷ್ಮಾಂಡಘಾತಿನೀ ನಾರೀ ಪಂಚಗವ್ಯಂ ಪಿಬೇತ್ತ್ರ್ಯಹಂ ।**
**ಕೂಷ್ಮಾಂಡಪಂಚಕಂ ದದ್ಯಾತ್ಸಸುವರ್ಣಂ ಸವಸ್ತ್ರಕಂ ।**

---

೨೬. ಪ್ರತಿ ಮೂರು ದಿನಕ್ಕೊಮ್ಮೆ ಬಿಸಿನೀರು, ಬಿಸಿಹಾಲು, ಬಿಸಿ ತುಪ್ಪವನ್ನು ಕುಡಿದು ಒಂದೊಂದುಸಾರಿ ಸ್ನಾನಮಾಡುತ್ತಿದ್ದರೆ ಅದು ತಪ್ತಕೃಚ್ಛ್ರವಾಗುತ್ತದೆ. ಪಾಪನಾಶಕವು.

೨೭. ಹನ್ನೆರಡುದಿನ ಊಟಮಾಡದಿದ್ದರೆ ಅದು ಪರಾಕವೆಂಬ ಕೃಚ್ಛ್ರವು. ಪ್ರಸಿದ್ಧವಾದುದು. ಇದು ಪಾಪವನ್ನು ನಾಶಮಾಡುತ್ತದೆ.

೨೮. ಚಾಂದ್ರಾಯಣವೆಂದರೆ— ಅಮಾವಾಸ್ಯೆಯ ದಿನ ಉಪವಾಸವಿದ್ದು, ಮಾರನೇದಿವ ಒಂದೊಂದು ಗ್ರಾಸದಂತೆ ಹೆಚ್ಚಿಸಿ ಶುಕ್ಲಪಕ್ಷದ ಪೂರ್ಣಿಮೆಗೆ ಹೊಟ್ಟೆ ತುಂಬಿಸಿಕೊಂಡು, ಮತ್ತೆ ಕೃಷ್ಣಪಕ್ಷದ ಪಾಡ್ಯದದಿನದಿಂದ ಒಂದೊಂದು ಗ್ರಾಸ ಕಡಿಮೆಮಾಡಿ ಅಮಾವಾಸ್ಯೆಯದಿನ ಉಪವಾಸಮಾಡುವುದು.

೨೯. ಒಂದುತಿಂಗಳವರೆಗೆ ಪ್ರಾತಃಕಾಲದಲ್ಲಿ ನಾಲ್ಕು ಪಿಂಡಗಳನ್ನು ಮಾತ್ರ ತಿನ್ನುತ್ತಿಂದರೆ ಶಿಶುಚಾಂದ್ರಾಯಣವೆಂದು ಹೆಸರು.

೩೦. ಕುಂಬಳಕಾಯನ್ನು ಹೆಂಗಸು ಒಡೆದರೆ ಪಂಚಗವ್ಯವನ್ನು ಮೂರುದಿನ

**ತಸ್ಮಾ ನಾರಿ ತಥಾ ಭಕ್ತಂ ಸ್ಯಾದ್ವೈ ಗ್ರಾಹ್ಯಂ ತಪೋಧನ ॥ ೩೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕ ಸಂವಾದೇ ಏಕೋನವಿಂಶೋಽಧ್ಯಾಯಃ**

---

ಕುಡಿಯಬೇಕು. ಮತ್ತು ಐದು ಕುಂಬಳಕಾಯಿಗಳನ್ನು ದಕ್ಷಿಣೆವಸ್ತ್ರಗಳೊಡನೆ ದಾನ ಮಾಡಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕಸಂವಾದದಲ್ಲಿ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ೨೦ ಶೋಽಧ್ಯಾಯಃ



॥ ಶೌನಕ ಉವಾಚ ॥

ಸುಕೃತಂ ಕಿಂ ತಥಾ ಪ್ರಾಹ ಕೃತ್ವಾ ಸಂಸಾರಸಾಗರಾತ್ ।
ತರಿಷ್ಯತಿ ಕಲೌ ಸೂತ ತಮೋಂಧಕೂಪಮಂಡುಕಾಃ ॥ ೧ ॥

॥ ಸೂತ ಉವಾಚ ॥

ರಾಧಾಕೃಷ್ಣಪ್ರಿಯೇ ಚೋರ್ಜೇ ಪ್ರಾತಃ ಸ್ನಾನಂ ಸಮಾಚರೇತ್ ।
ರಾಧಾದಾಮೋದರಂ ಭಕ್ತ್ಯಾ ಕುರ್ಯಾತ್ಪೂಜಾಂ ಸಮಾಹಿತಾ ॥ ೨ ॥

ತ್ಯಕ್ತ್ವಾಮಿಷಾದಿಕಂ ಬ್ರಹ್ಮನ್ ಪತಿಸೇವಾಪರಾಯಣಾ ।
ಸಾ ಯಾತಿ ಶ್ರೀಹರೇಸ್ಸ್ಥಾನಂ ಗೋಲೋಕಾಖ್ಯಂ ಸುದುರ್ಲಭಂ ॥ ೩ ॥

---

## ಇಪ್ಪತ್ತನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಕಲಿಯುಗದಲ್ಲಿ ತಮಸ್ಸೆಂಬ ಅಂಧಕೂಪದಲ್ಲಿ ಕಪ್ಪೆಗಳಂತಿರುವ ಈ ಜನಗಳು ಯಾವ ಪುಣ್ಯವನ್ನು ಮಾಡಿದರೆ ಈ ಸಂಸಾರವೆಂಬ ಸಮುದ್ರವನ್ನು ದಾಟುವರು, ಹೇಳು.

೨-೩. ಸೂತನು ಹೇಳಿದನು :— ರಾಧಾಕೃಷ್ಣನಿಗೆ ಪ್ರೀತಿಯನ್ನುಂಟು ಮಾಡುವ ಆಶ್ವಯುಜಮಾಸದಲ್ಲಿ ಬೆಳಿಗ್ಗೆ ಸ್ನಾನಮಾಡಿ, ರಾಧಾದಾಮೋದರರ ಪೂಜೆಯನ್ನು ಭಕ್ತಿಯಿಂದ ಮಾಡಬೇಕು. ಮಾಂಸ ಮುಂತಾದುವುಗಳನ್ನು ಬಿಡಬೇಕು. ಪತಿಸೇವೆಯಲ್ಲಿ ಪರಾಯಣೆಯಾಗಿರಬೇಕು. ಆಕೆಯು ಗೋಲೋಕವನ್ನು ಹೊಂದುತ್ತಾಳೆ.

ರಾಧಾದಾಮೋದರಾಭ್ಯಾಂ ಯಾ ಧೂಪದೀಪಂ ತು ಕಾರ್ತಿಕೇ ।
ದದ್ಯಾತ್ಸಾಭವನಂ ವಿಷ್ಣೋರ್ಯಾತಿ ವೈ ತ್ಯಕ್ತಪಾತಕಾ ॥ ೪ ॥

ಯೋಷಿದ್ಯಾ ಕಾರ್ತಿಕೇ ವಿಪ್ರ ದದ್ಯಾದ್ವಸ್ತ್ರಂ ನಿಕೇತನೇ ।
ರಾಧಾದಾಮೋದರಾಭ್ಯಾಂ ತು ವಸೇತ್ಸಾ ಶ್ರೀಹರೇಶ್ಚಿರಂ ॥ ೫ ॥

ರಾಧಾದಾಮೋದರಾಭ್ಯಾಂ ಯಾ ಪುಷ್ಪಂ ಮಾಲ್ಯಂ ಸುವಾಸಿತಂ ।
ಕಾರ್ತಿಕೇ ಮಾಸಿ ಸಾ ದದ್ಯಾದ್ಯಾತಿ ವೈಕುಂಠಮಂದಿರಂ ॥ ೬ ॥

ಗಂಧಂ ಯಾ ಚಾಪಿ ನೈವೇದ್ಯಂ ದದ್ಯಾದ್ವೈ ಶರ್ಕರಾದಿಕಂ ।
ರಾಧಾದಾಮೋದರಾಭ್ಯಾಂ ಸಾ ಗಚ್ಛೇದ್ವೈ ವಿಷ್ಣುಮಂದಿರಂ ॥ ೭ ॥

ಯತ್ಕಿಂಚಿದ್ಯಚ್ಛತಿ ಬ್ರಹ್ಮನ್ ಕಾರ್ತಿಕೇ ಚ ದ್ವಿಜಾತಯೇ ।
ರಾಧಾದಾಮೋದರಪ್ರೀತ್ಯೈ ತಸ್ಯಾಃ ಪುಣ್ಯಾಕ್ಷಯಂ ಭವೇತ್ ॥ ೮ ॥

ಯಾ ನಾರೀ ಕಾರ್ತಿಕೇ ಭಕ್ತ್ಯಾ ರಾಧಾದಾಮೋದರಂ ದ್ವಿಜ ।
ಪ್ರಾತಃ ಸಪರ್ಯಾಂ ಸಾ ಯಾತಿ ನ ಕುರ್ಯಾನ್ನಿರಯಂ ಚಿರಂ ॥ ೯ ॥

---

೪. ಕಾರ್ತಿಕಮಾಸದಲ್ಲಿ ರಾಧಾದಾಮೋದರರಿಗೆ ಧೂಪದೀಪಗಳನ್ನು ಕೊಟ್ಟರೆ ಪಾಪಗಳು ಹೋಗಿ ವಿಷ್ಣುಪದವನ್ನು ಹೊಂದುತ್ತಾಳೆ.

೫. ಕಾರ್ತಿಕಮಾಸದಲ್ಲಿ ಹೆಂಗಸು ವಸ್ತ್ರದಾನಮಾಡಿದರೆ ಆಕೆಯು ಹರಿಮಂದಿರವನ್ನು ಸೇರುತ್ತಾಳೆ.

೬. ರಾಧಾದಾಮೋದರರಿಗೆ ಯಾವಳು ಕಾರ್ತಿಕಮಾಸದಲ್ಲಿ ಸುವಾಸನೆಯು ಪುಷ್ಪಗಳನ್ನು ಅರ್ಪಿಸುತ್ತಾಳೋ ಆಕೆಯು ವೈಕುಂಠಕ್ಕೆ ಹೋಗುತ್ತಾಳೆ.

೭. ರಾಧಾದಾಮೋದರರಿಗೆ ಕಾರ್ತಿಕಮಾಸದಲ್ಲಿ ಗಂಧನೈವೇದ್ಯಸಕ್ಕರೆಗಳನ್ನು ಯಾವಳು ಕೊಡುತ್ತಾಳೋ ಆಕೆಯು ಹರಿಮಂದಿರಕ್ಕೆ ಹೋಗುತ್ತಾಳೆ.

೮. ರಾಧಾದಾಮೋದರ ಪ್ರೀತಿಗೋಸ್ಕರ ಬ್ರಾಹ್ಮಣನಿಗೆ ಯಾವ ದಾನ ಬೇಕಾದರೂ ಮಾಡಲಿ. ಹಾಗೆ ಮಾಡಿದರೆ ಅಕ್ಷಯ ಪುಣ್ಯವುಂಟು.

೯. ಕಾರ್ತಿಕಮಾಸದಲ್ಲಿ ರಾಧಾದಾಮೋದರರನ್ನು ಉದ್ದೇಶಿಸಿ ಯಾವಳು ಭಕ್ತಿಯಿಂದ ಪ್ರಾತಃಕಾಲದಲ್ಲಿ ಪೂಜೆಮಾಡುತ್ತಾಳೋ ಅವಳು ಬಹುಕಾಲ ನರಕಭಾಗಿನಿಯಾಗುವುದಿಲ್ಲ. ಮಾಡದಿದ್ದರೆ ಅವಳು ನರಕಭಾಗಿಯಾಗುವಳು.

ಕದಾಚಿಜ್ಜನ್ಮಭೂಮೌ ಸಾ ವಿಧವಾ ಪ್ರತಿಜನ್ಮನೀ ।
ಭವೇಚ್ಚಾಸಾದ್ಯ ಪೂರ್ವಂ ವೈ ಚಾಪ್ರಿಯಾ ಸ್ವಾಮಿನೋಽಪಿ ಚ ॥ ೧೦ ॥

ಪುರಾ ತ್ರೇತಾಯುಗೇ ವಿಪ್ರ ವೃಷಲೋ ನಾಮ ಶಂಕರಃ ।
ಸೌರಾಷ್ಟ್ರದೇಶವಾಸೀ ಚ ತಸ್ಯ ಜಾಯಾ ಕಲಿಪ್ರಿಯಾ ॥ ೧೧ ॥

ಜಾರಾಕಾಂಕ್ಷೀ ಸದಾ ನಾಮ್ನಾ ತೃಣವನ್ಮನ್ಯತೇ ಪತಿಂ ।
ಅಸೌ ಪತಿರ್ನಮೇ ಯೋಗ್ಯೋ ಮೇ ಸ್ವಾಮೀ ಪರಪೂರುಷಃ ॥ ೧೨ ॥

ಇತಿ ಮತ್ವಾ ಸದಾ ತಸ್ಮೈ ಚೋಚ್ಛಿಷ್ಟಂ ತು ದದಾತಿ ವೈ ।
ನೀಚಸಂಗಾನ್ಮಹಾಮೂಢಾ ಮದ್ಯಮಾಂಸಂ ಚಖಾದ ಹ ॥ ೧೩ ॥

ಸ್ವಾಮಿನೋ ಭರ್ತ್ಸನಾಂ ನಿತ್ಯಂ ಕುರ್ಯಾತ್ಕಾಮಂ ತು ನಿಷ್ಠುರಾಂ ।
ಪಾದರಜ್ಜುರ್ಭವೇಚ್ಚಾಸೌ ಕಸ್ಮಾದ್ವೈ ನ ಮೃತೋಽಪಿ ಚ ॥ ೧೪ ॥

ಮೃತೇ ತಸ್ಮಿನ್ನಹಂ ಭೋಗಂ ಕರಿಷ್ಯಾಮಿ ಯದೃಚ್ಛಯಾ ।
ವಿಚಾರ್ಯೇತಿ ಹೃದಾ ಮೂಢಾ ಜಾರೇಣೈಕೇನ ಸಾ ತದಾ ॥ ೧೫ ॥

---

೧೦. ಜನ್ಮಭೂಮಿಯಲ್ಲಿ ಹುಟ್ಟುತ್ತಾ ಪ್ರತಿ ಜನ್ಮದಲ್ಲಿಯೂ ವಿಧವೆಯಾಗುತ್ತಾಳೆ. ಗಂಡನನ್ನು ಹೊಂದಿದರೂ ಅವನಿಗೆ ಪ್ರೀತಿಪಾತ್ರಳಾಗುವುದಿಲ್ಲ.

೧೧. ಪೂರ್ವದಲ್ಲಿ ತ್ರೇತಾಯುಗದಲ್ಲಿ ಶಂಕರನೆಂಬ ಶೂದ್ರನಿದ್ದನು. ಅವನು ಸೌರಾಷ್ಟ್ರ ದೇಶದವನು. ಅವನ ಹೆಂಡತಿಯು ಯಾವಾಗಲೂ ಜಗಳಗಂಟಿಯು. ಅವಳ ಹೆಸರು ಕಲಿಪ್ರಿಯಳೆಂದು.

೧೨-೧೩. ಜಾರನನ್ನು ಅಪೇಕ್ಷಿಸುವವಳಾದುದರಿಂದ ಜಾರಾಕಾಂಕ್ಷಿಯೆಂದೂ ಆಕೆಯ ಹೆಸರು. ಗಂಡನನ್ನು ಹುಲ್ಲಿಗಿಂತ ಕಡೆಯಾಗಿ ಕಾಣುತ್ತಿದ್ದಳು. ಈ ಗಂಡನು ನನಗೆ ಯೋಗ್ಯನಲ್ಲ, ನನ್ನ ಗಂಡನು ಪರಪುರುಷನು ಎಂದು ತಿಳಿದು ಆ ಗಂಡನಿಗೆ ಎಂಜಲನ್ನವನ್ನು ದಿನವೂ ಹಾಕುತ್ತಿದ್ದಳು. ನೀಚರ ಸಹವಾಸದಿಂದ ಮದ್ಯವನ್ನು ಕುಡಿಯುವುದು, ಮಾಂಸವನ್ನು ತಿನ್ನುವುದು, ರೂಢಿಯಾಗಿ ಬಿಟ್ಟಿತು.

೧೪. ನಿತ್ಯವೂ ಗಂಡನನ್ನು ಹೆದರಿಸುವುದು, ಬಯ್ಯುವುದು, ಮಾಡುತ್ತ ಇವನು ನನ್ನ ಕಾಲಿಗೆ ಸಂಕೋಲೆಯಾಗಿದ್ದಾನೆ. ಇವನೇತಕ್ಕೆ ಸಾಯುವುದಿಲ್ಲ ?

೧೫. ಇವನು ಸತ್ತರೆ ನಾನು ಯಥೇಚ್ಛವಾಗಿ ಭೋಗಿಸುತ್ತಿರಬಹುದು. ಎಂದೆ

ಅನ್ಯದೇಶಂ ಗಮಿಷ್ಯಾವಃ ಸಂಕೇತಮಕರೋದ್ದ್ವಿಜ ।
ಸುಪ್ತಸ್ಯ ಸ್ವಾಮಿನೋ ರಾತ್ರಾವಸಿನಾ ತು ಶಿರೋ ದ್ವಿಜ ॥ ೧೬ ॥

ಛಿತ್ವಾ ಜಾರಕೃತೇ ಸಾಪಿ ಸಂಕೇತಸ್ಯ ಸ್ಥಲಂ ಗತಾ ।
ಆಗತಂ ಜಾರಪುರುಷಂ ದ್ವೀಪಿನಾ ಭಕ್ಷಿತಂ ದ್ವಿಜ ॥ ೧೭ ॥

ದೃಷ್ಟ್ವಾ ಸಾ ರೋದನಂ ಕೃತ್ವಾ ಮೂರ್ಛಿತಾ ನಿಪಪಾತ ಹ ।
ಚಿರಾದಾಶ್ವಸ್ಯ ಸಾ ಮೂಢಾ ಕರುಣಂ ವಿಲಲಾಪ ಹ ॥ ೧೮ ॥

॥ ಕಲಿಪ್ರಿಯೋವಾಚ ॥

ಸ್ವಕೀಯಂ ಸ್ವಾಮಿನಂ ಹತ್ವಾ ಚಾಗತಾ ಪರಪೂರುಷಂ ।
ತಂ ಜಾರಂ ಸ್ವಾಮಿನಂ ದೈವಾಚ್ಛಾದೂರ್ಲೋಽಭಕ್ಷಯನ್ಮಮ ।
ಕಿಂ ಕರೋಮಿ ಕ್ವ ಗಚ್ಛಾಮಿ ವಿಧಾತ್ರಾ ವಂಚಿತಾಸ್ಮ್ಯಹಂ ॥ ೧೯ ॥

॥ ಸೂತ ಉವಾಚ ॥

ತತಃ ಕಲಿಪ್ರಿಯಾ ಬ್ರಹ್ಮನ್ನಾಗತಾ ಸ್ವಗೃಹಂ ಪ್ರತಿ ।
ಲಪನೇ ಸ್ವಾಮಿನೋ ದತ್ವಾ ಮುಖಂ ಚ ವಿಲಲಾಪ ಸಾ ॥ ೨೦ ॥

---

ನ್ನಿತ್ತ ಮನಸ್ಸಿನಲ್ಲಿಯೇ ಯೋಚನೆಮಾಡಿಕೊಂಡು ಒಬ್ಬ ಜಾರನೊಡನೆ ಬೇರೆ ಸ್ಥಳಕ್ಕೆ ಹೋಗುವಂತೆ ಸಿದ್ಧಪಡಿಸಿಕೊಂಡು ಇದ್ದಳು.

೧೬. ರಾತ್ರಿ ಗಂಡನು ಮಲಗಿರುವಾಗ ಅವನ ಕತ್ತನ್ನು ಕತ್ತಿಯಿಂದ ಕತ್ತರಿಸಿ ಜಾರನು ಹೇಳಿದ್ದ ಸಂಕೇತಸ್ಥಳಕ್ಕೆ ಹೋದಳು.

೧೭-೧೮. ಅಲ್ಲಿಗೆ ಬಂದಿದ್ದ ಜಾರಪುರುಷನನ್ನು ಹುಲಿಯು ತಿಂದುಬಿಟ್ಟಿದ್ದಿತು. ಅವನ್ನು ನೋಡಿ ಇವಳು ಮೂರ್ಛೆಹೋದಳು. ಬಹುಕಾಲದಮೇಲೆ ಎಚ್ಚೆತ್ತು ಬಹುವಾಗಿ ಅತ್ತಳು.

೧೯. ಕಲಿಪ್ರಿಯೆಯು ಹೇಳಿದಳು:—ನನ್ನ ಗಂಡನನ್ನು ಕೊಂದು ಜಾರನಲ್ಲಿ ಅಪೇಕ್ಷೆಯಿಂದ ಬಂದೆನು. ಆ ಜಾರನಾದ ಸ್ವಾಮಿಯನ್ನು ದುರದೃಷ್ಟದಿಂದ ಹುಲಿಯು ತಿಂದುಬಿಟ್ಟಿತು. ಏನುಮಾಡಲಿ? ಎಲ್ಲಿ ಹೋಗಲಿ? ದೇವರು ನನ್ನನ್ನು ವಂಚಿಸಿದನು. ಎಂದು ಹಂಬಲಿಸಿದಳು.

೨೦. ಸೂತನು ಹೇಳಿದನು:—ಆಮೇಲೆ ಕಲಿಪ್ರಿಯೆಯು ಮನೆಗೆ ಬಂದು ಗಂಡನ ಮುಖದಲ್ಲಿ ಮುಖವಿಟ್ಟು ಅಳುತ್ತಿದ್ದಳು.

॥ ಕಲಿಪ್ರಿಯೋವಾಚ ॥

ಹಾ ನಾಥ ಕಿಂ ಕೃತಂ ಕರ್ಮ ಮಯಾ ಹಂತಾತಿದಾರುಣಂ ।
ಕಂ ಲೋಕಂ ವಾ ಗಮಿಷ್ಯಾಮಿ ವದ ಸ್ವಾಮಿನ್ ಮನಾಗ್ಗಿರಂ ॥ ೧೦ ॥

ಭರ್ತ್ಸನಾಂ ತು ಯಥಾಕಾಮಂ ಕುರ್ವ್ಯಾಂ ಚಾಹಂ ಸುನಿಂದಿತಾ ।
ಕಿಂಚಿನ್ನ ವದಸಿ ಸ್ವಾಮಿನ್ನೇನೋ ಯನ್ಮೇ ನ ವಿದ್ಯತೇ ॥ ೧೧ ॥

॥ ಸೂತ ಉವಾಚ ॥

ನನಾಮ ಚರಣೇ ತಸ್ಯ ಗತಾನ್ಯನಗರಂ ಪ್ರತಿ ।
ತತ್ರ ಪ್ರವಿಷ್ಟಾ ಸಾ ಯೋಷಿದ್ದೃಷ್ಟ್ವಾ ಪುಣ್ಯಜನಾನ್ ಬಹೂನ್ ॥ ೧೩ ॥

ಊರ್ಜೇ ಸ್ನಾನಪರಾನ್ ಪ್ರಾತರ್ನರ್ಮದಾಯಾಂ ಚ ವೈಷ್ಣವಾನ್ ।
ತತ್ರ ನದ್ಯಾಂ ಸ್ತ್ರಿಯಶ್ಚಾಪಿ ರಾಧಾದಾಮೋದರಂ ದ್ವಿಜ ॥ ೧೪ ॥

ಸಪರ್ಯಾಂ ಚ ಕೃತಾಂ ಚೈವ ಶಂಖನಾದೈರ್ಮಹೋತ್ಸವೈಃ ।
ಗಂಧಪುಷ್ಪೈರ್ದೀಪಧೂಪೈರ್ವಸ್ತ್ರೈರ್ನಾನಾವಿಧೈಃ ಫಲೈಃ ॥ ೧೫ ॥

---

೧೦. ಕಲಿಪ್ರಿಯೆಯು ಹೇಳಿದಳು:—ಎಲೈ ನಾಥನೆ, ನಾನು ಎಂತಹ ಕೆಟ್ಟ ಕೆಲಸವನ್ನು ಮಾಡಿದೆನು ? ಯಾವ ಲೋಕಕ್ಕೆ ಹೋಗುವೆನು ? ಎಲೈ ಸ್ವಾಮಿಯೇ, ಮಾತನಾಡು.

೧೧. ಇಷ್ಟಬಂದಂತೆ ನಿನ್ನನ್ನು ತಿರಸ್ಕರಿಸುತ್ತಿದ್ದು ಬಯ್ಯುತ್ತಿದ್ದೆನು. ನೀನು ಏನೂ ಮಾತಾಡುತ್ತಲೇ ಇರಲಿಲ್ಲ. ನನ್ನಲ್ಲಿ ತಪ್ಪುತಾನೇ ಇಲ್ಲ. ಮಾತನಾಡು.

೧೩. ಅವನ ಪಾದಗಳನ್ನು ನಮಸ್ಕರಿಸಿ ಬೇರೆ ಊರಿಗೆ ಹೋದಳು. ಅಲ್ಲಿ ಅವಳು ಹೋಗುತ್ತಲೂ ಕಾರ್ತಿಕಮಾಸದಲ್ಲಿ ನರ್ಮದೆಯಲ್ಲಿ ಸ್ನಾನಮಾಡುತ್ತಿರುವ ಹೆಂಗಸರನ್ನು ನೋಡಿದಳು.

೧೪-೧೫. ಆ ನದಿಯಲ್ಲಿ ಸ್ತ್ರೀಯರೂ ಕೂಡ ರಾಧಾದಾಮೋದರರನ್ನು ಪೂಜಿಸುತ್ತ ಶಂಖನಾದಗಳಿಂದಲೂ, ಗಂಧಹೂಗಳಿಂದಲೂ, ಧೂಪದೀಪಗಳಿಂದಲೂ, ವಸ್ತ್ರ

ಮುಖವಾಸೈರ್ಭಕ್ತಿಯುಕ್ತಾ ದೃಷ್ಟ್ವಾ ಸಾ ವಿನಯಾನ್ವಿತಾ ।
ಪಪ್ರಚ್ಛ ಬ್ರೂತ ಯೂಯಂ ಮೇ ಕಿಮೇತತ್ಕ್ರಿಯತೇ ಸ್ತ್ರಿಯಃ ॥ ೨೬ ॥

॥ ಸ್ತ್ರಿಯ ಊಚುಃ ॥

ಸರ್ವಮಾಸೋತ್ತಮೇ ಚೋರ್ಜೇ ರಾಧಾದಾಮೋದರೌ ಶುಭೌ ।
ಪೂಜಯಾಮೋ ವಯಂ ಮಾತಃ ಸರ್ವಪಾಪಹರೌ ಶುಭೌ ॥ ೨೭ ॥

ಕೋಟಿಜನ್ಮಾರ್ಜಿತಂ ಪಾಪಂ ನಷ್ಟಂ ಪ್ರಾಪ್ತಂ ನಿಕೇತನಂ ।
ಸಪರ್ಯಾಮಾಮಿಷಂ ತ್ಯಕ್ತ್ವಾ ಕೃತ್ವಾ ಸಾ ಚ ಹರೇರ್ದಿನೇ ॥ ೨೮ ॥

ನಿಧನತ್ವಂ ಪೌರ್ಣಮಾಸ್ಯಾಂ ಗತಾ ಸಾ ನಿರ್ಮಲಾ ದ್ವಿಜ ।
ಕಿಂಕರಾಶ್ಚಾಗತಾಸ್ತೂರ್ಣಂ ಯಮಸ್ಯ ನಿಲಯಂ ಪ್ರತಿ ॥ ೨೯ ॥

ನೇತುಂ ತಾಂ ಕ್ರೋಧಸಂಯುಕ್ತಾ ಬಬಂಧುಶ್ಚರ್ಮರಜ್ಜುಭಿಃ ।
ತದಾಗತಾ ವಿಷ್ಣುದೂತಾಃ ವಿಮಾನಂ ಸ್ವರ್ಣನಿರ್ಮಿತಂ ॥ ೩೦ ॥

ಶಂಖಚಕ್ರಗದಾಪದ್ಮಧಾರಿಣೋ ವನಮಾಲಿನಃ ।
ನಿಜಘ್ನುಶ್ಚಕ್ರಧಾರಾಭಿರ್ಯಮದೂತಾಃ ಪಲಾಯಿತಾಃ ॥ ೩೧ ॥

---

ದಿಗಳಿಂದಲೂ ಫಲವೇ ಮುಂತಾದುವುಗಳಿಂದಲೂ, ಭಕ್ತಿಯಿಂದ ಪೂಜೆಮಾಡುತ್ತಿದ್ದುದನ್ನು ನೋಡಿ ಎಲೈ ಸ್ತ್ರೀಯರೇ, ನೀವು ಮಾಡುತ್ತಿರುವುದೇನು ? ಹೇಳಿರಿ ಎಂದಳು.

೨೭. ಸ್ತ್ರೀಯರು ಹೇಳಿದರು :—ಉತ್ತಮವಾದ ಈ ಕಾರ್ತಿಕಮಾಸದಲ್ಲಿ ರಾಧಾದಾಮೋದರರನ್ನು ಪೂಜೆಮಾಡುತ್ತೇವೆ. ಅದರಿಂದ ಪಾಪಹರಣವಾಗುವುದು.

೨೮. ಇವರಿಂದ ಕೋಟಿಜನ್ಮಗಳಿಂದ ಮಾಡಿದ ಪಾಪವು ನಷ್ಟವಾಯಿತೆಂದರು. ಈಕೆಯೂ ಮನೆಗೆ ಬಂದು ಹರಿಯ ದಿನದಲ್ಲಿ ಪೂಜೆಮಾಡಿ ಮಾಂಸವನ್ನು ಬಿಟ್ಟಿದ್ದಳು.

೨೯. ಆ ವ್ರತಮಹಿಮೆಯಿಂದ ಆಕೆಯು ತನ್ನ ಪಾಪವನ್ನೆಲ್ಲಾ ಕಳೆದುಕೊಂಡು ಹುಣ್ಣಿಮೆಯ ದಿನ ಕಾಲವಾಗಲು ಯಮನ ಆಳುಗಳು ಬಂದು ಕೊಂಡೊಯ್ಯಲು ಚರ್ಮದ ಹಗ್ಗಗಳಿಂದ ಕಟ್ಟಿದರು.

೩೦-೩೧. ಆಗ ವಿಮಾನವನ್ನು ತೆಗೆದುಕೊಂಡು ವಿಷ್ಣುದೂತರು ಶಂಖಚಕ್ರ ಗದಾ ಪದ್ಮವನಮಾಲೆಗಳನ್ನು ಧರಿಸಿಬಂದರು. ಯಮದೂತರನ್ನು ಅವರು ಬಡಿದೋಡಿಸಿದರು. ಯಮದೂತರು ಹೊರಟುಹೋದರು.

ರಾಜಹಂಸಯುತೇ ವಿಪ್ರ ವಿಮಾನೇ ಸ್ವರ್ಣನಿರ್ಮಿತೇ ।
ಆರೂಢಾ ಸಾ ಗತಾ ತೈಸ್ತು ವೇಷ್ಟಿತಾ ವಿಷ್ಣುಮಂದಿರಂ
ತತ್ರ ತಸ್ಥೌ ಚಿರಂ ಭೋಗಂ ಕೃತ್ವಾ ಸಾ ವೈ ಯಥೇಪ್ಸಿತಂ । ॥ ೩೨ ॥

ಯಾ ಕುರ್ಯಾತ್ಕಾರ್ತಿಕೇ ವಿಪ್ರ ರಾಧಾದಾಮೋದರಾರ್ಚನಂ ।
ಯಾತಿ ಪೂಜಾಂ ತ್ಯಕ್ತಪಾಪಾ ಗೋಲೋಕಾಖ್ಯಂ ಮನೋಹರಂ ॥ ೩೩ ॥

ಯ ಇದಂ ಶೃಣುಯಾದ್ಭಕ್ತ್ಯಾ ಯಾ ಚ ನಾರೀ ಸಮಾಹಿತಾ ।
ಕೋಟಿಜನ್ಮಾರ್ಜಿತಂ ಪಾಪಂ ತಸ್ಯ ತಸ್ಯಾ ವಿನಶ್ಯತಿ ॥ ೩೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತ
ಶೌನಕಸಂವಾದೇ ವಿಂಶೋಽಧ್ಯಾಯಃ

---

೩೨. ರಾಜಹಂಸದಿಂದ ಕೂಡಿದ ಚಿನ್ನದ ವಿಮಾನದಲ್ಲಿ ಕುಳಿತು ವಿಷ್ಣುದೂತರಿಂದ ಕೂಡಿಕೊಂಡು ಹೋದಳು. ಆಕೆಯು ಅವರೊಡನೆ ಹೋಗಿ ವಿಷ್ಣುಲೋಕದಲ್ಲಿ ಬಹುಕಾಲವಿದ್ದು ಇಷ್ಟವಾದ ಭೋಗಗಳನ್ನೆಲ್ಲಾ ಅನುಭವಿಸಿದಳು.

೩೩. ಕಾರ್ತಿಕಮಾಸದಲ್ಲಿ ರಾಧಾದಾಮೋದರರ ವ್ರತವನ್ನು ಮಾಡಿದವಳು ಪಾಪವನ್ನು ಕಳೆದುಕೊಂಡು ಗೋಲೋಕವನ್ನು ಹೊಂದುತ್ತಾಳೆ.

೩೪. ಹೆಂಗಸರು, ಗಂಡಸರು, ಯಾರೇ ಆಗಲಿ ಇದನ್ನು ಭಕ್ತಿಯಿಂದ ಕೇಳಿದರೆ ಕೋಟಿಜನ್ಮಗಳ ಪಾಪಗಳನ್ನು ಕಳೆದುಕೊಳ್ಳುವರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕಸಂವಾದದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ಏಕವಿಂಶತಿತಮೋಽಧ್ಯಾಯಃ



॥ ಶೌನಕ ಉವಾಚ ॥

ಕಥಯಸ್ವಾಧುನಾ ಸೂತ ಸರ್ವಮಾಸೋತ್ತಮಸ್ಯ ಚ ।
ಕಾರ್ತಿಕಸ್ಯ ವಿಧಿಂ ಸಮ್ಯಙ್ನಿಯಮಾನ್ವಕ್ತುಮರ್ಹಸಿ ॥ ೧ ॥

ಸೂತ ಉವಾಚ ॥

ಆಶ್ವಿನಸ್ಯ ದ್ವಿಜಶ್ರೇಷ್ಠ ಪೌರ್ಣಮಾಸ್ಯಾಂ ಸಮಾಹಿತಃ ।
ಕಾರ್ತಿಕಸ್ಯ ವ್ರತಂ ಕುರ್ಯಾದ್ಯಾವದುದ್ಬೋಧಿನೀ ಭವೇತ್ ॥ ೨ ॥

ದಿವಾ ವಿಪ್ರ ನರಃ ಕುರ್ಯಾನ್ಮಲಮೂತ್ರಮುದಙ್ಮುಖಃ ।
ಭವೇನ್ಮೌನೀ ಚ ಸರ್ವಜ್ಞ ರಾತ್ರೌ ಚೇದ್ದಕ್ಷಿಣಾಮುಖಃ ॥ ೩ ॥

---

### ಇಪ್ಪತ್ತೊಂದನೆಯ ಅಧ್ಯಾಯವು

೧. ಶೌನಕನು ಹೇಳಿದನು :—ಎಲೈ ಸೂತನೇ, ಉತ್ತಮವಾದ ಕಾರ್ತಿಕ ಮಾಸದ ವಿಧಿನಿಯಮಗಳನ್ನು ಚನ್ನಾಗಿ ಹೇಳು.

೨. ಸೂತನು ಹೇಳಿದನು :—ಆಶ್ವಯುಜ ಪೌರ್ಣಮಾಸ್ಯೆಯಿಂದ ಮೊದಲು ಮಾಡಿಕೊಂಡು ಉತ್ಥಾನದ್ವಾದಶೀವರೆಗೂ ಕಾರ್ತಿಕವ್ರತವನ್ನು ಮಾಡಬೇಕು.

೩. ಹಗಲಿನಲ್ಲಿ ಮನುಷ್ಯರು ಉತ್ತರಮುಖವಾಗಿಯೂ ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿಯೂ ಕುಳಿತುಕೊಂಡು ಮಲಮೂತ್ರಗಳನ್ನು ವಿಸರ್ಜಿಸಬೇಕು. ಮೌನವಾಗಿರಬೇಕು.

ಪಥ್ಯಂಭಸಿ ಚ ಗೋಷ್ಠೇಷು ಶ್ಮಶಾನೇ ವಲ್ಮೀಕೇ ದ್ವಿಜ ।
ಕುರ್ಯಾದುತ್ಸರ್ಜನಂ ನೈವ ವ್ರತೀ ಮೂತ್ರಪುರೀಷಯೋಃ ।
ಶುದ್ಧಾಂ ಮೃದಂ ಗೃಹೀತ್ವಾಥ ವಾಮಂ ಪ್ರಕ್ಷಾಲಯೇತ್ಕರಂ ॥ ೪ ॥

ಅದ್ಭಿರ್ಮೃದಾಪಿ ಶುದ್ಧ್ಯರ್ಥಂ ಪೂರ್ವಂ ವಿಂಶತಿಸಂಖ್ಯಯಾ ।
ಉಭೌ ಚ ದಶಸಂಖ್ಯಾಭಿಃ ಪಾದೌ ಚೈವ ತ್ರಿಭಿಸ್ತ್ರಿಭಿಃ ॥ ೫ ॥

ಮುಖಶುದ್ಧಿಂ ತತಃ ಕುರ್ಯಾತ್ಸಂಕಲ್ಪಂ ಸ್ನಪನಸ್ಯ ಚ ।
ಹೃದಿ ದಾಮೋದರಂ ಧ್ಯಾತ್ವಾ ಇಮಂ ಮಂತ್ರಂ ತತೋ ವದೇತ್ ॥ ೬ ॥

ಕಾರ್ತಿಕೇಽಹಂ ಕರಿಷ್ಯಾಮಿ ಪ್ರಾತಃಸ್ನಾನಂ ಜನಾರ್ದನ ।
ದಾಮೋದರಸ್ಯ ಪ್ರೀತ್ಯರ್ಥಂ ರಾಧಾಯಾಃ ಪಾಪನಾಶನಂ ॥ ೭ ॥

ನಮಃ ಪಂಕಜನಾಭಾಯ ಕೃಷ್ಣಾಯ ಜಲಶಾಯಿನೇ ।
ನಮಸ್ತೇ ರಾಧಯಾ ಸಾರ್ಧಂ ಗೃಹಾಣಾರ್ಘ್ಯಂ ಪ್ರಸೀದ ಮೇ ॥ ೮ ॥

---

೪. ದಾರಿ, ನೀರು, ಕೊಟ್ಟಿಗೆ, ಶ್ಮಶಾನ, ಹುತ್ತಗಳಲ್ಲಿ ಮಲಮೂತ್ರಗಳನ್ನು ವಿಸರ್ಜಿಸಬಾರದು. ಶುದ್ಧವಾದ ಮಣ್ಣನ್ನು ತೆಗೆದುಕೊಂಡು ಎಡಗೈಯನ್ನು ತೊಳೆದುಕೊಳ್ಳಬೇಕು.

೫. ನೀರಿನಿಂದ ಮಣ್ಣನ್ನು ಹಾಕಿಕೊಂಡು ಕೈಯನ್ನು ಇಪ್ಪತ್ತುಬಾರಿಯೂ ಎಂದರೆ ಒಂದೊಂದು ಕೈಯನ್ನು ಹತ್ತುಹತ್ತುಬಾರಿಯೂ ಒಂದೊಂದು ಕಾಲನ್ನು ಮೂರುಮೂರುಬಾರಿಯೂ ತೊಳೆದುಕೊಳ್ಳಬೇಕು.

೬. ಆಮೇಲೆ ಮುಖಶುದ್ಧಿಮಾಡಿಕೊಂಡು ಎಂದರೆ ಬಾಯಿಮುಕ್ಕಳಿಸಿ, ಸ್ನಾನಕ್ಕೆ ಸಂಕಲ್ಪಮಾಡಬೇಕು. ಹೃದಯದಲ್ಲಿ ದಾಮೋದರನನ್ನು ಧ್ಯಾನಮಾಡಿ ಈ ಮಂತ್ರವನ್ನು ಹೇಳಬೇಕು.

೭. ದಾಮೋದರ ರಾಧೆಯರ ಪ್ರೀತ್ಯರ್ಥವಾಗಿ ಕಾರ್ತಿಕದಲ್ಲಿ ನಾನು ಪ್ರಾತಃ ಸ್ನಾನವನ್ನು ಮಾಡುತ್ತೇನೆ.

೮. ಪಂಕಜನಾಭನಿಗೆ ನಮಸ್ಕಾರವು. ಕೃಷ್ಣನಿಗೆ ನಮಸ್ಕಾರವು. ಜಲಶಾಯಿಯಾದ ಸ್ವಾಮಿಗೆ ನಮಸ್ಕಾರವು. ರಾಧೆಯೊಡನಿರುವ ಸ್ವಾಮಿಗೆ ನಮಸ್ಕಾರವು. ಈ ಅರ್ಘ್ಯವನ್ನು ತೆಗೆದುಕೋ, ನನಗೆ ಪ್ರಸನ್ನನಾಗು.

ಸ್ನಾನಂ ಕುರ್ಯಾತ್ತತೋ ವಿಪ್ರ ತಿಲಕಂ ತು ಯಥಾವಿಧಿ ।
ಊರ್ಧ್ವಪುಂಡ್ರವಿಹೀನಸ್ತು ಕಿಂಚಿತ್ಕರ್ಮ ಕರೋತಿ ಯಃ ।
ನಿಷ್ಫಲಂ ಕರ್ಮ ತತ್ಸರ್ವಂ ಸತ್ಯಮೇತನ್ಮಯೋಚ್ಯತೇ ॥ ೯ ॥

ಯಚ್ಛರೀರಂ ಮನುಷ್ಯಾಣಾಮೂರ್ಧ್ವಪುಂಡ್ರವಿನಾ ಕೃತಂ ।
ತದ್ದರ್ಶನಂ ನ ಕರ್ತವ್ಯಂ ದೃಷ್ಟ್ವಾ ಸೂರ್ಯಂ ನಿರೀಕ್ಷಯೇತ್ ॥ ೧೦ ॥

ಊರ್ಧ್ವಪುಂಡ್ರಂ ಮೃದಾ ಶುಭ್ರಂ ಲಲಾಟೇ ಯಸ್ಯ ದೃಶ್ಯತೇ ।
ಚಾಂಡಾಲೋಽಪಿ ವಿಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ॥ ೧೧ ॥

ಅಚ್ಛಿದ್ರಮೂರ್ಧ್ವಪುಂಡ್ರಂ ತು ಯೇ ಕುರ್ವಂತಿ ನರಾಧಮಾಃ ।
ತೇಷಾಂ ಲಲಾಟೇ ಸತತಂ ಶುನಃ ಪಾದೋ ನ ಸಂಶಯಃ ॥ ೧೨ ॥

ಪ್ರಾತಃಕಾಲೋದಿತಂ ಕರ್ಮ ಸಮಾಪ್ಯ ಹರಿವಲ್ಲಭಾಂ ।
ಪೂಜಯೇದ್ಭಕ್ತಿತೋ ವಿಪ್ರ ತುಳಸೀಂ ಪಾಪನಾಶಿನೀಂ ॥ ೧೩ ॥

---

೯. ಆಮೇಲೆ ದಾನಮಾಡಬೇಕು. ಅನಂತರ ತಿಲಕವನ್ನು ಹಚ್ಚಿಕೊಳ್ಳಬೇಕು. ಹಣೆಗಿಟ್ಟುಕೊಳ್ಳದೆ ನಿತ್ಯಕರ್ಮವನ್ನು ಮಾಡಿದರೆ ಆ ಕೆಲಸವೆಲ್ಲವೂ ಫಲವಿಲ್ಲದೆ ಹೋಗುತ್ತದೆ.

೧೦. ಊರ್ಧ್ವಪುಂಡ್ರವಿಲ್ಲದವನ ದರ್ಶನವನ್ನು ಮಾಡಬಾರದು. ಒಂದುವೇಳೆ ಮಾಡಿದಗೆ ಸೂರ್ಯದರ್ಶನಮಾಡಿದರೆ ಶುದ್ಧನಾಗುವನು.

೧೧. ಯಾವನ ಹಣೆಯಲ್ಲಿ ಊರ್ಧ್ವಪುಂಡ್ರವು ಕಾಣುತ್ತದೆಯೋ ಅವನು ಚಂಡಾಲನಾದರೂ ಪೂಜಾರ್ಹನು. ಸಂಶಯವಿಲ್ಲ.

೧೨. ಒಂದೊಂದಕ್ಕೆ ಜಾಗಬಿಡದಂತೆ ಊರ್ಧ್ವಪುಂಡ್ರವನ್ನಿಟ್ಟುಕೊಂಡರೆ ಅವರ ಹಣೆಯಲ್ಲಿರುವುದು ನಾಯಿಯ ಹೆಜ್ಜೆಗಳೆಂದರಿಯಬೇಕು.

೧೩. ಪ್ರಾತಃಕಾಲದ ಕರ್ಮಗಳನ್ನು ಮುಗಿಸಿಕೊಂಡು ಭಕ್ತಿಯಿಂದ ಪಾಪನಾಶಕಳಾದ ತುಳಸಿಯನ್ನು ಪೂಜಿಸಬೇಕು.

**ಪೌರಾಣೀಂ ತು ಕಥಾಂ ಶ್ರುತ್ವಾ ಶ್ರೀಹರೇಃ ಸ್ಥಿರಮಾನಸಃ ।**
**ತತೋ ವಿಪ್ರಂ ವ್ರತೀ ಭಕ್ತ್ಯಾ ಪೂಜಯೇತ್ತಂ ಯಥಾವಿಧಿ ॥ ೧೪ ॥**

**ಪರಾಸನಂ ಪರಾನ್ನಂ ಚ ಪರಶಯ್ಯಾಂ ಪರಾಂಗನಾಂ ।**
**ಸರ್ವದಾ ವರ್ಜಯೇದ್ವಿಪ್ರ ಕಾರ್ತಿಕೇ ಚ ವಿಶೇಷತಃ ॥ ೧೫ ॥**

**ಸೌವೀರಕಂ ತಥಾ ಮಾಷಾನಾಮಿಷಂ ಚ ತಥಾ ಮಧು ।**
**ರಾಜಮಾಷಾದಿಕಂ ನಿತ್ಯಂ ವರ್ಜಯೇತ್ಕಾರ್ತಿಕೇ ವ್ರತೀ ॥ ೧೬ ॥**

**ಜಂಬೀರಮಾಮಿಷಂ ಚೂರ್ಣಮನ್ನಂ ಪರ್ಯುಷಿತಂ ದ್ವಿಜ ।**
**ಧಾನ್ಯೇ ಮಸೂರಿಕಾ ಪ್ರೋಕ್ತಾ ಗವಾಂ ದುಗ್ಧಮನಾಮಿಷಂ ॥ ೧೭ ॥**

**ಲವಣಂ ಭೂಮಿಜಂ ವಿಪ್ರ ಪ್ರಾಣ್ಯಂಗಮಾಮಿಷಂ ಖಲು ।**
**ದ್ವಿಜಕ್ರೀತಾ ರಸಾಸ್ಸರ್ವೇ ಜಲಂ ಚಾಲ್ಪಸರಃಸ್ಥಿತಂ ॥ ೧೮ ॥**

---

೧೪. ಆಮೇಲೆ ಪುರಾಣದ ಕಥೆಯನ್ನು ಕೇಳಿ, ಹರಿಯಲ್ಲಿ ಮನಸ್ಸಿಟ್ಟು ಬ್ರಾಹ್ಮಣನನ್ನು ಭಕ್ತಿಯಿಂದ ಪೂಜಿಸಬೇಕು.

೧೫. ಪರರ ಪೀಠ, ಪರಾನ್ನ, ಪರರ ಹಾಸಿಗೆ, ಪರರ ಹೆಂಡಿರು, ಇವನ್ನು ಯಾವಾಗಲೂ ಬಿಡಬೇಕು. ಕಾರ್ತಿಕಮಾಸದಲ್ಲಂತೂ ಮುಟ್ಟಲೇಬಾರದು.

೧೬. ಜೋಳ, ಉದ್ದು, ಮಾಂಸ, ಜೇನು, ಹೆಂಡ, ಹಲಸಂದೆ, ಇವನ್ನು ಕಾರ್ತಿಕಮಾಸದಲ್ಲಿ ಬಿಡಬೇಕು.

೧೭. ನಿಂಬೆಹುಳಿ, ರುಚಿಯಾದ ಅನ್ನದ ಪುಡಿಗಳು, ಹಳಸಿದನ್ನ, ಇವನ್ನು ಬಿಡಬೇಕು. ಧಾನ್ಯಗಳಲ್ಲಿ ಶಾಕಧಾನ್ಯಗಳನ್ನು ತಿನ್ನಬಹುದು. ಹಸುಗಳ ಹಾಲು ಮಾಂಸವಲ್ಲವು.

೧೮. ಭೂಮಿಯಲ್ಲಿ ಹುಟ್ಟಿದ ಲವಣವು, ಪ್ರಾಣಿಗಳಿಂದ ಬಂದ ಮಾಂಸ ಎಂದು ತಿಳಿ. ಬ್ರಾಹ್ಮಣನಿಂದ ಕೊಂಡುಕೊಂಡ ರಸಗಳೊಂದನ್ನೂ ತಿನ್ನಬಾರದು. ಸಣ್ಣ ಕೊಳದಲ್ಲಿದ್ದ ನೀರು ಅಶುದ್ಧ. ಉಪಯೋಗಿಸಬಾರದು.

ಬ್ರಹ್ಮಚರ್ಯಂ ತುರ್ಯಕಾಲೇ ಪತ್ರಾವಳ್ಯಾಂ ಚ ಭೋಜನಂ ।
ಕುರ್ಯಾದ್ವೈ ದ್ವಿಜಶಾರ್ದೂಲ ತೈಲಾಭ್ಯಂಗಂ ಚ ವರ್ಜಯೇತ್ ॥ ೧೯ ॥

ಛತ್ರಾಕಂ ನಾಳಿಕಂ ಹಿಂಗುಂ ಪಲಾಂಡುಂ ಪೂತಿಕಾದಳಂ ।
ಲಶುನಂ ಮೂಲಕಂ ಶಿಗ್ರುಂ ತಥೈವ ತುಂಬಿಕಾಫಲಂ ॥ ೨೦ ॥

ಕಪಿತ್ಥಂ ಚೈವ ವೃಂತಾಕಂ ಕೂಷ್ಮಾಂಡಂ ಕಾಂಸ್ಯಭೋಜನಂ ।
ದ್ವಿಪಾಚಿತಂ ಸೂತಕಾನ್ನಂ ಮತ್ಸ್ಯಂ ಶಯ್ಯಾಂ ರಜಸ್ವಲಾಂ ॥ ೨೧ ॥

ದ್ವಿಸ್ತ್ರಿಶ್ಚಾನ್ನಂ ಸ್ತ್ರಿಯಸ್ಸಂಗಂ ವರ್ಜಯೇದ್ವೈಷ್ಣವವ್ರತೀ ।
ಧಾತ್ರೀಫಲಂ ಗೃಹೀ ವಿಪ್ರ ರವೌ ತತ್ಸರ್ವದಾ ತ್ಯಜೇತ್ ॥ ೨೨ ॥

ಕೂಷ್ಮಾಂಡೇ ಧನಹಾನಿಸ್ಸ್ಯಾದ್ಬೃಹತ್ಯಾಂ ನ ಸ್ಮರೇದ್ಧರಿಂ ।
ಪಟೋಲೇ ತು ನ ವೃದ್ಧಿಸ್ಸ್ಯಾದ್ಬಲಹಾನಿಶ್ಚ ಮೂಲಕೇ ॥ ೨೩ ॥

ಕಲಂಕೀ ಜಾಯತೇ ಬಿಲ್ವೇ ತಿರ್ಯಗ್ಯೋನಿಶ್ಚ ನಿಂಬುಕೇ ।
ತಾಲೇ ಶರೀರನಾಶಸ್ಸ್ಯಾನ್ನಾರಿಕೇಳೇ ಚ ಮೂರ್ಖತಾ ॥ ೨೪ ॥

---

೧೯. ಬ್ರಹ್ಮಚರ್ಯವನ್ನಾಚರಿಸಬೇಕು. ಸಾಯಾಹ್ನದಲ್ಲಿ ಎಲೆಯಲ್ಲಿ ಊಟ ಮಾಡಬೇಕು. ಅಭ್ಯಂಜನಮಾಡಿಕೊಳ್ಳಬಾರದು.

೨೦-೨೧. ಅಣಬೆ, ಒಳಗೆ ಟೊಳ್ಳಿರುವ ಈರುಳ್ಳಿ, ಹೂವು ಮುಂತಾದುವು, ಪಡವಲ, ಹಿಂಗು, ಈರುಳ್ಳಿ, ಬಸಳೆ, ಬೆಳ್ಳುಳ್ಳಿ, ಮೂಲಂಗಿ, ನುಗ್ಗೆ, ಸೋರೇಕಾಯಿ, ಬದನೇಕಾಯಿ, ಬೇಲದಹಣ್ಣು, ಕುಂಬಳಕಾಯಿ, ಕಂಚಿನ ತಣಿಗೆಯಲ್ಲಿ ಊಟ, ಎರಡುಸಾರಿ ಬೇಯಿಸಿದ ಪದಾರ್ಥ, ಸೂತಕಾನ್ನ, ಮೀನು, ಮುಟ್ಟಾದ ಹೆಂಗಸು, ಎರಡು ಮೂರುಬಾರಿ ಊಟಮಾಡುವುದು, ಸ್ತ್ರೀಸಂಗ ಇವನ್ನು ವೈಷ್ಣವವ್ರತದಲ್ಲಿ ಬಿಡಬೇಕು.

೨೨-೨೩. ನೆಲ್ಲೀಕಾಯನ್ನು ಆದಿತ್ಯವಾರದಲ್ಲಿ ಯಾವಾಗಲೂ ಬಿಡಬೇಕು. ಕುಂಬಳಕಾಯನ್ನು ತಿಂದರೆ ಧನನಾಶವಾಗುತ್ತದೆ. ಬದನೇಕಾಯನ್ನು ತಿನ್ನುತ್ತಾ ಹರಿಯನ್ನು ಸ್ಮರಿಸಬಾರದು. ಪಡವಲಕಾಯಿಂದ ವೃದ್ಧಿಯಾಗುವುದಿಲ್ಲ. ಮೂಲಂಗಿ ತಿಂದರೆ ಬಲವು ಹೋಗುತ್ತದೆ.

೨೪. ಬಿಲ್ವದಲ್ಲಿ ಕಳಂಕಿಯೂ, ನಿಂಬೆಹಣ್ಣಿನಲ್ಲಿ ಕೀಳುಜಾತಿಯಲ್ಲಿ ಹುಟ್ಟುವಿಕೆಯೂ, ತಾಳೆಯಲ್ಲಿ ಶರೀರನಾಶವೂ, ತೆಂಗಿನಲ್ಲಿ ದಡ್ಡತನವೂ ಉಂಟಾಗುತ್ತವೆ.

**ತುಂಬೀ ಗೋಮಾಂಸತುಲ್ಯಾ ಸ್ಯಾದ್ಗೋವಧಂ ಸ್ಯಾತ್ಕಲಿಂದಕೇ ।**
**ಶಿಂಬೀ ಪಾಪಕರಾ ಪ್ರೋಕ್ತಾ ಪೂತಿಕಾ ಬ್ರಹ್ಮಘಾತಿಕಾ ॥ ೨೫ ॥**

**ವೃಂತಾಕ್ಯಾಂ ಸುತನಾಶಃ ಸ್ಯಾಚ್ಚಿರರೋಗೀ ಚ ಮಾಷಕೇ ।**
**ಮಾಂಸೇ ಚ ಬಹುಪಾಪಂ ಸ್ಯಾದ್ವರ್ಜಯೇತ್ಪ್ರತಿಪದಾದಿಷು ॥ ೨೬ ॥**

**ಯತ್ಕಿಂಚಿದ್ವರ್ಜಯೇದ್ದ್ರವ್ಯಂ ಶ್ರೀಹರೇಃ ಪ್ರೀತಯೇ ದ್ವಿಜ ।**
**ತತ್ಪುನರ್ಭೂಸುರೇ ದತ್ವಾ ವ್ರತಾಂತೇ ತಸ್ಯ ಭೋಜನಂ ॥ ೨೭ ॥**

**ಕಾರ್ತಿಕವ್ರತಿನಂ ವಿಪ್ರ ಯಥೋಕ್ತಕಾರಿಣಂ ನರಂ ।**
**ಯಮದೂತಾಃ ಪಲಾಯಂತೇ ಸಿಂಹಂ ದೃಷ್ಟ್ವಾ ಯಥಾ ದ್ವಿಜಾಃ ॥ ೨೮ ॥**

**ಶ್ರೇಷ್ಠಂ ವಿಷ್ಣುವ್ರತಂ ವಿಪ್ರ ತತ್ತುಲ್ಯಾ ನ ಶತಂ ಮಖಾಃ ।**
**ಕೃತ್ವಾ ವ್ರತಂ ವ್ರಜೇತ್ಸ್ವರ್ಗಂ ವೈಕುಂಠಂ ಕಾರ್ತಿಕವ್ರತೀ ॥ ೨೯ ॥**

**ಯತ್ಕಿಂಚಿದ್ದುಷ್ಕೃತಂ ವಿಪ್ರ ಮನೋವಾಕ್ಕಾಯಕರ್ಮಜಂ ।**
**ದೃಷ್ಟ್ವಾ ತು ವಿಲಯಂ ಯಾತಿ ಕಾರ್ತಿಕವ್ರತಿನಂ ಕ್ಷಣಾತ್ ॥ ೩೦ ॥**

---

೨೫. ಸೋರೆಯಕಾಯನ್ನು ತಿಂದರೆ ಗೋಮಾಂಸವನ್ನು ತಿಂದಂತೆಯೂ, ಕಲ್ಲಂಗಡಿಯನ್ನು ತಿಂದರೆ ಗೋಹತ್ಯೆಮಾಡಿದಂತೆಯೂ, ಸೂರಣಗೆಡ್ಡೆಯನ್ನು ತಿಂದರೆ ಪಾಪ ಮಾಡಿದಂತೆಯೂ, ಬಸಳೆಯನ್ನು ತಿಂದರೆ ಬ್ರಹ್ಮಹತ್ಯೆಯನ್ನು ಮಾಡಿದಂತೆಯೂ ಆಗುತ್ತದೆ.

೨೬. ಸೌತೆಯಲ್ಲಿ ಮಕ್ಕಳ ನಾಶ, ಉದ್ದಿನಲ್ಲಿ ಚಿರರೋಗಿ, ಮಾಂಸದಲ್ಲಿ ಬಹು ಪಾಪಗಳು ಉಂಟಾಗುತ್ತವೆ. ಆದ್ದರಿಂದ ಇವನ್ನು ಬಿಡಬೇಕು.

೨೭. ಯಾವುದಾದರೂ ಒಂದು ಪದಾರ್ಥವನ್ನು ವ್ರತವಲ್ಲಿ ಕೊನೆಯವರೆಗೂ ಬಿಟ್ಟಿದ್ದು ವ್ರತದ ಕೊನೆಯಲ್ಲಿ ಬ್ರಾಹ್ಮಣನಿಗೆ ಆ ಪದಾರ್ಥವನ್ನು ದಾನಮಾಡಿ ಆಮೇಲೆ ತಿನ್ನಬೇಕು. ಹಾಗಾದರೆ ಹರಿಪ್ರೀತಿಯಾಗುತ್ತದೆ.

೨೮. ಶಾಸ್ತ್ರೋಕ್ತದಂತೆ ಕಾರ್ತಿಕವ್ರತಮಾಡುವವನನ್ನು ನೋಡಿದರೆ ಯಮ ದೂತರು, ಸಿಂಹದ ಭಯದಿಂದ ಆನೆಗಳು ಓಡುವಂತೆ ಓಡುತ್ತಾರೆ.

೨೯. ವಿಷ್ಣುವ್ರತವು ಶ್ರೇಷ್ಠವಾದುದು. ನೂರುಯಜ್ಞಗಳೂ ಅದರ ಸಮ ವಾಗುವುದಿಲ್ಲ. ಕಾರ್ತೀಕದಲ್ಲಿ ವಿಷ್ಣುವ್ರತಮಾಡಿದರೆ ವೈಕುಂಠವನ್ನು ಹೊಂದು ತ್ತಾನೆ.

೩೦. ಮನೋವಾಕ್ಕಾಯಗಳಿಂದ ಮಾಡಿದ ಯಾವುದಾದರೂ ಪಾಪವಿದ್ದರೆ ಕಾರ್ತಿಕವ್ರತಮಾಡುವವನನ್ನು ನೋಡಿ ನಾಶಹೊಂದುತ್ತದೆ.

ಕಾರ್ತಿಕವ್ರತಿನಃ ಪುಣ್ಯಂ ಬ್ರಹ್ಮಾ ಚೈವ ಚತುರ್ಮುಖಃ ।
ನ ಸಮರ್ಥೋ ಭವೇದ್ವಕ್ತುಂ ಯಥೋಕ್ತವ್ರತಕಾರಿಣಃ ॥ ೩೦ ॥

ಯತ್ಕೃತ್ವಾ ಕಲುಷಂ ಸರ್ವಂ ವ್ರಜೇದ್ವಿಪ್ರ ದಿಶೋ ದಶ ।
ಕ್ವ ಗಚ್ಛಾಮಿ ಕ್ವ ತಿಷ್ಠಾಮಿ ಕಾರ್ತಿಕವ್ರತಿನೋ ಭಯಾತ್ ॥ ೩೨ ॥

ಪೌರ್ಣಮಾಸ್ಯಾಂ ಯಥಾಶಕ್ತಿ ಚಾನ್ನವಸ್ತ್ರಾದಿಕಂ ದ್ವಿಜ ।
ದದ್ಯಾದ್ವೈ ಶ್ರೀಹರೇಃ ಪ್ರೀತ್ಯೈ ಬ್ರಾಹ್ಮಣಾನಪಿ ಭೋಜಯೇತ್ ॥ ೩೩ ॥

ರಾತ್ರೌ ಜಾಗರಣಂ ಕುರ್ಯಾನ್ನೃತ್ಯಗೀತಾದಿಭಿರ್ವ್ರತೀ ।
ಯ ಇದಂ ಶೃಣುಯಾದ್ಭಕ್ತ್ಯಾ ತಸ್ಯ ಪಾಪಂ ಪ್ರಣಶ್ಯತಿ ॥ ೩೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕ
ಸಂವಾದೇ ಕಾರ್ತಿಕಮಾಹಾತ್ಮ್ಯ ಏಕವಿಂಶೋಽಧ್ಯಾಯಃ

---

೩೧. ಯಥೋಕ್ತವಾಗಿ ಕಾರ್ತಿಕವ್ರತಮಾಡುವವನ ಪುಣ್ಯವನ್ನು ಬ್ರಹ್ಮನು ಕೂಡ ಹೇಳಲಸಮರ್ಥನು.

೩೨. ಕಾರ್ತಿಕವ್ರತವುಳ್ಳವನನ್ನು ನೋಡಿದರೆ ಪಾಪವೆಲ್ಲವೂ ಎಲ್ಲಿಹೋಗಲಿ ? ಎಲ್ಲಿ ಇರಲಿ ? ಎಂದು ಹತ್ತುದಿಕ್ಕುಗಳಿಗೂ ಓಡುತ್ತವೆ

೩೩. ಹರಿಪ್ರೀತಿಗೋಸ್ಕರ ಪೂರ್ಣಮಾಸಿಯದಿನ ಅನ್ನವಸ್ತ್ರಗಳನ್ನು ಬ್ರಾಹ್ಮಣನಿಗೆ ಕೊಟ್ಟು ಸಂತರ್ಪಣೆ ಮಾಡಿಸಬೇಕು.

೩೪. ರಾತ್ರಿಯಲ್ಲಿ ನೃತ್ಯಗೀತಾದಿಗಳಿಂದ ಹರಿಯನ್ನು ಧ್ಯಾನಿಸುತ್ತಾ ಜಾಗರಣೆ ಮಾಡಬೇಕು. ಇದನ್ನು ಭಕ್ತಿಯಿಂದ ಕೇಳಿದರೆ ಅವನ ಪಾಪವು ನಾಶವಾಗುತ್ತದೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದ ಸೂತಶೌನಕಸಂವಾದದ
ಕಾರ್ತಿಕಮಹಿಮೆಯಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ದ್ವಾವಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಮಾಹಾತ್ಮ್ಯಂ ಬ್ರೂಹಿ ಸರ್ವಜ್ಞ ಶೃಣ್ವತಾಂ ಪಾಪನಾಶನಂ ।
ಸರ್ವಪ್ರಾಣಿಹಿತಾರ್ಥಾಯ ತುಲಸ್ಯಾ ಅನುಕಂಪಯಾ ॥ ೧ ॥

॥ ಸೂತ ಉವಾಚ ॥

ತುಲಸ್ಯಾಃ ಪರಿಸರೇ ಯಸ್ಯ ಕಾನನಂ ತಿಷ್ಠತಿ ದ್ವಿಜ ।
ಗೃಹಸ್ಯ ತೀರ್ಥರೂಪತ್ವಾನ್ನಾಯಾಂತಿ ಯಮಕಿಂಕರಾಃ ॥ ೨ ॥

ತುಲಸ್ಯಾಃ ಕಾನನಂ ವಿಪ್ರ ಸರ್ವಪಾಪಹರಂ ಶುಭಂ ।
ರೂಪಯಂತಿ ನರಾಃ ಶ್ರೇಷ್ಠಾಸ್ತೇ ನ ಪಶ್ಯಂತಿ ಭಾಸ್ಕರಿಂ ॥ ೩ ॥

---

## ಇಪ್ಪತ್ತೆರಡನೆಯ ಅಧ್ಯಾಯವು

೧. ಶೌನಕನು ಕೇಳಿದನು :—ಕೇಳುವವರ ಪಾಪನಾಶಕವಾದ ತುಳಸಿಯ ಮಹಿಮೆಯನ್ನು ಸರ್ವಪ್ರಾಣಿಹಿತಗಳಿಗೋಸ್ಕರ ಹೇಳು.

೨. ಸೂತನು ಹೇಳಿದನು :—ಮನೆಯ ಸುತ್ತಲೂ ತುಳಸಿಯ ವನವಿದ್ದರೆ ಆ ಮನೆಯು ತೀರ್ಥವೆಂದು ತಿಳಿದು ಯಮಕಿಂಕರರು ಹತ್ತಿರ ಬರುವುದಿಲ್ಲ.

೩. ತುಳಸಿಯ ಕಾನನವು ಪಾಪಹರವಾದುದು. ಯಾರು ಅದನ್ನು ಬೆಳೆಸುತ್ತಾರೋ ಅವರು ಯಮದರ್ಶನ ಮಾಡುವುದಿಲ್ಲ.

ರೋಪಣಂ ಪಾಲನಂ ಸೇವಾಂ ದರ್ಶನಂ ಸ್ಪರ್ಶನಂ ತು ಯಃ ।
ಕುರ್ಯಾತ್ತಸ್ಯ ಪ್ರಣಷ್ಟಂ ಸ್ಯಾತ್ಸರ್ವಪಾಪಂ ದ್ವಿಜೋತ್ತಮ ॥ ೪ ॥

ಕೋಮಲೈಸ್ತುಲಸೀಪತ್ರೈರರ್ಚಯಂತಿ ಹರಿಂ ತು ಯಃ ।
ಕಾಲಸ್ಯ ಸದನಂ ವಿಪ್ರ ತೇ ನ ಯಾಂತಿ ಮಹಾಶಯಾಃ ॥ ೫ ॥

ಗಂಗಾದ್ಯಾಸ್ಸರಿತಸ್ಸರ್ವಾ ಬ್ರಹ್ಮವಿಷ್ಣುಮಹೇಶ್ವರಾಃ ।
ದೇವೈಸ್ತೀರ್ಥೈಃ ಪುಷ್ಕರಾದ್ಯೈಸ್ತಿಷ್ಠಂತಿ ತುಲಸೀವನೇ ॥ ೬ ॥

ಯೋ ಯುಕ್ತಸ್ತುಲಸೀಪತ್ರೈಃ ಪಾಪೀ ಪ್ರಾಣಾನ್ವಿಮುಂಚತಿ ।
ವಿಷ್ಣೋರ್ನಿಕೇತನಂ ಯಾತಿ ಸತ್ಯಮೇತನ್ಮಯೋದಿತಂ ॥ ೭ ॥

ತುಲಸೀಮೃತ್ತಿಕಾಲಿಪ್ತೋ ಯುಕ್ತಃ ಪಾಪಶತೈರಪಿ ।
ವಿಮುಂಚತಿ ನರಃ ಪ್ರಾಣಾನ್ ಸ ಯಾತಿ ಹರಿಮಂದಿರಂ ॥ ೮ ॥

ಯೋ ನರೋ ಧಾರಯೇದ್ವಿಪ್ರ ತುಲಸೀಕಾಷ್ಠಚಂದನಂ ।
ತಸ್ಯಾಂಗಂ ನ ಸ್ಪೃಶೇತ್ಪಾಪಂ ಸ ಯಾತಿ ಪರಮಂ ಪದಂ ॥ ೯ ॥

---

೪. ತುಳಸಿಯನ್ನು ಎಬ್ಬಿಸುವುದು, ಕಾಪಾಡುವುದು, ಸೇವೆಮಾಡುವುದು, ದರ್ಶನಸ್ಪರ್ಶನಗಳನ್ನು ಮಾಡುವವರಿಗೆ ಸರ್ವಪಾಪಗಳು ಹೋಗುತ್ತವೆ.

೫. ಕೋಮಲವಾದ ತುಳಸೀದಳಗಳಿಂದ ಹರಿಯನ್ನು ಪೂಜಿಸಿದರೆ ಯಮ ದರ್ಶನವೇ ಅವರಿಗಾಗುವುದಿಲ್ಲ.

೬. ಗಂಗಾದಿತೀರ್ಥಗಳೂ, ತ್ರಿಮೂರ್ತಿಗಳೂ, ದೇವತೆಗಳೊಡನೆಯೂ, ಪುಷ್ಕರಾದಿ ತೀರ್ಥಗಳೊಡನೆಯೂ ತುಳಸೀದಳದಲ್ಲಿರುತ್ತಾರೆ.

೭. ತುಳಸೀದಳದಿಂದ ಕೂಡಿದ್ದು ಪ್ರಾಣಗಳನ್ನು ಬಿಟ್ಟರೆ ಅವನು ವೈಕುಂಠವನ್ನು ಹೊಂದುತ್ತಾನೆ. ಇದು ಸತ್ಯವು.

೮. ತುಳಸೀಮೃತ್ತಿಕೆಯನ್ನು ಹಚ್ಚಿಕೊಂಡವನು ಪಾಪಿಯಾಗಿದ್ದರೂ ಅವನ ಪಾಪವೆಲ್ಲವೂ ಹೋಗಿ ಹರಿಮಂದಿರವನ್ನು ಹೊಂದುತ್ತಾನೆ.

೯. ಯಾವನು ತುಳಸಿಕಡ್ಡಿಯ ಚಂದನವನ್ನು ಧರಿಸುತ್ತಾನೋ ಅವನನ್ನು ಪಾಪವು ಹೊಂದುವುದಿಲ್ಲ. ಪರಮಗತಿಯನ್ನು ಹೊಂದುತ್ತಾನೆ.

ತುಲಸೀಕಾಷ್ಠಮಾಲಾಂ ತು ಕಂಠಸ್ಥಾಂ ವಹತೇ ತು ಯಃ ।
ಅಪ್ಯಶೌಚೋಽಪ್ಯನಾಚಾರೋ ಭಕ್ತ್ಯಾ ಯಾತಿ ಹರೇರ್ಗೃಹಂ　　॥ ೧೦ ॥

ಧಾತ್ರೀಫಲಕೃತಾ ಮಾಲಾ ತುಲಸೀಕಾಷ್ಠಸಂಭವಾ ।
ದೃಶ್ಯತೇ ಯಸ್ಯ ದೇಹೇ ತು ಸ ವೈ ಭಾಗವತೋ ನರಃ　　॥ ೧೧ ॥

ತುಲಸೀದಳಜಾಂ ಮಾಲಾಂ ಕಂಠಸ್ಥಾಂ ವಹತೇ ತು ಯಃ ।
ವಿಷ್ಣೋಚ್ಛಿಷ್ಟಾಂ ವಿಶೇಷೇಣ ಸ ನಮಸ್ಯೋ ದಿವೌಕಸಾಂ　　॥ ೧೨ ॥

ಯಃ ಪುನಸ್ತುಲಸೀಮಾಲಾಂ ಕಂಠೇ ಕೃತ್ವಾ ಜನಾರ್ದನಂ ।
ಪೂಜಯೇತ್ಪುಣ್ಯಮಾಪ್ನೋತಿ ಪ್ರತಿಪುಷ್ಪಂ ಗವಾಯುತಂ　　॥ ೧೩ ॥

ಧಾರಯಂತಿ ನ ಯೇ ಮಾಲಾಂ ಹೈತುಕಾಃ ಪಾಪಬುದ್ಧಯಃ ।
ನರಕಾನ್ನ ನಿವರ್ತಂತೇ ದಗ್ಧಾಃ ಕೋಪಾಗ್ನಿನಾ ಹರೇಃ　　॥ ೧೪ ॥

ನ ಜಹ್ಯಾತ್ತುಲಸೀಮಾಲಾಂ ಧಾತ್ರೀಮಾಲಾಂ ವಿಶೇಷತಃ ।
ಮಹಾಪಾತಕಸಂಹರ್ತ್ರೀಂ ಧರ್ಮಕಾಮಾರ್ಥದಾಯಿನೀಂ　　॥ ೧೫ ॥

---

೧೦. ತುಳಸೀಕಡ್ಡಿಯ ಮಾಲೆಯನ್ನು ಕತ್ತಿನಲ್ಲಿ ಹಾಕಿಕೊಂಡಿದ್ದರೆ ಅವನು ಅನೇಕಬಗೆಯಲ್ಲಿ ಅನಾಚಾರಿಯಾದವರೂ ಹರಿಯಮಂದಿರವನ್ನು ಹೊಂದುತ್ತಾನೆ.

೧೧. ನೆಲ್ಲಿ ಹಣ್ಣಿನಮಾಲೆ, ತುಳಸೀಕಾಷ್ಠದ ಮಾಲೆ ಯಾವನ ಕತ್ತಿನಲ್ಲಿ ರುತ್ತವೆಯೋ ಅವನು ಭಗವದ್ಭಕ್ತನೆಂದು ತಿಳಿ.

೧೨. ವಿಷ್ಣುವಿಗೆ ಸಮರ್ಪಿಸಿದ್ದ ತುಳಸೀದಳದ ಮಾಲೆಯನ್ನು ಹಾಕಿಕೊಂಡಿ ದ್ದರೆ ಅವನು ದೇವತೆಗಳಿಗೂ ವಂದ್ಯನು.

೧೩. ತುಳಸೀಮಾಲೆಯನ್ನು ಕತ್ತಿನಲ್ಲಿ ಹಾಕಿಕೊಂಡು ಜನಾರ್ದನನನ್ನು ಪೂಜಿಸಿದರೆ ಒಂದೊಂದು ಪುಷ್ಪಕ್ಕೆ ಹತ್ತುಸಾವಿರ ಗೋದಾನದ ಫಲವು ಬರುತ್ತದೆ.

೧೪. ಯಾರು ಕಾರಣವನ್ನು ಕೇಳುತ್ತಾ, ನಾಸ್ತಿಕರಾಗಿ ಹೇತುವಾದಿಗಳಾಗಿ ಮಾಲೆಯನ್ನು ಧರಿಸುವುದಿಲ್ಲವೋ ಅವರು ವಿಷ್ಣುಕೋಪಾಗ್ನಿಯಿಂದ ದಗ್ಧರಾಗಿ ನರಕ ಭಾಗಿಗಳಾಗುತ್ತಾರೆ.

೧೫. ಧಾತ್ರೀಮಾಲೆ, ತುಳಸೀಮಾಲೆಗಳು, ಪಾಪನಾಶಕಗಳು, ಧರ್ಮಕಾಮಾ ರ್ಥಗಳನ್ನು ಕೊಡತಕ್ಕವು. ಅವನ್ನು ಬಿಡಬಾರದು.

ಸ್ಪೃಶೇಚ್ಛ ಯಾನಿ ಲೋಮಾನಿ ಧಾತ್ರೀಮಾಲಾ ಕಲೌ ನೃಣಾಂ ।
ತಾವದ್ವರ್ಷಸಹಸ್ರಾಣಿ ವಸತೇ ಕೇಶವಾಲಯೇ ॥ ೧೬ ॥

ನಿವೇದ್ಯ ಕೇಶವೇ ಮಾಲಾಂ ತುಲಸೀಕಾಷ್ಠಸಂಭವಾಂ ।
ವಹತೇ ಯೋ ನರೋ ಭಕ್ತ್ಯಾ ತಸ್ಯ ವೈ ನಾಸ್ತಿ ಪಾತಕಂ ॥ ೧೭ ॥

ತುಲಸೀಕಾಷ್ಠಮಾಲಾಂ ತು ಪ್ರೇತರಾಜಸ್ಯ ದೂತಕಾಃ ।
ದೃಷ್ಟ್ವಾ ನಶ್ಯಂತಿ ದೂರೇಣ ವಾತೋದ್ಧೂತಂ ಯಥಾ ದಳಂ ॥ ೧೮ ॥

ತುಲಸ್ಯಾ ವಿಪಿನೇ ಧಾತ್ರ್ಯಾಶ್ಛಾಯಾಸು ಯೋ ನರೋತ್ತಮಃ ।
ಪಿಂಡಂ ದದಾತಿ ಪಿತರೋ ಮುಕ್ತಿಂ ಯಾಂತಿ ದ್ವಿಜೋತ್ತಮ ॥ ೧೯ ॥

ಪಾಣೌ ಮೂರ್ಧ್ನಿ ಗಳೇ ಚೈವ ಕರ್ಣಯೋಶ್ಚ ಮುಖೇ ದ್ವಿಜ ।
ಧಾತ್ರೀಫಲಂ ಯಸ್ತು ಧತ್ತೇ ಸ ವಿಜ್ಞೇಯೋ ಹರಿಃ ಸ್ವಯಂ ॥ ೨೦ ॥

ಧಾತ್ರೀಪತ್ರೈಃ ಫಲೈರ್ವಿಪ್ರ ಶ್ರೀಹರಿಂ ಚಾರ್ಚಯೇದ್ದ್ವಿಜ ।
ಕೋಟಿಜನ್ಮಾರ್ಜಿತಂ ಪಾಪಂ ಪೂಜಯಾ ನಶ್ಯತಿ ಸಕೃತ್ ॥ ೨೧ ॥

---

೧೬. ಧಾತ್ರಿಮಾಲೆಯು ಎಷ್ಟು ಲೋಮಗಳನ್ನು ಮುಟ್ಟುತ್ತದೆಯೋ, ಅಷ್ಟು ಸಾವಿರ ವರ್ಷಗಳು ಕೇಶವನ ಮಂದಿರದಲ್ಲಿರುತ್ತಾನೆ.

೧೭. ತುಳಸೀಮಾಲೆಯನ್ನು ದೇವರಿಗೆ ಸಮರ್ಪಿಸಿ ಅನಂತರ ಅದನ್ನು ಭಕ್ತಿಯಿಂದ ಧರಿಸಿದರೆ ಅದು ಪಾಪಹರವು.

೧೮. ತುಳಸೀಕಾಷ್ಠಮಾಲೆಯನ್ನು ಯಮನ ದೂತರು ನೋಡಿ ದೂರದಿಂದಲೇ ಓಡುತ್ತಾರೆ.

೧೯. ತುಳಸೀಗಿಡದ ನೆರಳಿನಲ್ಲಿ ಪಿಂಡದಾನ ಮಾಡಿದರೆ ಪಿತೃಗಳು ತೃಪ್ತರಾಗಿ ಮುಕ್ತಿಯನ್ನು ಹೊಂದುತ್ತಾರೆ.

೨೦. ಕೈ, ತಲೆ, ಕತ್ತು, ಕಿವಿ, ಮುಖಗಳಲ್ಲಿ ನೆಲ್ಲೀಕಾಯನ್ನು ಧರಿಸಿದರೆ ಅವನೇ ಸಾಕ್ಷಾತ್ ಹರಿಯೆಂದು ತಿಳಿಯಬೇಕು.

೨೧. ಧಾತ್ರಿಕಾಯಿ, ಎಲೆಗಳಿಂದ ಹರಿಯನ್ನು ಪೂಜಿಸಿದರೆ ಕೋಟಿ ಜನ್ಮಗಳಿಂದ ಮಾಡಿದ ಪಾಪವು ನಾಶವಾಗುತ್ತದೆ.

ಯಜ್ಞಾ ದೇವಾಶ್ಚ ಮುನಯಸ್ತೀರ್ಥಾನಿ ಕಾರ್ತಿಕೇ ದ್ವಿಜ ।
ಧಾತ್ರೀವ್ರತಂ ಸಮಾಶ್ರಿತ್ಯ ತಿಷ್ಠಂತಿ ಕಾರ್ತಿಕೇ ಸದಾ ॥ ೨೨ ॥

ಧಾತ್ರೀಪತ್ರಂ ಕಾರ್ತಿಕೇ ಚ ದ್ವಾದಶ್ಯಾಂ ತುಲಸೀದಳಂ ।
ಚಿನೋತಿ ಯೋ ನರೋ ಗಚ್ಛೇನ್ನಿರಯಂ ಯಾತನಾಮಯಂ ॥ ೨೩ ॥

ಧಾತ್ರೀಛಾಯಾಸು ಯೋ ವಿಪ್ರ ಚಾನ್ನಂ ಭುನಕ್ತಿ ಕಾರ್ತಿಕೇ ।
ಅನ್ನಸಂಸರ್ಗಜಂ ಪಾಪಮಾವರ್ಷಂ ತಸ್ಯ ನಶ್ಯತಿ ॥ ೨೪ ॥

ತುಲಸೀವನಮಧ್ಯೇ ಚ ಧಾತ್ರೀಮೂಲೇ ಚ ಕಾರ್ತಿಕೇ ।
ಕುರ್ಯಾದ್ಧರ್ಯರ್ಚನಂ ವಿಪ್ರ ವೈಕುಂಠಂ ಯಾತಿ ಸ ಧ್ರುವಂ ॥ ೨೫ ॥

ತುಲಸೀಮೂಲದೇಶೇಽಪಿ ಸ್ಥಿತಂ ವಾರಿ ದ್ವಿಜೋತ್ತಮ ।
ಗೃಹ್ಣಾತಿ ಮಸ್ತಕೇ ಭಕ್ತ್ಯಾ ಪಾಪೀ ಯಾತಿ ಹರೇರ್ಗೃಹಂ ॥ ೨೬ ॥

ತುಲಸೀಪತ್ರಗತಂ ಯಸ್ತ್ವೋಯಂ ಶಿರಸಾ ವಹೇತ್ ।
ಸರ್ವತೀರ್ಥೇಷು ಸ ಸ್ನಾತಶ್ಚಾಂತೇ ಯಾತಿ ಹರೇರ್ಗೃಹಂ ॥ ೨೭ ॥

---

೨೨. ಯಜ್ಞ, ದೇವತೆ, ಋಷಿಗಳು, ತೀರ್ಥ ಇವೆಲ್ಲವೂ ಕಾರ್ತಿಕ ಮಾಸದಲ್ಲಿ ಧಾತ್ರೀ ವ್ರತವನ್ನು ಆಶ್ರಯಿಸಿಕೊಂಡಿರುತ್ತವೆ.

೨೩. ಕಾರ್ತಿಕದಲ್ಲಿ ನೆಲ್ಲಿಯೆಲೆಯನ್ನೂ, ದ್ವಾದಶಿಯಲ್ಲಿ ತುಳಸೀದಳವನ್ನು ಕುಯ್ಯಬಾರದು. ಅವನು ನರಕಭಾಗಿಯಾಗುತ್ತಾನೆ.

೨೪. ನೆಲ್ಲಿಯ ನೆರಳಿನಲ್ಲಿ ಊಟಮಾಡಿದರೆ ಆ ವರ್ಷಪರ್ಯಂತರವೂ ಮಾಡಿರುವ ಅನ್ನಸಂಬಂಧವಾದ ಪಾಪವೆಲ್ಲವೂ ನಾಶವಾಗುತ್ತದೆ.

೨೫. ತುಳಸಿಯ ವನದ ಮಧ್ಯದಲ್ಲಿಯೂ, ನೆಲ್ಲಿಮರದ ಬುಡದಲ್ಲಿಯೂ ಕಾರ್ತಿಕ ಮಾಸದಲ್ಲಿ ಹರಿಯನ್ನು ಅರ್ಚಿಸಿದರೆ ವೈಕುಂಠವನ್ನು ಹೊಂದುತ್ತಾನೆ. ನಿಶ್ಚಯವು.

೨೬. ತುಳಸಿಯ ಬುಡದಲ್ಲಿರುವ ನೀರನ್ನು ಭಕ್ತಿಯಿಂದ ತಲೆಗೆ ಪ್ರೋಕ್ಷಿಸಿಕೊಂಡರೆ ಪಾಪಗಳು ಹೋಗಿ ಹರಿಯ ಸಾನ್ನಿಧ್ಯವನ್ನು ಹೊಂದುತ್ತಾನೆ.

೨೭. ತುಳಸಿಯ ದಳದಿಂದ ಬಿದ್ದ ನೀರನ್ನು ಯಾವನು ತಲೆಯಲ್ಲಿ ಧರಿಸುತ್ತಾನೆಯೋ, ಅವನು ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದಂತಾಗಿ ಹರಿಯ ಮನೆಯನ್ನು ಹೊಂದುತ್ತಾನೆ.

ಪುರಾ ಕಶ್ಚಿದ್ದ್ವಿಜಶ್ರೇಷ್ಠೋ ದ್ವಾಪರೇಽಭೂನ್ಮಹಾಮುನೇ ।
ಸ್ನಾತ್ವೈಕದಾ ತುಲಸ್ಯೈ ಸ ವನಂ ದತ್ವಾ ಗೃಹಂ ಗತಃ ॥ ೨೮ ॥

ಆದಿತ್ಯೋ ವರ್ಚಸಾ ನಾಮ್ನಾ ಮಾರ್ತಂಡ ಇವ ಪುಣ್ಯತಃ ।
ತೃಷಾರ್ತೋ ಭಷಕಃ ಕಶ್ಚಿದಾಗತೋ ಬಹುಕಲ್ಮಷಃ ॥ ೨೯ ॥

ತುಲಸ್ಯಾ ಮೂಲತಸ್ತೋಯಂ ಪೀತ್ವಾ ಚಾಸೌ ಹತಾಂಹಸಃ ।
ತ್ವರಯಾಪ್ಯಾಗತೋ ವ್ಯಾಧೋ ನಾಮ್ನಾ ಯಶ್ಚಾಸಿಮರ್ದನಃ ॥ ೩೦ ॥

ಉವಾಚ ಭುಕ್ತಂ ಚಾನ್ನಂ ಚ ಭುಕ್ತ್ವಾ ಭಗ್ನಂ ಗತಃ ಕಿಮು ।
ಕೃತ್ವಾ ಮೇ ಪಾಕಭಾಂಡಸ್ಥಂ ಚಾಗತೋ ಹಿಂಸಕಸ್ಯ ತೇ ॥ ೩೧ ॥

ವಿವ್ಯಾಧ ತಂ ಗತಪ್ರಾಣಂ ನೇತುಂ ವೈ ಶಮನಾಜ್ಞಯಾ ।
ಆಗತಾಃ ಕಿಂಕರಾಃ ಕ್ರುದ್ಧಾಃ ಪಾಶಮುದ್ಗರಪಾಣಯಃ ॥ ೩೨ ॥

---

೨೮. ಪೂರ್ವದಲ್ಲಿ ದ್ವಾಪರಯುಗದಲ್ಲಿ ಒಬ್ಬ ರಾಜನಿದ್ದನು. ಅವನು ಸ್ನಾನ ಮಾಡಿ ಒಂದು ಸಾರಿ ಒಂದು ತುಳಸಿಗೆ ನೀರನ್ನು ಹಾಕಿ ಹೋದನು.

೨೯. ಆ ರಾಜನು ಸೂರ್ಯನಂತೆ ತೇಜಸ್ಸುಳ್ಳವನೂ, ಪುಣ್ಯಶಾಲಿಯಾಗಿಯೂ ಇದ್ದನು, ಅವನ ಹೆಸರು ಮಾರ್ತಂಡನೆಂದು. ಬಾಯಾರಿಕೆಯಿಂದ ಕೂಡಿದ ಒಂದು ಪಾಪಿಯಾದ ನಾಯಿಯು ಅಲ್ಲಿಗೆ ಬಂದಿತು.

೩೦. ಆ ನಾಯಿಯು ತುಳಸಿಯ ಮೂಲದಲ್ಲಿದ್ದ ಆ ನೀರನ್ನು ಕುಡಿಯಿತು. ಅದರಿಂದ ಅದರ ಪಾಪವು ಹೋಯಿತು. ಅಸಿಮರ್ದನನೆಂಬ ಒಬ್ಬ ಬೇಡನು ಅಲ್ಲಿಗೆ ವೇಗದಿಂದ ಬಂದನು.

೩೧. ಅವನ ಪಾತ್ರದಲ್ಲಿದ್ದ ಅನ್ನವನ್ನು ಆ ನಾಯಿಯು ತಿಂದು, ಅನಂತರ ಆ ಪಾತ್ರೆಯನ್ನು ಒಡೆದು ಬಂದುಬಿಟ್ಟಿದ್ದಿತು.

೩೨. ಆದ್ದರಿಂದ ಆ ನಾಯಿಯನ್ನು ಹೊಡೆದನು. ಅದು ಸತ್ತಿತು. ಯಮನ ಆಜ್ಞೆಯಿಂದ ಅದನ್ನು ಕೊಂಡೊಯ್ಯಲು ಪಾಶಾದಿಗಳನ್ನು ತೆಗೆದುಕೊಂಡು ಆತನ ಆಳುಗಳು ಬಂದರು.

ಬಧ್ವಾ ನೇತುಂ ಮನಶ್ಚಕ್ರುರಾಗತಾ ವಿಷ್ಣುಕಿಂಕರಾಃ ।
ತದಾ ಛಿತ್ವಾ ಚರ್ಮಪಾಶಂ ಸ್ಯಂದನೇ ತಂ ಮನೋಹರೇ ॥ ೩೩ ॥

ಆರೋಪಯಾಮಾಸುಃ ಪಪ್ರಚ್ಛುರ್ವಿನಯಾನ್ವಿತಾಃ ।
ತೇಽಪಿ ಪುಣ್ಯೇನ ಭೋಸ್ಸಂತಃ ಕೇನ ವೈ ನೀಯತೇಽಪ್ಯಸೌ ॥ ೩೪ ॥

ಊಚುಸ್ತೇಽಸೌ ಪುರಾ ರಾಜಾ ಪುಣ್ಯಂ ಬಹುತರಂ ಕೃತಂ ।
ಅಕರೋದ್ಧರಣಂ ಕಾಂಚಿತ್ಸುಂದರೀಂ ಚಾಂಗನಾಮಯಂ ॥ ೩೫ ॥

ಅನೇನ ಚಾಂಹಸಾ ರಾಜಾ ಗತೋ ವೈ ಶಮನಕ್ಷಯಂ ।
ತತ್ರ ಕ್ಲೇಶಸ್ತು ಯುಷ್ಮಾಭಿರ್ದತ್ತೋ ವೈ ಶಮನಾಜ್ಞಯಾ ॥ ೩೬ ॥

ತಾಮ್ರಮಯ್ಯಾ ಸ್ತ್ರಿಯಾ ಸಾರ್ಧಂ ಕ್ರೀಡಾಂ ಸುಪ್ತ್ವಾ ಚಕಾರ ಸಃ ।
ತಪ್ತಾಯಾಂ ಲೋಹಶಯ್ಯಾಯಾಂ ವೈಕ್ಲಬ್ಯಂ ಕರ್ಮಣಾ ನೃಪ ॥ ೩೭ ॥

ತಪ್ತಾಯೋಭೀಷಣಂ ತಪ್ತಂ ಲೋಹಸ್ತಂಭಂ ಯಮಾಜ್ಞಯಾ ।
ತತಸ್ಥಿತಃ ಸಮಾಲಿಂಗ್ಯ ಭುಕ್ತ್ವಾ ದುಃಖಂ ಚಿರಂ ನೃಪಃ ॥ ೩೮ ॥

---

೩೩-೩೪. ಕಟ್ಟಿತೆಗೆದುಕೊಂಡು ಹೋಗುವಷ್ಟರಲ್ಲಿ ವಿಷ್ಣುಕಿಂಕರರು ಬಂದರು. ಬಂದು, ಅದರ ಕಟ್ಟನ್ನು ಕಿತ್ತು, ಉತ್ತಮವಾದ ರಥದಲ್ಲಿ ಹತ್ತಿಸಿದರು. ಆಗ ಯಮನ ಆಳುಗಳು ಅಪ್ಪಾ, ಇವನ್ನು ಯಾವ ಪುಣ್ಯಮಾಡಿದೆಯೆಂದು ಕರೆದುಕೊಂಡು ಹೋಗುತ್ತೀರಿ ಎಂದರು.

೩೫-೩೬. ಪೂರ್ವದಲ್ಲಿ ಇವನೊಬ್ಬ ರಾಜನು. ಇವನು ಬಹು ಪುಣ್ಯಗಳನ್ನು ಮಾಡಿದ್ದಾನೆ. ಒಬ್ಬ ಸುಂದರಿಯನ್ನು ಕದ್ದುದರಿಂದ ಯಮನ ಮನೆಗೆ ಹೋದನು. ಅಲ್ಲಿ ಅವನ ಅಪ್ಪಣೆಯಿಂದ ನೀವು ಬಹುಕ್ಲೇಶಗಳನ್ನು ಕೊಟ್ಟಿರಿ.

೩೭. ತಾಮ್ರದ ಸ್ತ್ರೀ ಪ್ರತಿಮೆಯನ್ನು ಕಾಸಿ ಅದರೊಡನೆ ಮಲಗಿಸಿದಿರಿ. ಅದರಿಂದ ತುಂಬ ಕಷ್ಟವನ್ನು ಅನುಭವಿಸಿದನು.

೩೮. ಕಾದಿರುವ ಕಬ್ಬಿಣದ ಗಟ್ಟಿಯನ್ನು ಆಲಿಂಗಿಸಿದಿರಿ. ಇದರಿಂದಲೂ ಕಷ್ಟವನ್ನು ಕೊಟ್ಟಿರಿ.

ಸಿಕ್ತಃ ಕ್ಷಾರಾಂಬುಧಾರಾಭಿರನ್ಯೈರ್ವರ್ಷಶಮನಾಲಯೇ ।
ತತೋ ನರಕಶೇಷೇ ಚ ಪಾಪಯೋನೌ ಮುಹುರ್ಮುಹುಃ ॥ ೩೯ ॥

ಜನ್ಮಾಸಾದ್ಯ ಚಿರಂ ದುಃಖಮನುಭೂತಂ ಸ್ವಕರ್ಮಣಾ ।
ತುಲಸೀಮೂಲಕಂ ವಾರಿ ಪೀತ್ವಾ ಯಾತಿ ಹರೇರ್ಗೃಹಂ ॥ ೪೦ ॥

ಇದಾನೀಂ ತದ್ವಚಃ ಶ್ರುತ್ವಾ ಗತಾ ದೂತಾ ಯಥಾಗತಾಃ ।
ತೇನ ಸಾರ್ಧಂ ವಿಷ್ಣುದೂತಾ ಗತಾ ವೈಕುಂಠಮಂದಿರಂ ॥ ೪೧ ॥

ಮಾಹಾತ್ಮ್ಯಂ ಕಥಿತಂ ಬ್ರಹ್ಮನ್ ತುಲಸ್ಯಾಃ ಪಾಪನಾಶನಂ ।
ಕುರ್ವಂತಿ ಸೇವಾಂ ಯೇ ಭಕ್ತ್ಯಾ ನ ಜಾನೇ ಕಿಂ ಭವೇನ್ಮನೇ ॥ ೪೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತ
ಶೌನಕಸಂವಾದೇ ತುಲಸೀಮಾಹಾತ್ಮ್ಯಂ ನಾಮ
ದ್ವಾವಿಂಶೋಽಧ್ಯಾಯಃ

---

೩೯-೪೦. ಉಪ್ಪುನೀರೇ ಮೊದಲಾದುವುಗಳಲ್ಲಿ ಅದ್ದುವದರಿಂದ ಅವನು ಬಾರಿಬಾರಿಗೂ ಬಹು ಕ್ಲೇಶಪಟ್ಟನು. ಆ ಮೇಲೆ ಪಾಪ ಜನ್ಮದಲ್ಲಿ ಪದೇಪದೇ ಹುಟ್ಟಿದನು. ಈಗ ತುಳಸಿಯ ಬುಡದ ನೀರನ್ನು ಕುಡಿದು ಪಾಪಗಳನ್ನು ಕಳೆದುಕೊಂಡು ಹರಿಯ ಮನೆಗೆ ಹೋಗುತ್ತಿರುವನು.

೪೧. ಈ ಮಾತನ್ನು ಕೇಳಿ ಯಮದೂತರು ಹೊರಟುಹೋದರು. ವಿಷ್ಣು ದೂತರು ತಮ್ಮೊಡನೆ ಅವನನ್ನು ವೈಕುಂಠಕ್ಕೆ ಕರೆದುಕೊಂಡು ಹೋದರು.

೪೨. ತುಳಸಿಯ ಮಹಿಮೆಯು ಪಾಪನಾಶಕವಾದುದು ಇದನ್ನು ಹೇಳಿದೆನು, ಭಕ್ತಿಯಿಂದ ಸೇವಿಸಿದರೆ ಯಾವ ಫಲ ಬರುತ್ತದೆಂದು ನೀನೇ ಯೋಚಿಸು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕಸಂವಾದದಲ್ಲಿ ತುಳಸೀಮಹಿಮೆ ಎಂಬ ಇಪ್ಪತ್ತೆರಡನೇ ಅಧ್ಯಾಯವು, ಮುಗಿದುದು.



॥ ಶ್ರೀ ॥

## ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ
### ತ್ರಯೋವಿಂಶೋಽಧ್ಯಾಯಃ



॥ ಶೌನಕ ಉವಾಚ ॥

ಕಥಯಸ್ವ ಮುನೇ ಸೂತ ಮಾಹಾತ್ಮ್ಯಂ ಕಲುಷಕ್ಷಯಂ ।
ಶೇಷಪಂಚದಿನಸ್ಯಾಪಿ ಕಾರ್ತಿಕಸ್ಯಾನುಕಂಪಯಾ ॥ ೧ ॥

॥ ಸೂತ ಉವಾಚ ॥

ಶೃಣು ಶೌನಕ ಯತ್ಪೃಷ್ಟಂ ಮಾಹಾತ್ಮ್ಯಂ ಪಾಪನಾಶನಂ ।
ವಕ್ಷ್ಯಾಮ್ಯಹಂ ಚೋರ್ಜಸ್ಯ ಶೇಷಪಂಚದಿನಸ್ಯ ಚ ॥ ೨ ॥

ವ್ರತಾನಾಂ ಮುನಿಶಾರ್ದೂಲ ಪ್ರವರಂ ವಿಷ್ಣುಪಂಚಕಂ ।
ತಸ್ಮಿನ್ಯಃ ಪೂಜಯೇದ್ಭಕ್ತ್ಯಾ ಶ್ರೀಹರಿಂ ರಾಧಯಾ ಸಹ ॥ ೩ ॥

ಗಂಧಪುಷ್ಪೈರ್ದೀಪಧೂಪೈರ್ವಸ್ತ್ರೈರ್ನಾನಾವಿಧೈಃ ಫಲೈಃ ।
ಸ ಯಾತಿ ವಿಷ್ಣುಸದನಂ ಸರ್ವಪಾಪವಿವರ್ಜಿತಃ ॥ ೪ ॥

---

### ಇಪ್ಪತ್ತಮೂರನೆಯ ಅಧ್ಯಾಯವು.

೧. ಶೌನಕನು ಹೇಳಿದನು---ಕಲುಷನಾಶಕವಾದ ಕಾರ್ತಿಕದ ಉಳಿದ ಐದು ದಿನಗಳ ಮಹಿಮೆಯನ್ನು ದಯವಿಟ್ಟು ಹೇಳು.

೨. ಸೂತನು ಹೇಳಿದನು---ಎಲೈ ಶೌನಕನೇ, ನೀನು ಕೇಳಿದ ಪಾಪನಾಶಕವಾದ ವಿಷ್ಣುಪಂಚಕದ ಮಹಿಮೆಯನ್ನು ಹೇಳುತ್ತೇನೆ. ಆ ಶೇಷ ಪಂಚ ದಿನಗಳು ಬಹು ಮುಖ್ಯವಾದುವು.

೩-೪. ವಿಷ್ಣುಪಂಚಕವು ವ್ರತಗಳಲ್ಲೆಲ್ಲಾ ಉತ್ತಮವಾದುದು. ಆ ವ್ರತದಲ್ಲಿ ಹರಿಯನ್ನು ಭಕ್ತಿಯಿಂದ ಧೂಪಾದಿಗಳಿಂದ ಪೂಜಿಸಿದರೆ, ಸರ್ವಪಾಪಗಳು ಹೋಗಿ ವಿಷ್ಣುವಿನ ಮನೆಗೆ ಹೋಗುತ್ತಾನೆ.

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ ।
ನ ಪ್ರಾಪ್ನೋತಿ ಪರಂ ಸ್ಥಾನಮುಕ್ತ್ವಾ ವಿಷ್ಣುಪಂಚಕಂ ॥ ೫ ॥

ಸರ್ವಪಾಪಹರಂ ಪುಣ್ಯಂ ವಿಖ್ಯಾತಂ ವಿಷ್ಣುಪಂಚಕಂ ।
ತತ್ರ ಸ್ನಾನಂ ತು ಯಃ ಕುರ್ಯಾತ್ಸರ್ವತೀರ್ಥಫಲಂ ಲಭೇತ್ ॥ ೬ ॥

ಶ್ರೀಹರೇಃ ಪುರತೋ ವಿಪ್ರ ತುಲಸ್ಯಾಶ್ಚ ವಿಶೇಷತಃ ।
ಪ್ರದೀಪಂ ಸರ್ಪಿಷಾ ಪೂರ್ಣಂ ದದ್ಯಾದ್ಯೋ ಭಕ್ತಿಭಾವತಃ ॥ ೭ ॥

ನಭಸಿ ಶ್ರೀಹರೇಃ ಪ್ರೀತ್ಯೈ ಸ ಯಾತಿ ವಿಷ್ಣುಮಂದಿರಂ ।
ಪಾಪೀ ಯಾತಿ ಹರೇರ್ಧಾಮ ಸತ್ಯಮೇತನ್ಮಯೋದಿತಂ ॥ ೮ ॥

ಸ್ನಾಪಯೇಚ್ಚಾಚ್ಯುತಂ ಭಕ್ತ್ಯಾ ಮಧುಕ್ಷೀರಘೃತಾದಿಭಿಃ ।
ಸೋ ದದ್ಯಾತ್ಕಿಂ ಹರಿಃ ಪ್ರೀತಸ್ತಸ್ಮೈ ಸಾಧುಜನಾಯ ವೈ ॥ ೯ ॥

ನೈವೇದ್ಯಂ ದೇವದೇವೇಶಂ ಪರಮಾನ್ನಂ ನಿವೇದಯೇತ್ ।
ತಸ್ಯ ಪುಣ್ಯಂ ಪ್ರಸಂಖ್ಯಾತುಂ ನ ಶಕ್ತೋ ವೈ ಚತುರ್ಮುಖಃ ॥ ೧೦ ॥

---

೫. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ ಯಾರಾದರೂ ಆಗಲಿ ವಿಷ್ಣು ಪಂಚಕವನ್ನು ಮಾಡದಿದ್ದರೆ ಅವರಿಗೆ ಪರಮಸಾನ್ನಿಧ್ಯವು ಸಿಕ್ಕುವುದಿಲ್ಲ.

೬. ವಿಷ್ಣು ಪಂಚಕವು ಸರ್ವಪಾಪಹರವಾದುದು. ಪುಣ್ಯಪ್ರದವಾದುದು, ಆಗ ಸ್ನಾನ ಮಾಡಿದರೆ ಸರ್ವ ತೀರ್ಥಗಳ ಫಲವು ಲಭಿಸುತ್ತದೆ.

೭. ಹರಿಯ ಮುಂದೆ-ಅದರಲ್ಲೂ ತುಳಸಿಯು ಇದ್ದರೆ ಇನ್ನೂ ವಿಶೇಷ-ಇದರ ಮುಂದೆ ತುಪ್ಪದ ದೊಡ್ಡದೀಪವನ್ನು ಹಚ್ಚಿದರೆ ಹರಿಯ ಸ್ಥಾನವನ್ನು ಹೊಂದುತ್ತಾನೆ.

೮. ಆಕಾಶದಲ್ಲಿ ಹರಿ ಪ್ರೀತಿಗಾಗಿ ದೀಪವನ್ನು ಹಚ್ಚಿದರೆ ವಿಷ್ಣುವಿನ ಸ್ಥಾನ ವನ್ನು ಹೊಂದುತ್ತಾನೆ. ಪಾಪಿಯಾದರೂ ಪಾಪವನ್ನು ಕಳೆದುಕೊಂಡು ಹರಿಯ ಸ್ಥಾನವನ್ನು ಹೊಂದುತ್ತಾನೆ.

೯. ಯಾವನು ವಿಷ್ಣು ಪಂಚಕದಲ್ಲಿ ಹರಿಗೆ ಪಂಚಾಮೃತಸ್ನಾನಗಳನ್ನು ಮಾಡಿ ಸುತ್ತಾನೆಯೋ ಅವನಿಗೆ ಹರಿಯು ಬೇಕಾದುದನ್ನು ಕೊಡುತ್ತಾನೆ.

೧೦. ಹರಿಗೆ ಪರಮಾನ್ನ ನಿವೇದನವನ್ನು ಮಾಡಿದರೆ ಅವನ ಪುಣ್ಯವನ್ನು ಚತುರ್ಮುಖನೂ ವರ್ಣಿಸಲಾರನು.

ಅರ್ಚಯಿತ್ವಾ ಹೃಷೀಕೇಶಮೇಕಾದಶ್ಯಾಂ ಸಮಾಹಿತಃ ।
ನಿಷ್ಪ್ರಾಷ್ಯ ಗೋಮಯಂ ಸಮ್ಯಜ್ಮಂತ್ರವತ್ಸಮುಪಾಸತೇ ॥ ೧೧ ॥

ಗೋಮೂತ್ರಂ ಮಂತ್ರವದ್ಭೂಯೋ ದ್ವಾದಶ್ಯಾಂ ಪ್ರಾಶಯೇದ್ವ್ರತೀ ।
ಕ್ಷೀರಂ ತಥಾ ತ್ರಯೋದಶ್ಯಾಂ ಚತುರ್ದಶ್ಯಾಂ ತಥಾ ದಧಿ ॥ ೧೨ ॥

ಸಂಪ್ರಾಪ್ಯ ಪಾಪಶುದ್ಧ್ಯರ್ಥಂ ಲಂಘಯಿತ್ವಾ ಚತುರ್ದಿನಂ ।
ಪಂಚಮೇ ತು ದಿನೇ ಸ್ನಾತ್ವಾ ವಿಧಿವತ್ಪೂಜ್ಯ ಕೇಶವಂ ॥ ೧೩ ॥

ಭೋಜಯೇದ್ಬ್ರಾಹ್ಮಣಾನ್ಭಕ್ತ್ಯಾ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ।
ತತೋ ನಕ್ತಂ ಸಮಶ್ನೀಯಾತ್ಪಂಚಗವ್ಯಂ ಸುಮಂತ್ರಿತಂ ॥ ೧೪ ॥

ಏವಂ ಕರ್ತುಮಶಕ್ತೋ ಯಃ ಫಲಮೂಲಂ ಚ ಭೋಜನಂ ।
ಕುರ್ಯಾದ್ಧವಿಷ್ಯಂ ವಾ ವಿಪ್ರ ಯಥೋಕ್ತವಿಧಿನಾ ಹ ವೈ ॥ ೧೫ ॥

ಶ್ರೀಹರೇಃ ಪಂಚಕಂ ವಿಪ್ರ ಕುರ್ಯಾದ್ಯಸ್ತುಲಸೀದಳೈಃ ।
ಪೂಜಯೇತ್ತಂ ಸ ವಿಜ್ಞೇಯಃ ಸ್ವಯಂ ನಾರಾಯಣಃ ಪ್ರಭುಃ ॥ ೧೬ ॥

---

೧೧. ಏಕಾದಶಿಯ ದಿನ ಹರಿಯನ್ನು ಪೂಜಿಸಿ ಗೋಮಯವನ್ನು ಮಂತ್ರವತ್ತಾಗಿ ಸೇವಿಸಬೇಕು. ದ್ವಾದಶಿಯ ದಿನ ಗೋಮೂತ್ರವನ್ನು ಮಂತ್ರವತ್ತಾಗಿ ಸೇವಿಸಬೇಕು.

೧೨. ತ್ರಯೋದಶಿಯ ದಿನ ಹಾಲನ್ನೂ ಚತುರ್ದಶಿಯದಿನ ಮೊಸರನ್ನೂ ಮಂತ್ರವತ್ತಾಗಿ ಸೇವಿಸಬೇಕು. ಈ ನಾಲ್ಕು ದಿನಗಳು ಉಪವಾಸ ಮಾಡಬೇಕು.

೧೩-೧೪. ಐದನೇ ದಿನದಲ್ಲಿ, ಸ್ನಾನಮಾಡಿ ಕೇಶವನನ್ನು ಪೂಜಿಸಿ, ಬ್ರಾಹ್ಮಣರಿಗೆ ಭೋಜನಮಾಡಿಸಿ, ದಕ್ಷಿಣೆಕೊಟ್ಟು, ರಾತ್ರಿಯಲ್ಲಿ ಮಂತ್ರಿತವಾದ ಪಂಚಗವ್ಯವನ್ನು ಕುಡಿಯಬೇಕು.

೧೫. ಉಪವಾಸ ಮಾಡಲು ಶಕ್ತಿಯಿಲ್ಲದಿದ್ದರೆ ಫಲಮೂಲಗಳನ್ನು ತಿನ್ನಬಹುದು. ಅಥವಾ ವಿಧಿವತ್ತಾಗಿ ಹವಿಸ್ಸನ್ನು ಮಾಡಿಕೊಂಡು ತಿನ್ನಬಹುದು.

೧೬. ವಿಷ್ಣು ಪಂಚಕವನ್ನು ತುಳಸೀದಳವನ್ನುಪಯೋಗಿಸಿ ಯಾವನು ಮಾಡುತ್ತಾನೆಯೋ ಅವನನ್ನು ಸಾಕ್ಷಾತ್ ನಾರಾಯಣನೆಂದು ತಿಳಿಯಬೇಕು.

ಪುರಾ ತ್ರೇತಾಯುಗೇ ಶೂದ್ರೋ ದಸ್ಯುವೃತ್ತಿಪರಾಯಣಃ ।
ನಾಮ್ನಾ ದಂಡಕರೋ ನಿತ್ಯಂ ಧರ್ಮನಿಂದಾಂ ಕರೋತಿ ಯಃ ॥ ೧೭ ॥

ಅಸತ್ಯಭಾಷೀ ಮಿತ್ರಘ್ನೋ ವೇಶ್ಯಾವಿಭ್ರಮಲೋಲುಪಃ ।
ಬ್ರಹ್ಮಸ್ವಹಾರೀ ಕ್ರೂರಶ್ಚ ಪರಸ್ತ್ರೀಗಮನೇ ರತಃ ॥ ೧೮ ॥

ಶರಣಾಗತಹಂತಾ ಚ ಪಾಷಂಡಜನಸಂಗಭಾತ್ ।
ಗೋಮಾಂಸಾಶೀ ಸುರಾಪಶ್ಚ ಪರನಿಂದಾಕರಸ್ಸದಾ ॥ ೧೯ ॥

ವಿಶ್ವಾಸಘಾತೀ ಜ್ಞಾತೀನಾಂ ವೃತ್ತಿಚ್ಛೇದೀ ದ್ವಿಜೋತ್ತಮ ।
ದುಷ್ಟಂ ಸರ್ವೇ ಸಮಾಲೋಕ್ಯ ತಾದೃಶಂ ತದ್ಗೃಹಂ ದ್ವಿಜ ।
ಆಗತಾ ಜ್ಞಾತಯಃ ಕ್ರುದ್ಧಾಸ್ತಸ್ಯ ಪಾಪಪರಾಯಣಂ ॥ ೨೦ ॥

॥ ಜ್ಞಾತಯ ಊಚುಃ ॥

ರೇ ರೇ ಮೂಢ ದುರಾಚಾರ ವಿನಾಶಂ ಪ್ರತಿ ನೀಯತೇ ।
ಯಾ ಪ್ರತಿಷ್ಠಾರ್ಜಿತಾಂ ಪೂರ್ವೈರಸ್ಮಾಕಂ ನಿರ್ಮಲಾನ್ವಯೇ ॥ ೨೧ ॥

ಇತಿ ಕ್ರುದ್ಧಾ ದ್ವಿಜಶ್ರೇಷ್ಠ ಅಪಕೀರ್ತಿಭಯಾದಪಿ ।
ಪಾಪಿನಾಂ ಪ್ರವರಂ ಸರ್ವೇ ತತ್ಯಜುಸ್ತಂ ಕುಲಾದರಂ ॥ ೨೨ ॥

---

೧೭-೧೯. ಪೂರ್ವದಲ್ಲಿ ತ್ರೇತಾಯುಗದಲ್ಲಿ ಒಬ್ಬ ಶೂದ್ರನಿದ್ದನು. ಅವನ ವೃತ್ತಿಯು ಕಳ್ಳತನ. ಹೆಸರು ದಂಡಿಕನು. ಯಾವಾಗಲೂ ಧರ್ಮವನ್ನು ನಿಂದಿಸುವನು. ಸುಳ್ಳು ಹೇಳುವುದು, ಮಿತ್ರದ್ರೋಹ, ಸೂಳೆಯರ ಸಂಗ, ಬ್ರಹ್ಮಸ್ವತ್ತನ್ನು ಕದಿಯುವುದು, ನಾಸ್ತಿಕರ ಸಹವಾಸ, ಗೋಮಾಂಸ ತಿನ್ನುವಿಕೆ, ಮದ್ಯಪಾನ, ಪರರನ್ನು ನಿಂದಿಸುವುದು, ನಂಬಿದವರನ್ನು ಕೊಲ್ಲುವಿಕೆ, ಜ್ಞಾತಿಗಳ ಜೀವನವನ್ನು ನಾಶಮಾಡುವುದು, ಇವೆಲ್ಲವನ್ನು ಮಾಡುತ್ತಿದ್ದನು.

೨೦. ಈತನು ದುಷ್ಟನಾಗಿರುವುದನ್ನು ತಿಳಿದು ಎಲ್ಲಾ ಜ್ಞಾತಿಗಳು. ಈ ಪಾಪಿಯ ಮನೆಗೆ ಬಂದರು.

೨೧. ಜ್ಞಾತಿಗಳು ಹೇಳಿದರು. ಲೋ ದಡ್ಡನೇ ನಮ್ಮ ಹಿರಿಯರು ಗಳಿಸಿದ್ದ ಕೀರ್ತಿಯನ್ನು ನಾಶಮಾಡುತ್ತೀಯೆ. ನಮ್ಮ ವಂಶವು ಅಪಯಶಸ್ಸನ್ನು ಹೊಂದುತ್ತದೆ.

೨೨. ಹೀಗೆಂದು ಕೀರ್ತಿಯ ಭಯದಿಂದೆಲ್ಲರೂ ಹೆದರಿ ಆತನನ್ನು ಕುಲದಿಂದ ಹೊರಗೆ ಹಾಕಿದರು.

ತತೋ ಗತೋ ಮಹಾರಣ್ಯಂ ವಿನಷ್ಟಾಖಿಲವೈಭವಃ ।
ಕುರ್ಯಾತ್ಸ ದಸ್ಯುಭಿಃ ಸಾರ್ಧಂ ದಸ್ಯುಕರ್ಮ ನಿರಂತರಂ ॥ ೨೩ ॥

ಪಥಿ ಪ್ರಗಚ್ಛತಾಂ ತೇಷಾಂ ಭಯಾದ್ವಿಪ್ರ ನ ಖಾದಿತುಂ ।
ಪ್ರಾಪ್ತಂ ಕಿಂಚಿತ್ಕ್ಷುಧಾರ್ತಾಸ್ತೇ ಗತಾಶ್ಚಾನ್ಯಸ್ಥಲಂ ಪ್ರತಿ ॥ ೨೪ ॥

ತತ್ರ ಪ್ರವಿಷ್ಟಾಸ್ತೇ ಸರ್ವೇ ದೃಷ್ಟ್ವಾ ಪುಣ್ಯಜನಾನ್ಬಹೂನ್ ।
ಧಾತ್ರೀಮೂಲೇ ಸ್ಥಿತಾನ್ಬ್ರಹನ್ ವೈಷ್ಣವಾನ್ದ್ವಿಜಸತ್ತಮಾನ್ ॥ ೨೫ ॥

ಸರ್ವೇ ತೇ ದಸ್ಯವೋ ವಿಪ್ರ ಗತಾ ದಂಡಕರೋಽಪಿ ಸಃ ।
ತೇಷಾಂ ಪರಿಸರಂ ಗತ್ವಾ ಪ್ರಣಾಮಂ ವೈ ಚಕಾರ ಸಃ ॥ ೨೬ ॥

॥ ದಂಡಕ ಉವಾಚ ॥

ಕ್ಷುಧಾರ್ತೋಽಹಂ ದ್ವಿಜಶ್ರೇಷ್ಠಾಃ ಯಾಸ್ಯಂತಿ ಮೇ ಧ್ರುವಂ ।
ದದಧ್ವಂ ಖಾದಿತುಂ ಕಿಂಚಿದ್ಯುಷ್ಮಾಕಂ ಶರಣಾಗತಃ ॥ ೨೭ ॥

ಆಕರ್ಣ್ಯ ವಚನಂ ತಸ್ಯ ಪ್ರೋಚುಸ್ತೇ ಧರ್ಮತತ್ಪರಾಃ ।
ಸರ್ವಪಾಪಹರೇ ತ್ವಂ ಚ ವಿಖ್ಯಾತೇ ವಿಷ್ಣುಪಂಚಕೇ ॥ ೨೮ ॥

---

೨೩. ಊರಿನಲ್ಲಿದ್ದ ವೈಭವವೆಲ್ಲವೂ ನಾಶವಾಗಲು ಕಾಡಿಗೆ ಹೋಗಿ ಕಳ್ಳರೊಡನೆ ಸದಾಕಾಲದಲ್ಲೂ ಕಳ್ಳತನವನ್ನೇ ಮಾಡುತ್ತಿದ್ದನು.

೨೪. ದಾರಿಯಲ್ಲಿ ಹೋಗುತ್ತಿರುವ ಇವರಿಗೆ ತಿನ್ನಲೇನೂ ಸಿಕ್ಕಲೇ ಇಲ್ಲ. ಹಸಿವಿನಿಂದ ಕೂಡಿದ ಅವರು ಬೇರೆ ಸ್ಥಳಕ್ಕೆ ಹೋದರು.

೨೫. ಅಲ್ಲಿ ಹೋದ ಇವರು ನೆಲ್ಲಿಯ ಮರದಡಿಯಲ್ಲಿ ಇದ್ದ, ಪುಣ್ಯ ಕೆಲಸದಲ್ಲಿ ನಿರತರಾಗಿದ್ದ ಅನೇಕ ಜನ ಬ್ರಾಹ್ಮಣರನ್ನು ನೋಡಿದರು.

೨೬. ಆ ಕಳ್ಳರೆಲ್ಲರೂ ಹೋಗಲು, ಈ ದಂಡಕರನು ಬ್ರಾಹ್ಮಣರ ಬಳಿಗೆ ಹೋಗಿ ನಮಸ್ಕರಿಸಿದನು.

೨೭. ದಂಡಕರನು ಹೇಳಿದನು:— ಎಲೈ ಬ್ರಾಹ್ಮಣರಿರಾ, ನನಗೆ ಹಸಿವಾಗುತ್ತಿದೆ. ಪ್ರಾಣಗಳೇ ಹೋಗುತ್ತಿವೆ. ತಿಂಡಿಯನ್ನು ಕೊಡಿ, ನಿಮಗೆ ಶರಣು ಬಂದಿದ್ದೇನೆ.

೨೮-೨೯. ಆ ಮಾತನ್ನು ಕೇಳಿ ಧರ್ಮಾಸಕ್ತರಾದ ಅವರು ಸರ್ವಪಾಪನಾಶಕ

ಕಥಮನ್ನಂ ಖಾದಿತುಂ ತೇ ವಾಂಛಾ ತ್ವದ್ಯ ಹರೇರ್ದಿನೇ ।
ವಿಶೇಷಂ ತೇ ಬ್ರೂಹಿ ಸಂಜ್ಞಾ ಕಾ ತೇ ಭವತಿ ಸಾಂಪ್ರತಂ ॥ ೨೯ ॥

ಸ ಉವಾಚ ಮುದಾ ವಿಪ್ರ ನಾಮ್ನಾ ದಂಡಕರೋಽಸ್ಯಹಂ ।
ಸರ್ವಪಾಪಸಮಾಯುಕ್ತಶ್ಚೋದ್ಧಾರೋ ಮೇ ಕಥಂ ಭವೇತ್ ॥ ೩೦ ॥

ಊಚುಸ್ತೇ ವೈ ವ್ರತಂ ಶ್ರೇಷ್ಠಂ ಕುರುಷ್ವ ವಿಷ್ಣುಪಂಚಕಂ ।
ವಿಪ್ರಾಣಾಮಾಜ್ಞಯಾ ವಿಪ್ರ ಚಕಾರ ವಿಷ್ಣುಪಂಚಕಂ ॥ ೩೧ ॥

ಸ ಪ್ರೇತ್ಯ ಚ ಹರೇಸ್ಥಾನಮಾರುಹ್ಯ ಸ್ಯಂದನೇ ವರೇ ।
ಆಸಾದ್ಯ ಶ್ರೀಹರೇ ರೂಪಂ ತಸ್ಥೌ ಜನ್ಮವಿವರ್ಜಿತಃ ॥ ೩೨ ॥

ಯ ಇದಂ ಶೃಣುಯಾದ್ಭಕ್ತ್ಯಾ ಚಾಖ್ಯಾನಂ ಪಾಪನಾಶನಂ ।
ಕೋಟಿಜನ್ಮಾರ್ಜಿತಂ ಪಾಪಂ ತಸ್ಯ ನಶ್ಯತಿ ತತ್ಕ್ಷಣಾತ್ ॥ ೩೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ವಿಷ್ಣುಪಂಚಕ ಮಾಹಾತ್ಮ್ಯಂ ನಾಮ ತ್ರಯೋವಿಂಶೋಽಧ್ಯಾಯಃ

---

ಪಾವ, ಪ್ರಸಿದ್ಧವಾದ, ಈ ವಿಷ್ಣುಪಂಚಕದಲ್ಲಿ ಅನ್ನವನ್ನು ತಿನ್ನಲು ನಿನಗೆ ಅಪೇಕ್ಷೆ ಹೇಗೆ ಹುಟ್ಟುತ್ತದೆ ? ನಿನ್ನ ಹೆಸರೇನು ? ನಿನ್ನ ಜಾತಿ ಯಾವದು ? ಈಗ ಹೇಳು.

೩೦. ನನ್ನ ಹೆಸರು ದಂಡಕರನು ; ನಾನು ಮಹಾ ಪಾಪಿಯು ; ಹೇಗೆ ನನ್ನ ಉದ್ಧಾರವಾದೀತೆಂದು ಕೇಳಿದನು.

೩೧. ಶ್ರೇಷ್ಠವಾದ ವಿಷ್ಣುಪಂಚಕವನ್ನು ಮಾಡೆಂದೆನ್ನಲು ಆ ಬ್ರಾಹ್ಮಣಾಜ್ಞೆಯಿಂದ ಹಾಗೆಯೇ ಮಾಡಿದನು.

೩೨. ಅವನು ಸತ್ತಮೇಲೆ ವೈಕುಂಠವನ್ನು ಹೊಂದಿ, ಹರಿಯ ಬಳಿ ಇದ್ದು ಜನ್ಮವಿವರ್ಜಿತನಾಗಿದ್ದನು.

೩೩. ಈ ಪಾಪನಾಶಕವಾದ ಕಥೆಯನ್ನು ಕೇಳುವವನು ಕೋಟಿಜನ್ಮದಿಂದ ಮಾಡಿದ ಪಾಪವನ್ನು ಕಳೆದುಕೊಂಡು ಸುಖಿಯಾಗಿರುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಬ್ರಹ್ಮಖಂಡದಲ್ಲಿ ವಿಷ್ಣುಪಂಚಕಮಾಹಾತ್ಮ್ಯ ಯೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

## ಚತುರ್ವಿಂಶೋಽಧ್ಯಾಯಃ

॥ ಶೌನಕ ಉವಾಚ ॥

ವಿದುಷಾಂ ವರ ತತ್ತ್ವಜ್ಞ ಕಥಯಸ್ವ ಮಹಾಮತೇ ।
ಇದಾನೀಂ ಮಮ ದಾನಾನಾಂ ಮಾಹಾತ್ಮ್ಯಂ ಕ್ರಮಶೋ ಮುನೇ ॥ ೧ ॥

॥ ಸೂತ ಉವಾಚ ॥

ಕ್ಷಿತಿದಾನಂ ಮುನಿಶ್ರೇಷ್ಠ ದಾನಾನಾಮುತ್ತಮಂ ಮತಂ ।
ಯೇನ ಚೈತತ್ಕೃತಂ ದಾನಂ ಸರ್ವದಾನಫಲಂ ಮತಂ ॥ ೨ ॥

ಕ್ಷಿತಿಂ ಸಸಸ್ಯಾಂ ಯೋ ದದ್ಯಾದ್ಬ್ರಾಹ್ಮಣಸ್ಯ ದ್ವಿಜೋತ್ತಮ ।
ವಿಷ್ಣುಲೋಕೇ ಸುಖಂ ಭುಂಕ್ತೇ ಯಾವದಿಂದ್ರಾಶ್ಚತುರ್ದಶ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಶೌನಕನು ಹೇಳಿದನು :— ಎಲೈ ! ವಿದ್ವಾಂಸರಲ್ಲಿ ಶ್ರೇಷ್ಠನೇ, ದಾನಗಳ ಮಹಿಮೆಯೇನೆಂಬುದನ್ನು ಈಗ ನನಗೆ ಹೇಳು.

೨. ಸೂತನು ಹೇಳಿದನು :— ಎಲೈ ! ಋಷಿಯೇ, ಭೂದಾನವು ದಾನಗಳ ಲ್ಲೆಲ್ಲಾ ಉತ್ತಮವಾದು. ಅದನ್ನು ಮಾಡಿದರೆ ಎಲ್ಲಾ ದಾನವನ್ನು ಮಾಡಿದ ಫಲ ಒದಗುವುದು.

೩. ಸಸ್ಯದೊಡನಿರುವ ಭೂಮಿಯನ್ನು ದಾನಮಾಡಿದರೆ ಅವನು ವಿಷ್ಣು ಲೋಕದಲ್ಲಿ ಹದಿನಾಲ್ಕು ಜನ ಇಂದ್ರರಿರುವವರೆಗೂ ಸುಖವನ್ನು ಅನುಭವಿಸುತ್ತಾ ಇರುವನು.

ಪೃಥಿವ್ಯಾಂ ಜನ್ಮ ಚಾಸಾದ್ಯ ಸಾರ್ವಭೌಮಸ್ತತೋ ನೃಪ ।
ಮಹೀಂ ಸರ್ವಾಂ ಚಿರಂ ಭುಕ್ತ್ವಾ ವ್ರಜೇದ್ವೈ ಶ್ರೀಹರೇರ್ಗೃಹಂ ॥ ೪ ॥

ಗೋಚರ್ಮಮಾತ್ರಾಂ ಭೂಮಿಂ ಯಃ ಪ್ರಯಚ್ಛತಿ ದ್ವಿಜಾತಯೇ ।
ಸ ಗಚ್ಛತಿ ಹರೇರ್ಗೇಹಂ ಸರ್ವಪಾಪವಿವರ್ಜಿತಃ ॥ ೫ ॥

ಶತಂ ಗಾವೋ ವೃಷಶ್ಚೈಕೋ ಯತ್ರ ತಿಷ್ಠಂತ್ಯಯಂತ್ರಿತಾಃ ।
ಗೋಚರ್ಮಮಾತ್ರಾಂ ತಾಂ ಭೂಮಿಂ ಪ್ರವದಂತಿ ಮಹರ್ಷಯಃ ॥ ೬ ॥

ಭೂಮಿನೇತಾ ಭೂಮಿದಾತಾ ದ್ವೌ ಚಾಪಿ ಸ್ವರ್ಗಗಾಮಿನೌ ।
ಗ್ರಾಹ್ಯಾ ಭೂಮಿರ್ದ್ವಿಜೈಃ ಪ್ರಾಜ್ಞೈಸ್ತ್ಯಕ್ತ್ವಾ ದಾನಶತಾನ್ಯಪಿ ॥ ೭ ॥

ಅಜ್ಞಾನೀ ಭೂಸುರೋ ಯಸ್ತು ತ್ಯಜೇದ್ಭೂಮಿಂ ವಿಮೋಹಿತಃ ।
ಪ್ರತಿಜನ್ಮನ್ಯಸೌ ವಿಪ್ರೋ ಭವೇಚ್ಚಾತ್ಯಂತದುಃಖಭಾಕ್ ॥ ೮ ॥

ಅನ್ಯತೋ ಯಃ ಸಮಾಸಾದ್ಯ ದದ್ಯಾದ್ಭೂಮಿಂ ದ್ವಿಜಾತಯೇ ।
ತಸ್ಮೈ ವಿಪ್ರ ಜಗನ್ನಾಥೋ ದದಾತಿ ಪರಮಂ ಪದಂ ॥ ೯ ॥

---

೪. ಆ ಮೇಲೆ ಭೂಮಿಯಲ್ಲಿ ಹುಟ್ಟಿ, ಚಕ್ರವರ್ತಿಯಾಗಿ ಭೂಮಿಯನ್ನೆಲ್ಲಾ ಅನುಭವಿಸಿ, ಅನಂತರ ವಿಷ್ಣುಲೋಕಕ್ಕೆ ಹೋಗುತ್ತಾನೆ.

೫. ಹಸುವಿನ ಚರ್ಮದಷ್ಟು ಭೂಮಿಯನ್ನು ದಾನಮಾಡಿದರೂ ಅವನಿಗೆ ಪಾಪವೆಲ್ಲವೂ ಹೋಗಿ ವೈಕುಂಠವನ್ನು ಹೊಂದುತ್ತಾನೆ.

೬. ನೂರು ಹಸುಗಳು, ಒಂದು ಹೋರಿ ಎಲ್ಲಿ ಸುಖವಾಗಿ ತಡೆಯಿಲ್ಲದೆ ಇರುತ್ತವೆಯೋ ಆ ಜಾಗವನ್ನು ಗೋಚರ್ಮವೆಂದು ಋಷಿಗಳು ಹೇಳುತ್ತಾರೆ.

೭. ಭೂದಾನ ಮಾಡಿದವನು, ತೆಗೆದುಕೊಂಡವನು, ಇಬ್ಬರೂ ಸ್ವರ್ಗವನ್ನು ಹೊಂದುತ್ತಾರೆ. ಅನೇಕ ದಾನಗಳಿದ್ದರೂ ಅವನ್ನು ಬಿಟ್ಟು ಭೂದಾನವನ್ನು ತೆಗೆದುಕೊಳ್ಳಬೇಕು.

೮. ತಿಳುವಳಿಕೆಯಿಲ್ಲದೆ ಯಾವನು ಭೂದಾನವನ್ನು ತೆಗೆದುಕೊಳ್ಳುವುದಿಲ್ಲವೋ ಅವನು ಜನ್ಮಜನ್ಮಕ್ಕೂ ದುಃಖಿಯಾಗುತ್ತಾನೆ.

೯. ಯಾವನು ಬೇರೆ ಕಡೆಯಿಂದ ಬಂದ ಭೂಮಿಯನ್ನು ಹಾಗೆಯೇ ಬ್ರಾಹ್ಮಣರಿಗೆ ಕೊಡುತ್ತಾನೋ ಅವನಿಗೆ ಶ್ರೀ ವಿಷ್ಣುವು ಪರಮಪದವನ್ನು ಕೊಡುತ್ತಾನೆ.

ಸ್ವದತ್ತಾಂ ಪರದತ್ತಾಂ ಚ ಮೇದಿನೀಂ ಯೋ ಹರೇದ್ದ್ವಿಜ ।
ಯುಕ್ತಃ ಕೋಟಿಕುಲೈರ್ಯಾತಿ ನರಕಂ ಚಾತಿದಾರುಣಂ ॥ ೧೦ ॥

ಹರೇದ್ಯೋ ವೈ ಮಹೀಂ ವಿಪ್ರ ದೇವಬ್ರಾಹ್ಮಣಯೋರಪಿ ।
ನ ದೃಷ್ಟಾ ನಿಷ್ಕೃತಿಸ್ತಸ್ಯ ಕಲ್ಪಕೋಟಿಶತೈರ್ಮುನೇ ॥ ೧೧ ॥

ಭೂಮಿಂ ಯೋ ಪರದತ್ತಾಂ ಚ ರಕ್ಷತಿ ಕ್ಷ್ಮಾಪತಿರ್ದ್ವಿಜ ।
ಪುಣ್ಯಂ ಕೋಟಿಗುಣಂ ಸ್ಯಾದ್ವೈ ತಸ್ಯ ದಾನಂ ಜನಾದಪಿ ॥ ೧೨ ॥

ಸಪ್ತದ್ವೀಪಾಂ ಮಹೀಂ ದತ್ವಾ ಯತ್ಪುಣ್ಯಂ ಪ್ರಾಪ್ಯತೇ ದ್ವಿಜ ।
ತತ್ಪುಣ್ಯಂ ಪ್ರಾಪ್ನುಯಾನ್ಮರ್ತ್ಯೋ ಧೇನುಂ ಯಚ್ಛನ್ದ್ವಿಜಾತಯೇ ॥೧೩॥

ದದಾತಿ ವೃಷಭಂ ಯಸ್ತು ದರಿದ್ರಾಯ ಕುಟುಂಬಿನೇ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕಂ ಸ ಗಚ್ಛತಿ ॥ ೧೪ ॥

ತಿಲಪ್ರಮಾಣಂ ಸ್ವರ್ಣಂ ಯೋ ಬ್ರಾಹ್ಮಣಾಯ ಪ್ರಯಚ್ಛತಿ ।
ಹರೇರ್ನಿಕೇತನಂ ಯಾತಿ ಯುಕ್ತಃ ಕೋಟಿಕುಲೈರಪಿ ॥ ೧೫ ॥

---

೧೦. ತಾನಾಗಲಿ ಪರರಾಗಲಿ ಕೊಟ್ಟ ಭೂಮಿಯನ್ನು ಪುನಃ ತೆಗೆದುಕೊಂಡರೆ ತನ್ನ ಕೋಟಿ ಕುಲಗಳೊಡನೆ ನರಕಕ್ಕೆ ಹೋಗುತ್ತಾನೆ.

೧೧. ದೇವಬ್ರಾಹ್ಮಣರ ಭೂಮಿಯನ್ನು ಕದ್ದವನಿಗೆ ಕೋಟಿಕಲ್ಪಗಳವರೆಗೂ ಪ್ರಾಯಶ್ಚಿತ್ತವೇ ಇಲ್ಲ.

೧೨. ಪರರುಕೊಟ್ಟ ಭೂಮಿಯನ್ನು ಕಾಪಾಡಿದರೆ ದಾನಮಾಡಿದುದಕ್ಕಿಂತಲೂ ಕೋಟಿಯಷ್ಟು ಪುಣ್ಯವು ಬರುವುದು.

೧೩. ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದರೆ ಬರುವಷ್ಟು ಪುಣ್ಯವು ಒಂದು ಕರೆಯುವ ಹಸುವನ್ನು ಕೊಟ್ಟರೆ ಬರುತ್ತದೆ.

೧೪. ವೃಷಭವನ್ನು ದರಿದ್ರನಾದ ಕುಟುಂಬಿಗೆ ದಾನಮಾಡಿದರೆ ಪಾಪವೆಲ್ಲವೂ ಹೋಗಿ ಶಿವಲೋಕವನ್ನು ಹೊಂದುತ್ತಾನೆ.

೧೫. ಎಳ್ಳಿನಷ್ಟು ಚಿನ್ನವನ್ನು ದಾನಮಾಡಿದರೂ ತನ್ನ ಕೋಟಿಕುಲದೊಡನೆ ಹರಿಯ ಲೋಕವನ್ನು ಹೊಂದುತ್ತಾನೆ.

ಯೋ ದದ್ಯಾದ್ರಜತಂ ವಿಪ್ರ ಸಾಧವೇ ಭೂಸುರಾಯ ವೈ ।
ಪ್ರಾಪ್ನೋತಿ ಚಂದ್ರಲೋಕಂ ಚ ಪಿಬೇತ್ತತ್ರಾಮೃತಂ ಸದಾ ॥ ೧೬ ॥

ಪ್ರವಾಳಂ ಮೌಕ್ತಿಕಂ ಚೈವ ಹೀರಕಂ ಚ ಮಣಿಂ ತಥಾ ।
ಯೋ ದದಾತಿ ದ್ವಿಜಶ್ರೇಷ್ಠ ಸ್ವರ್ಗಲೋಕಂ ಸ ಗಚ್ಛತಿ ॥ ೧೭ ॥

ತುಲಾಪುರುಷದಾನೇನ ಯತ್ಪುಣ್ಯಂ ಲಭತೇ ಜನಃ ।
ಶಾಲಗ್ರಾಮಶಿಲಾಂ ದತ್ವಾ ತಸ್ಮಾತ್ಕೋಟಿಗುಣಂ ಲಭೇತ್ ॥ ೧೮ ॥

ಸಪ್ತದ್ವೀಪಾಂ ಕ್ಷಿತಿಂ ದತ್ವಾ ಸಶೈಲವನಕಾನನಾಂ ।
ಯತ್ಪುಣ್ಯಂ ಲಭತೇ ತದ್ವೈ ಸಾಲಿಗ್ರಾಮಶಿಲಾಪ್ರದಃ ॥ ೧೯ ॥

ಸಾಲಿಗ್ರಾಮಶಿಲಾಂ ಯೋ ವೈ ದದ್ಯಾದ್ಭೂಮಿಸುರಾಯ ಚ ।
ತೇನ ವಿಪ್ರ ಪ್ರದತ್ತಾನಿ ಭುವನಾನಿ ಚತುರ್ದಶ ॥ ೨೦ ॥

ತುಲಾಪುರುಷದಾನಂ ಯಃ ಕರೋತಿ ದ್ವಿಜಪುಂಗವ ।
ಜನನ್ಯಾಶ್ಚೋದರೇ ತಸ್ಯ ಪುನರ್ಜನ್ಮ ನ ವಿದ್ಯತೇ ॥ ೨೧ ॥

---

೧೬. ಬೆಳ್ಳಿಯನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಚಂದ್ರಲೋಕವನ್ನು ಹೊಂದಿ ಅಲ್ಲಿ ಅಮೃತವನ್ನು ಯಾವಾಗಲೂ ಕುಡಿಯುತ್ತಾನೆ.

೧೭. ಹವಳ, ಮುತ್ತು, ಹೀರಕ, ವಜ್ರಗಳನ್ನು ದಾನಮಾಡಿದವನು ಸ್ವರ್ಗವನ್ನು ಹೊಂದುತ್ತಾನೆ.

೧೮. ಪುರುಷನು ತುಲಾಭಾರವನ್ನು ದಾನಮಾಡಿದರೆ ಬರುವಷ್ಟು ಪುಣ್ಯದ ಕೋಟಿಯಷ್ಟು ಸಾಲಿಗ್ರಾಮವನ್ನು ದಾನಮಾಡಿದರೆ ಬರುತ್ತದೆ.

೧೯. ಸಪ್ತದ್ವೀಪಗಳ ಸಹಿತವಾದ ಭೂಮಿಯನ್ನು ದಾನಮಾಡಿದರೆ ಬರುವ ಪುಣ್ಯವನ್ನು ಸಾಲಿಗ್ರಾಮದ ದಾನದಿಂದ ಹೊಂದುತ್ತಾನೆ.

೨೦. ಸಾಲಿಗ್ರಾಮವನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಹದಿನಾಲ್ಕು ಲೋಕಗಳನ್ನು ದಾನಮಾಡಿದಂತಾಗುತ್ತದೆ.

೨೧. ತುಲಾಪುರುಷ ದಾನವನ್ನು ಬ್ರಾಹ್ಮಣನಿಗೆ ಮಾಡಿದರೆ ಪುನರ್ಜನ್ಮವಿಲ್ಲ.

ಸಾಲಂಕಾರಾಂ ದ್ವಿಜಶ್ರೇಷ್ಠ ಕನ್ಯಾಂ ಯಚ್ಛತಿ ಯೋ ನರಃ ।
ಸ ಗಚ್ಛೇದ್ಬ್ರಹ್ಮಸದನಂ ಪುನರ್ಜನ್ಮ ನ ವಿದ್ಯತೇ ॥ ೨೨ ॥

ಕನ್ಯಾವಿಕ್ರಯಿಣೋ ನಾಸ್ತಿ ನರಕಾನ್ನಿಷ್ಕೃತಿಃ ಪುನಃ ।
ಕನ್ಯಾದಾನಕೃತೋ ನಾಸ್ತಿ ಸ್ವರ್ಗಾದಾಗಮನಂ ಪುನಃ ॥ ೨೩ ॥

ಉಪಾನಹೌ ಚಾತಪತ್ರಂ ಯೋ ದದಾತಿ ದ್ವಿಜಾತಯೇ ।
ಪ್ರೇತ್ಯ ಚೇಂದ್ರಪುರಂ ಗತ್ವಾ ವಸೇತ್ಕಲ್ಪಚತುಷ್ಟಯಂ ॥ ೨೪ ॥

ವಸ್ತ್ರಂ ಯಚ್ಛತಿ ಯೋ ದಿವ್ಯಂ ಸಾಧವೇ ವೈ ದ್ವಿಜಾತಯೇ ।
ಸ್ವರ್ಗೇ ದಿವ್ಯಾಂಬರಧರಶ್ಚಿರಂ ತಿಷ್ಠೇದ್ದ್ವಿಜೋತ್ತಮ ॥ ೨೫ ॥

ಧೇನುಂ ಪುರಾತನೀಂ ಯಚ್ಛೇದ್ವಸ್ತ್ರಂ ಚ ಜರಿತಂ ದ್ವಿಜ ।
ನೂನಂ ರಜೋವತೀಂ ಕನ್ಯಾಂ ಸ ಗಚ್ಛೇನ್ನಿರಯಂ ತಥಾ ॥ ೨೬ ॥

ಕನ್ಯಾವಿಕ್ರಯಿಣೋ ಬ್ರಹ್ಮನ್ನಪಶ್ಯೇದ್ವದನಂ ಬುಧಃ ।
ದೃಷ್ಟ್ವಾ ಚಾಜ್ಞಾನತೋ ವಾಪಿ ಕುರ್ಯಾನ್ಮಾರ್ತಾಂಡದರ್ಶನಂ ॥ ೨೭ ॥

---

೨೨. ಸಾಲಂಕಾರವಾದ ಕನ್ಯಾದಾನವನ್ನು ಮಾಡಿದರೆ ಬ್ರಹ್ಮಲೋಕದಲ್ಲಿ ಸುಖಿಸುತ್ತ ಪುನರ್ಜನ್ಮವನ್ನು ಹೊಂದುವುದಿಲ್ಲ.

೨೩. ಕನ್ಯೆಯನ್ನು ಮಾರತಕ್ಕವನಿಗೆ ನರಕದಿಂದ ಪುನರಾಗಮನವಿಲ್ಲ. ಕನ್ಯಾದಾನ ಮಾಡಿದವನಿಗೆ ಸ್ವರ್ಗದಿಂದ ಪುನರಾಗಮನವಿಲ್ಲ.

೨೪. ಕೆರ, ಛತ್ರಿಗಳನ್ನು ದಾನಮಾಡಿದರೆ ಸತ್ತಮೇಲೆ ಇಂದ್ರಲೋಕಕ್ಕೆ ಹೋಗಿ ನಾಲ್ಕು ಕಲ್ಪಗಳವರೆಗೂ ಇರುತ್ತಾನೆ.

೨೫. ವಸ್ತ್ರದಾನವನ್ನು ಬ್ರಾಹ್ಮಣನಿಗೆ ಮಾಡಿದರೆ ಸ್ವರ್ಗದಲ್ಲಿ ಒಳ್ಳೆಯ ವಸ್ತ್ರಗಳನ್ನುಟ್ಟು ಸುಖಿಸುತ್ತಾನೆ.

೨೬. ಮುದಿಹಸು, ಹರಕುಪಂಚೆ, ಮುಟ್ಟಾದ ಹುಡುಗಿ, ಇವನ್ನು ದಾನ ಮಾಡಿದರೆ ನರಕಭಾಗಿಯಾಗುತ್ತಾನೆ.

೨೭. ಕನ್ಯೆಯನ್ನು ಮಾರಿದವನನ್ನು ನೋಡಬಾರದು. ನೋಡಿದರೆ ಒಡನೆಯೇ ಸೂರ್ಯದರ್ಶನವನ್ನು ಮಾಡಬೇಕು.

ಫಲದಾತಾ ನರೋ ಗಚ್ಛೇತ್ತ್ರಿದಿವಂ ಚ ದ್ವಿಜೋತ್ತಮ ।
ಭುಂಕ್ತೇ ಕಲ್ಪಸಹಸ್ರಾಣಿ ಫಲಂ ತತ್ರಾಮೃತೋಪಮಂ ॥ ೨೮ ॥

ಶಾಕಂ ಯಚ್ಛತಿ ಯೋ ಮರ್ತ್ಯಃ ಶಿವಸ್ಯ ಭವನಂ ದ್ವಿಜ ।
ಯಾತಿ ಕಲ್ಪದ್ವಯಂ ಭುಂಕ್ತೇ ದುರ್ಲಭಂ ಪಾಯಸಂ ಸುರೈಃ ॥ ೨೯ ॥

ಘೃತದೋ ದಧಿದಶ್ಚೈವ ತಕ್ರದೋ ದುಗ್ಧದಸ್ತಥಾ ।
ವಿಷ್ಣೋರ್ನಿಕೇತನಂ ಗತ್ವಾ ಸುಧಾಪಾನಂ ಕರೋತಿ ಸಃ ॥ ೩೦ ॥

ಗಂಧದಃ ಪುಷ್ಪದಶ್ಚೈವ ಮರ್ತ್ಯೋ ಯಾತಿ ಸುರಾಲಯಂ ।
ತಿಷ್ಠೇದ್ಯುಗಸಹಸ್ರಾಣಿ ಗಂಧಪುಷ್ಪವಿಭೂಷಿತಃ ॥ ೩೧ ॥

ಶಯ್ಯಾದಾನಂ ದಾನಸಾರಂ ಬ್ರಾಹ್ಮಣಾಯ ದದಾತಿ ಯಃ ।
ಸ ಯಾತಿ ಬ್ರಹ್ಮಸದನಂ ಪರ್ಯಂಕೇ ಶೇರತೇ ಚಿರಂ ॥ ೩೨ ॥

ಪೀಠದಾತಾ ದೀಪದಾತಾ ಸರ್ವದುಷ್ಕೃತವರ್ಜಿತಃ ।
ಸ್ವರ್ಗೇ ಸಿಂಹಾಸನೇ ತಿಷ್ಠೇಜ್ಜ್ವಲದ್ದೀಪಾವಳೀವೃತಃ ॥ ೩೩ ॥

---

೨೮. ಫಲಗಳನ್ನು ದಾನಮಾಡಿದರೆ ಸ್ವರ್ಗವನ್ನು ಹೊಂದಿ ಸಾವಿರ ಕಲ್ಪಗಳ ವರೆಗೆ ಅಲ್ಲಿ ಉತ್ತಮಫಲಗಳನ್ನು ಅನುಭವಿಸುತ್ತಾನೆ.

೨೯. ಶಾಕದಾನ ಮಾಡಿದರೆ ಶಿವನ ಮನೆಗೆ ಹೋಗಿ ಕಲ್ಪದ್ವಯ ಪರ್ಯಂತರ ಅಲ್ಲಿ ಉತ್ತಮವಾದ ಪಾಯಸವನ್ನು ಭಕ್ಷಿಸುತ್ತಾನೆ.

೩೦. ತುಪ್ಪ, ಮೊಸರು, ಮಜ್ಜಿಗೆ, ಹಾಲುಗಳನ್ನು ದಾನಮಾಡಿದರೆ ವೈಕುಂಠ ದಲ್ಲಿ ಅಮೃತಪಾನವನ್ನು ಮಾಡುತ್ತಾನೆ.

೩೧. ಗಂಧ ಪುಷ್ಪಗಳನ್ನು ದಾನಮಾಡಿದರೆ ಸ್ವರ್ಗವನ್ನು ಹೊಂದಿ ಸಾವಿರ ಯುಗಗಳಿದ್ದು ಗಂಧಪುಷ್ಪಗಳ ಅಲಂಕಾರವನ್ನು ಅನುಭವಿಸುತ್ತಾನೆ.

೩೨. ಶಯ್ಯಾದಾನವೆಂಬುದು ದಾನಗಳಲ್ಲಿ ಉತ್ತಮವಾದುದು. ಬ್ರಾಹ್ಮಣ ನಿಗೆ ಕೊಟ್ಟರೆ ಬ್ರಹ್ಮಲೋಕಕ್ಕೆ ಹೋಗಿ ಮಂಚದಲ್ಲಿ ಮಲಗುತ್ತಾನೆ.

೩೩. ಮಣೆದಾನ, ದೀಪದಾನಗಳನ್ನು ಮಾಡಿದರೆ ಪಾಪಗಳು ಹೋಗಿ ಸ್ವರ್ಗ ದಲ್ಲಿ ಸಿಂಹಾಸನದಲ್ಲಿ ಕುಳಿತು ದೀಪಗಳ ಸಾಲಿನಿಂದ ಪ್ರಕಾಶಿಸುತ್ತಾನೆ.

ತಾಂಬೂಲಂ ಯೋ ನರೋ ದದ್ಯಾದ್ಭೂಮಿಂ ಭುಂಕ್ತೇಽಖಿಲಾಂ ಸುಖಂ ।
ಸ್ವರ್ಗೇ ದೇವಾಂಗನಾಕ್ರೋಡೇ ಸುಪ್ತಸ್ತಾಂಬೂಲಮತ್ತಿ ವೈ ॥ ೩೪ ॥

ವಿದ್ಯಾದಾನಂ ದಾನವರಂ ಕರೋತಿ ಯೋ ನರೋತ್ತಮಃ ।
ಸ ಪ್ರೇತ್ಯ ಸನ್ನಿಧಿಂ ವಿಷ್ಣೋಸ್ತಿಷ್ಠೇದ್ಯುಗಶತತ್ರಯಂ ॥ ೩೫ ॥

ಪ್ರಾಪ್ಯ ಜ್ಞಾನಂ ತತಸ್ತತ್ರ ದುರ್ಲಭಂ ವೈ ದ್ವಿಜೋತ್ತಮ ।
ದುರ್ಲಭಂ ಮೋಕ್ಷಮಾಪ್ನೋತಿ ಶ್ರೀಹರೇಃ ಕೃಪಯಾ ದ್ವಿಜ ॥ ೩೬ ॥

ಅನಾಥಂ ದುಃಖಿನಂ ವಿಪ್ರಂ ಪಾಠಯೇದ್ವೈ ನರೋತ್ತಮಃ ।
ಶ್ರೀಹರೇರ್ಭವನಂ ಯಾತಿ ಪುನರ್ಜನ್ಮವಿವರ್ಜಿತಃ ॥ ೩೭ ॥

ಯೋ ನರಃ ಪುಸ್ತಕಂ ದದ್ಯಾದ್ಭಕ್ತಿಶ್ರದ್ಧಾಸಮನ್ವಿತಃ ।
ಪ್ರತಿವರ್ಣಂ ಲಭೇತ್ಪುಣ್ಯಂ ಕಪಿಲಾಕೋಟಿದಾನಜಂ ॥ ೩೮ ॥

ಮಧುದೋ ಗುಡದಶ್ಚೈವ ಮರ್ತ್ಯೋ ಯಾತೀಕ್ಷುಸಾಗರಂ ।
ಲವಣಂ ಪ್ರದದದ್ಯಾತಿ ವಾರುಣಂ ಲೋಕಮೇವ ಚ ॥ ೩೯ ॥

---

೩೪. ತಾಂಬೂಲದಾನ ಮಾಡಿದರೆ ಭೂಮಿಯಲ್ಲಿ ಸಮಸ್ತ ಸುಖಗಳನ್ನು ಹೊಂದಿ ಸ್ವರ್ಗದಲ್ಲಿ ಅಪ್ಸರ ಸ್ತ್ರೀಯರ ತೊಡೆಯ ಮೇಲಿದ್ದು ತಾಂಬೂಲವನ್ನು ಹಾಕಿಕೊಳ್ಳುತ್ತಾನೆ.

೩೫. ವಿದ್ಯಾದಾನವು ಬಹುಶ್ರೇಷ್ಠವು. ಅದನ್ನು ಮಾಡಿದರೆ ವಿಷ್ಣುಲೋಕದಲ್ಲಿ ಮುನ್ನೂರು ಯುಗಗಳಿರುತ್ತಾನೆ.

೩೬. ಅಲ್ಲಿ ಒಳ್ಳೆಯ ಜ್ಞಾನವನ್ನು ಹೊಂದಿ ವಿಷ್ಣುವಿನ ಕೃಪೆಯಿಂದ ದುರ್ಲಭವಾದ ಮೋಕ್ಷವನ್ನು ಹೊಂದುತ್ತಾನೆ.

೩೭. ಅನಾಥನಾದ ಬ್ರಾಹ್ಮಣ ಹುಡುಗನನ್ನು ಕರೆದು ವಿದ್ಯೆ ಕಲಿಸಿದರೆ ಹರಿಯ ಭವನಕ್ಕೆ ಹೋಗುತ್ತಾನೆ.

೩೮. ಪುಸ್ತಕವನ್ನು ಭಕ್ತಿಯಿಂದ ದಾನಮಾಡಿದರೆ ಅವನು ಒಂದೊಂದಕ್ಷರಕ್ಕೂ ಕೋಟಿ ಕಪಿಲಾ ಹಸುಗಳನ್ನು ದಾನಮಾಡಿದ ಪುಣ್ಯವನ್ನು ಹೊಂದುತ್ತಾನೆ

೩೯. ಜೇನು, ಬೆಲ್ಲಗಳ ದಾನಿಯು ಇಕ್ಷುಸಾಗರವನ್ನು ಹೊಂದುತ್ತಾನೆ. ಲವಣದಾನಿಯು ವರುಣಲೋಕವನ್ನು ಹೊಂದುತ್ತಾನೆ.

ಸರ್ವೇಷಾಮೇವ ದಾನಾನಾಮನ್ನಂ ವಾರಿ ದ್ವಿಜೋತ್ತಮ ।
ತತ್ವಜ್ಞೈರ್ಮುನಿಭಿಸ್ಸರ್ವೈಃ ಪ್ರವರಂ ವೈ ಪ್ರಕೀರ್ತಿತಂ ॥ ೪೦ ॥

ಅನ್ನಂ ವಾರಿ ದ್ವಿಜಶ್ರೇಷ್ಠ ಯೇನ ದತ್ತಂ ಮಹೀತಲೇ ।
ತೇನ ದತ್ತಾನಿ ದಾನಾನಿ ಸರ್ವಾಣಿ ಚ ದ್ವಿಜರ್ಷಭ ॥ ೪೧ ॥

ಅನ್ನದೋ ಯೋ ನರೋ ವಿಪ್ರ ಪ್ರಾಣದಶ್ಚ ಪ್ರಕೀರ್ತಿತಃ ।
ತಸ್ಮಾತ್ಸಮಸ್ತದಾನಾನಾಮನ್ನದೋ ಲಭತೇ ಫಲಂ ॥ ೪೨ ॥

ಯಥಾ ಚಾನ್ನಂ ತಥಾ ವಾರಿ ದ್ವೇ ತುಲ್ಯೇ ಚ ಪ್ರಕೀರ್ತಿತೇ ।
ವಾರಿಣಾ ಚ ವಿನಾ ಚಾನ್ನಂ ಸಿದ್ಧಿಂ ನ ಸ್ಯಾದ್ದ್ವಿಜೋತ್ತಮ ॥ ೪೩ ॥

ಕ್ಷುಧಾ ತೃಷಾ ದ್ವಿಜವ್ಯಾಘ್ರ ದ್ವೇ ಚ ತುಲ್ಯೇ ಪ್ರಕೀರ್ತಿತೇ ।
ಅತಶ್ಚಾನ್ನಂ ಚ ತೋಯಂ ಚ ಶ್ರೇಷ್ಠಂ ಪ್ರೋಕ್ತಂ ದ್ವಿಜೈರಪಿ ॥ ೪೪ ॥

ಅನ್ನದಾನಂ ಕ್ಷಿತೌ ಬ್ರಹ್ಮನ್ ಯೇ ಕುರ್ವಂತಿ ನರೋತ್ತಮಾಃ ।
ಸರ್ವಪಾಪವಿನಿರ್ಮುಕ್ತಾ ಗಚ್ಛಂತಿ ಹರಿಮಂದಿರಂ ॥ ೪೫ ॥

---

೪೦. ತತ್ವಜ್ಞರಾದ ಋಷಿಗಳು ಅನ್ನ ನೀರಿನ ದಾನಗಳನ್ನು ದಾನಗಳೆಲ್ಲಾ ಉತ್ತಮಗಳೆಂದು ಹೇಳುತ್ತಾರೆ.

೪೧. ಅನ್ನ ನೀರುಗಳನ್ನು ದಾನಮಾಡಿದರೆ ಲೋಕದಲ್ಲಿ ಆತನು ಎಲ್ಲಾ ದಾನವನ್ನು ಮಾಡಿದಂತಾಯಿತು.

೪೨. ಅನ್ನದಾನಿಯನ್ನು ಪ್ರಾಣದಾನಿಯೆಂದು ಹೇಳುತ್ತಾರೆ. ಆದ್ದರಿಂದ ಎಲ್ಲಾ ದಾನಗಳಿಗಿಂತ ಅನ್ನದಾನಿಯು ಹೆಚ್ಚು ಫಲವನ್ನು ಹೊಂದುತ್ತಾನೆ.

೪೩. ಅನ್ನ ಹೇಗೋ ಹಾಗೆಯೇ ನೀರೂ ಹೇಳಲ್ಪಟ್ಟಿದೆ. ಅನ್ನದಾನವು ನೀರಿನ ದಾನವಿಲ್ಲದಿದ್ದರೆ ಸಿದ್ಧಿಸುವುದಿಲ್ಲ.

೪೪. ಹಸಿವು ಬಾಯಾರಿಕೆಗಳು ಎರಡೂ ಸಮವೇ ಆದ್ದರಿಂದ ಅನ್ನದಾನ ನೀರುದಾನಗಳೆರಡೂ ಉತ್ತಮವು.

೪೫. ಅನ್ನದಾನ ಮಾಡಿದವನು ಪಾಪವನ್ನು ಕಳೆದುಕೊಂಡು ಹರಿಮಂದಿರಕ್ಕೆ ಹೋಗುತ್ತಾನೆ.

ಯಾವಂತ್ಯನ್ನಾನಿ ಭೋ ವಿಪ್ರ ಯಚ್ಛತಿ ಕ್ಷಿತಿಮಂಡಲೇ ।
ಬ್ರಹ್ಮಹತ್ಯಾನಿ ತಾವಂತಿ ನಶ್ಯಂತ್ಯೇವ ತಪೋಧನ ॥ ೪೬ ॥

ಯಚ್ಛತಾಂ ಚಾನ್ನದಾನಾನಿ ಶರೀರಾಣಿ ಚ ಪಾತಕಂ ।
ಗಾತ್ರಾಣಿ ಗೃಹ್ಣತಾಂ ತ್ಯಕ್ತ್ವಾ ಸಹಸಾ ಯಾಂತಿ ಶೌನಕ ॥ ೪೭ ॥

ಅತಃ ಪಾಪಿಷ್ಠಜಾನ್ನಾನಿ ನ ಗೃಹ್ಣಂತಿ ಮನೀಷಿಣಃ ।
ಗೃಹ್ಣಂತಿ ಮೋಹಾದ್ಯೇ ಮೂಢಾ ಭವಂತಿ ಪಾಪಭಾಗಿನಃ ॥ ೪೮ ॥

ಕುರ್ಯಾದ್ಭೂಮಿಷ್ಠಮುದಕಂ ಚೈಕಂ ಯೋ ಭೋ ದ್ವಿಜೋತ್ತಮ ।
ಸರ್ವಪಾಪೈರ್ವಿನಿರ್ಮುಕ್ತೋ ವ್ರಜೇತ್ಸ ಹರಿಮಂದಿರಂ ॥ ೪೯ ॥

ಪ್ರಯತ್ನೇನ ದ್ವಿಜಶ್ರೇಷ್ಠ ಕರ್ತವ್ಯೋ ಧನಸಂಚಯಃ ।
ಸಂಚಿತಂ ಚ ಧನಂ ಬ್ರಹ್ಮನ್ ದಾನಕರ್ಮಣಿ ನಿಕ್ಷಿಪೇತ್ ॥ ೫೦ ॥

ರಕ್ಷಂತಿ ಯೇ ಚ ಕಾರ್ಪಣ್ಯಾದ್ಧನಂ ತೇ ಚಾತಿದುಃಖಿನಃ ।
ಅಂತೇ ಸರ್ವಧನಂ ತ್ಯಕ್ತ್ವಾ ನಿಸ್ಸ್ವಾ ಗಚ್ಛಂತಿ ಭೋ ಮುನೇ ॥ ೫೧ ॥

---

೪೬. ಅನ್ನವನ್ನು ಭೂಮಿಯಲ್ಲಿ ಎಷ್ಟು ಅಗುಳನ್ನು ಕೊಡುತ್ತಾರೆಯೋ ಅಷ್ಟು ಬ್ರಹ್ಮಹತ್ಯೆಗಳು ನಾಶವಾಗುತ್ತವೆ.

೪೭. ಅನ್ನದಾನ ಮಾಡುತ್ತಿರುವವರ ಪಾಪವು ಅವರ ಶರೀರವನ್ನು ಬಿಟ್ಟು ಜಾಗ್ರತೆಯಾಗಿ ಓಡುತ್ತದೆ. ಮತ್ತು ತಿಗೆದುಕೊಂಡವನನ್ನು ಹೊಂದುತ್ತದೆ.

೪೮. ಆದ್ದರಿಂದಲೇ ಪಾಪಿಷ್ಠಾನ್ನವನ್ನು ತಿಳಿದವರು ಊಟಮಾಡುವುದಿಲ್ಲ. ಅಜ್ಞಾನದಿಂದ ತಿಗೆದುಕೊಂಡರೆ ಪಾಪಿಗಳಾಗುತ್ತಾರೆ.

೪೯. ಭೂಮಿಯಲ್ಲಿ ನೀರು ನಿಲ್ಲುವಂತೆ ಮಾಡಿದರೆ ಅವನಿಗೆ ಪಾಪವೆಲ್ಲವೂ ಹೋಗಿ ಹರಿಯ ಮಂದಿರವನ್ನು ಹೊಂದುತ್ತಾನೆ.

೫೦. ಪುರುಷನು ಪ್ರಯತ್ನದಿಂದ ದುಡ್ಡನ್ನು ಕೂಡಿಸಬೇಕು. ಕೂಡಿಟ್ಟ ಹಣವನ್ನು ದಾನದಲ್ಲಿ ವ್ಯಯ ಮಾಡಬೇಕು.

೫೧. ಯಾರು ಆ ಹಣವನ್ನು ಕಾಪಾಡುತ್ತಾರೋ ಅವರು ದುಃಖಪಡುತ್ತಲಿದ್ದು, ಕೊನೆಯಲ್ಲಿ ಎಲ್ಲಾ ಹಣವನ್ನೂ ಬಿಟ್ಟು ಹೋಗುತ್ತಾರೆ.

ಮಾನವಾ ಯೇ ಸದಾ ದಾನಂ ದತ್ವಾ ದತ್ವಾ ದರಿದ್ರತಿ ।
ದರಿದ್ರಾಸ್ತೇ ನ ವಿಜ್ಞೇಯಾ ನರಲೋಕೇ ಮಹೇಶ್ವರಾಃ ॥ ೫೨ ॥

ಪರಲೋಕೇ ದ್ವಿಜವ್ಯಾಘ್ರ ಸಾಧುಸಂಯಮವರ್ಜಿತೇ ।
ನಿರ್ದಯೇ ಬಂಧುಹೀನೇ ಚ ನ ದತ್ತಂ ನೋಪತಿಷ್ಠತೇ ॥ ೫೩ ॥

ಸ್ಥಿತೇ ಧನೇ ನರೋ ಯೋ ವೈ ನಾಶ್ನಾತಿ ನ ದದಾತಿ ಸಃ ।
ದರಿದ್ರ ಇವ ವಿಜ್ಞೇಯಃ ಪ್ರೇತ್ಯ ನಿಶ್ವಾಸಮುತ್ಸೃಜೇತ್ ॥ ೫೪ ॥

ತಪಸೋಽಪಿ ಪರಂ ದಾನಂ ಪ್ರೋಕ್ತಂ ಚ ತತ್ತ್ವದರ್ಶಿಭಿಃ ।
ಅತೋ ಯತ್ನಾದ್ದ್ವಿಜಶ್ರೇಷ್ಠ ದಾನಕರ್ಮ ಸಮಾಚರೇತ್ ॥ ೫೫ ॥

ದಾತಾ ದಾನಂ ನ ದದ್ಯಾದ್ವೈ ಸಮುತ್ಸೃಜ್ಯ ದ್ವಿಜಾತಯೇ ।
ಸ ಯಾತಿ ನರಕಂ ಘೋರಂ ಸರ್ವಜಂತುಭಯಾವಹಂ ॥ ೫೬ ॥

ದಾನಂ ದಾದಾತಾ ಪ್ರತಿಗ್ರಾಹೀ ನ ಸ್ಮರೇಚ್ಚ ನ ಯಾಚತೇ ।
ನಿರಯೇ ಚೋಭಯೋರ್ವಾಸೋ ಯಾವಚ್ಚಂದ್ರದಿವಾಕರೌ ॥ ೫೭ ॥

---

೫೨. ಯಾವ ಮನುಷ್ಯನು ದಾನ ಕೊಟ್ಟು ಕೊಟ್ಟು ದರಿದ್ರನಾಗುತ್ತಾನೋ ಅವನು ದರಿದ್ರನಲ್ಲ. ನರಲೋಕದಲ್ಲಿ ಅವನೇ ಮಹೇಶ್ವರನು.

೫೩. ಸಾಧುಗಳು, ನಿಯಮಗಳು, ಬಂಧುಗಳು ಇಲ್ಲದ ಪರಲೋಕದಲ್ಲಿ ದಾನ ಮಾಡದಿರುವುದು ಬರುವುದಿಲ್ಲ.

೫೪. ಹಣವಿರುವಾಗ ತಿನ್ನದೆ, ದಾನಮಾಡದೆ ಇದ್ದವನು ಸತ್ತಮೇಲೆ ದರಿದ್ರನಂತೆ ನಿಟ್ಟುಸಿರುಬಿಡುತ್ತಾನೆ.

೫೫. ತತ್ವದರ್ಶಿಗಳು ತಪಸ್ಸಿಗಿಂತಲೂ ದಾನವು ಉತ್ತಮವೆಂದು ಹೇಳಿದ್ದಾರೆ ಆದ್ದರಿಂದ ದಾನ ಮಾಡಬೇಕು.

೫೬. ಯಾವನು ಬ್ರಾಹ್ಮಣನಿಗೆ ದಾನ ಮಾಡುವುದಿಲ್ಲವೋ ಅವನು ಭಯಂಕರವಾದ ಘೋರ ನರಕವನ್ನು ಹೊಂದುತ್ತಾನೆ.

೫೭. ದಾನಮಾಡುವವನು ದಾನವನ್ನು ಸ್ಮರಿಸಬಾರದು. ದಾನ ತೆಗೆದುಕೊಂಡವನು ದಾನವನ್ನು ಯಾಚಿಸಬಾರದು. ಹಾಗೆ ಸ್ಮರಿಸಿದರೆ, ಯಾಚಿಸಿದರೆ ಇಬ್ಬರೂ ಸೂರ್ಯಚಂದ್ರರಿರುವವರೆಗೆ ನರಕದಲ್ಲಿರುತ್ತಾರೆ.

ಬ್ರಹ್ಮಹತ್ಯಾದಿಪಾಪಾನಿ ಯಾನಿ ವೈ ದ್ವಿಜಸತ್ತಮ ।
ತಾನಿ ದಾನೇನ ಹನ್ಯಂತೇ ತಸ್ಮಾದ್ದಾನಂ ಸಮಾಚರೇತ್ ॥ ೫೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕ
ಸಂವಾದೇ ಚತುರ್ವಿಂಶತಿತಮೋಽಧ್ಯಾಯಃ

---

೫೮. ಬ್ರಹ್ಮಹತ್ಯಾದಿ ಪಾಪಗಳು ದಾನಮಾಡುವುದರಿಂದ ನಾಶವಾಗುತ್ತವೆ ಆದ್ದರಿಂದ ದಾನಮಾಡಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕ ಸಂವಾದದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ಪಂಚವಿಂಶೋಽಧ್ಯಾಯಃ



॥ ಶೌನಕ ಉವಾಚ ॥

ಶ್ರೀಪ್ರದಂ ವಿಷ್ಣುಚರಿತಂ ಸರ್ವೋಪದ್ರವನಾಶನಂ ।
ಸರ್ವಪಾಪಕ್ಷಯಕರಂ ದುಷ್ಟಗ್ರಹನಿವಾರಣಂ ॥ ೧ ॥

ವಿಷ್ಣುಸಾನ್ನಿಧ್ಯದಂ ಚೈವ ಚತುರ್ವರ್ಗಫಲಪ್ರದಂ ।
ಯಶ್ಶೃಣೋತಿ ನರೋ ಭಕ್ತ್ಯಾ ಚಾಂತೇ ಯಾತಿ ಹರೇರ್ಗೃಹಂ ॥ ೨ ॥

ನಾಮೋಚ್ಚಾರಣಮಾಹಾತ್ಮ್ಯಂ ಶ್ರೂಯತೇ ಮಹದದ್ಭುತಂ ।
ಯದುಚ್ಚಾರಣಮಾತ್ರೇಣ ನರೋ ಯಾಯಾತ್ಪರಂ ಪದಂ ॥ ೩ ॥

---

## ಇಪ್ಪತ್ತೈದನೆಯ ಅಧ್ಯಾಯವು.

೧-೨. ಶೌನಕನು ಹೇಳಿದನು :— ವಿಷ್ಣುಚರಿತ್ರೆಯು ಎಲ್ಲ ಕಷ್ಟಗಳನ್ನು ನಾಶಮಾಡುತ್ತದೆ. ಪಾಪಗಳನ್ನು ನಾಶಮಾಡುತ್ತದೆ. ದುಷ್ಟಗ್ರಹಗಳನ್ನು ನಿವಾರಿಸುತ್ತದೆ. ವಿಷ್ಣುವಿನ ಸಾನ್ನಿಧ್ಯವನ್ನು ಕೊಡುತ್ತದೆ. ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುತ್ತದೆ, ಭಕ್ತಿಯಿಂದ ಕೇಳಿದವನು ಸತ್ತಮೇಲೆ ಸ್ವರ್ಗವನ್ನು ಹೊಂದುತ್ತಾನೆ.

೩. ಹರಿಯ ನಾಮೋಚ್ಚಾರಣೆ ಮಾಡಿದರೆ ಆ ಮಹಿಮೆಯು ಬಹು ಅದ್ಭುತವಾದುದು. ಅದನ್ನು ಉಚ್ಚಾರ ಮಾಡಿದರೆ ಮನುಷ್ಯನು ಉತ್ತಮ ಗತಿಯನ್ನು ಹೊಂದುತ್ತಾನೆ. ಎಲೈ ಸೂತನೇ, ಆ ನಾಮಕೀರ್ತನದ ವಿಧಿಯನ್ನು ಹೇಳು.

ತದ್ವದಸ್ವಾಧುನಾ ಸೂತ ವಿಧಾನಂ ನಾಮಕೀರ್ತನೇ ।

॥ ಸೂತ ಉವಾಚ ॥

ಶೃಣು ಶೌನಕ ವಕ್ಷ್ಯಾಮಿ ಸಂವಾದಂ ಮೋಕ್ಷಸಾಧನಂ ।
ನಾರದಃ ಪೃಷ್ಟವಾನ್ಪೂರ್ವಂ ಕುಮಾರಂ ತದ್ವದಾಮಿ ತೇ ॥ ೪ ॥

ಏಕದಾ ಯಮುನಾತೀರೇ ನಿವಿಷ್ಟಂ ಶಾಂತಮಾನಸಂ ।
ಸನತ್ಕುಮಾರಂ ಪಪ್ರಚ್ಛ ನಾರದೋ ರಚಿತಾಂಜಲಿಃ ॥ ೫ ॥

ಶ್ರುತ್ವಾ ನಾನಾವಿಧಾನ್ ಧರ್ಮಾನ್ ಧರ್ಮವ್ಯತಿಕರಾಂಸ್ತಥಾ ॥ ೬ ॥

॥ ಶ್ರೀ ನಾರದ ಉವಾಚ ॥

ಯೋಽಸೌ ಭಗವತಾ ಪ್ರೋಕ್ತೋ ಧರ್ಮವ್ಯತಿಕರೋ ನೃಣಾಂ ।
ಕಥಂ ತಸ್ಯ ವಿನಾಶಸ್ಸ್ಯಾದುಚ್ಯತಾಂ ಭಗವತ್ಪ್ರಿಯ ॥ ೭ ॥

॥ ಶ್ರೀ ಸನತ್ಕುಮಾರ ಉವಾಚ ॥

ಶೃಣು ನಾರದ ಗೋವಿಂದಪ್ರಿಯ ಗೋವಿಂದಧರ್ಮವಿತ್ ।
ಯತ್ಪೃಷ್ಟಂ ಲೋಕನಿರ್ಮುಕ್ತಿಕಾರಣಂ ತಮಸಃ ಪರಂ ॥ ೮ ॥

---

೪. ಸೂತನು ಹೇಳಿದನು :— ಎಲೈ ! ಶೌನಕನೇ, ಮೋಕ್ಷಸಾಧನವಾದ ಸಂವಾದವನ್ನು ಹೇಳುತ್ತೇನೆ. ಕೇಳು. ನಾರದನು ಪೂರ್ವದಲ್ಲಿ ಸನತ್ಕುಮಾರಸ್ವಾಮಿಯನ್ನು ಕೇಳಿದನು. ಅದನ್ನು ಹೇಳುತ್ತೇನೆ. ಕೇಳು.

೫-೬. ಒಂದು ಸಾರಿ ಯಮುನಾ ತೀರದಲ್ಲಿ ಕೂತಿರುವ, ಶಾಂತಮನಸ್ಸುಳ್ಳ, ಸನತ್ಕುಮಾರನನ್ನು ನಾರದನು ಕೈಮುಗಿದುಕೊಂಡು ನಾನಾ ಬಗೆಯಾದ ಧರ್ಮಗಳನ್ನೂ ಅವುಗಳ ವ್ಯತ್ಯಾಸ ವಿಶೇಷಗಳನ್ನೂ ತಿಳಿಸೆಂದು ಕೇಳಿಕೊಂಡನು.

೭. ನಾರದನು ಹೇಳಿದನು :—ಎಲೈಭಗವತ್ಪ್ರಿಯನೇ, ಭಗವಂತನು ಹೇಳಿ ಧರ್ಮಸಂಬಂಧವನ್ನೂ ಅದರ ನಾಶವಾಗುವಿಕೆಯನ್ನೂ ಹೇಳು.

೮. ಸನತ್ಕುಮಾರನು ಹೇಳಿದನು :— ಗೋವಿಂದಪ್ರಿಯನೂ ಗೋವಿಂದ ಧರ್ಮವನ್ನು ತಿಳಿದ ನಾರದನೇ, ಕೇಳು ; ಮುಕ್ತಿಕಾರಣವೂ ಅಜ್ಞಾನಕ್ಕೆ ದೂರವೂ ಆದ ಧರ್ಮವನ್ನು ಹೇಳುತ್ತೇನೆ, ಕೇಳು.

**ಸರ್ವಾಚಾರವಿವರ್ಜಿತಾಃ ಶಠಧಿಯೋ ವ್ರಾತ್ಯಾ ಜಗದ್ವಂಚಕಾ**
**ದಂಭಾಹಂಕೃತಿಪಾನಪೈಶುನಪರಾಃ ಪಾಪಾಶ್ಚ ಯೇ ನಿಷ್ಠುರಾಃ ।**
**ಯೇ ಚಾನ್ಯೇ ಧನದಾರಪುತ್ರನಿರತಾಃ ಸರ್ವೇಽಧಮಾಸ್ತೇಽಪಿ ಹಿ**
**ಶ್ರೀಗೋವಿಂದಪದಾರವಿಂದಶರಣಾಃ ಶುದ್ಧಾ ಭವಂತಿ ದ್ವಿಜ ॥ ೯ ॥**

**ತಮಪಿ ದೇವಕರಂ ಕರುಣಾಕರಸ್ಥವಿರಜಂಗಮಮುಕ್ತಿಕರಂ ಪರಂ ।**
**ಅತಿಚರಂತ್ಯಪರಾಧಪರಾ ಜನಾ ಯ ಇಹ ತಾನ್ಪತಿ ಧ್ರುವನಾಮ ಹಿ॥೧೦॥**

**ಸರ್ವಾಪರಾಧಕೃದಪಿ ಮುಚ್ಯತೇ ಹರಿಸಂಶ್ರಯಃ ।**
**ಹರೇರಪ್ಯಪರಾಧಾನ್ಯಃ ಕುರ್ಯಾದ್ದ್ವಿಪದಪಾಂಸವಃ ॥ ೧೧ ॥**

**ನಾಮಾಶ್ರಯಃ ಕದಾಚಿತ್ಸ್ಯಾತ್ತರತ್ಯೇವ ಸ ನಾಮತಃ ।**
**ನಾಮ್ನೋ ಹಿ ಸರ್ವಸುಹೃದೋ ಹ್ಯಪರಾಧಾತ್ಪತತ್ಯಧಃ ॥ ೧೨ ॥**

**॥ ಶ್ರೀ ನಾರದ ಉವಾಚ ॥**

**ಕೇ ಕೇಽಪರಾಧಾ ವಿಪ್ರೇಂದ್ರ ನಾಮ್ನೋ ಭಗವತಃ ಕೃತಾಃ ।**

---

೯. ಆಚಾರ ಹೀನರು, ವಂಚಕರು, ಪತಿತರು, ಜಗತ್ತಿಗೆ ಮೋಸಮಾಡುವವರು, ಡಂಭ, ಅಹಂಕಾರ, ಕುಡಿತ, ಚಾಡಿಪರರು, ಪಾಪಿಗಳು, ಧನ ಹೆಂಡಿರುಗಳಲ್ಲಿ ಆಸಕ್ತರು ಯಾವ ಪಾಪಿಗಳೇ ಆಗಲಿ ಅವರೂ ಕೂಡ ಗೋವಿಂದನ ಪಾದಸ್ಮರಣೆ ಮಾಡಿದರೆ ಶುದ್ಧವಾಗುತ್ತಾರೆ.

೧೦. ದೇವತೆಯನ್ನಾಗಿ ಮಾಡುವ ಕರುಣಾಕರನಾದ, ಚರಾಚರಗಳಿಗೆ ಮುಕ್ತಿಪ್ರದನಾದ ಆ ಸ್ವಾಮಿಯನ್ನು ತಪ್ಪುಮಾಡುವ ಜನರು ತಿರಸ್ಕರಿಸುತ್ತಾರೆ. ನಿಶ್ಚಯವು. ಲೋಕದಲ್ಲಿ ವಿಖ್ಯಾತವಾದ ಆ ಹೆಸರನ್ನು ತಿರಸ್ಕರಿಸುತ್ತಾರೆ.

೧೧. ಹರಿಯನ್ನಾಶ್ರಯಿಸಿರುವವನು ಸರ್ವಾಪರಾಧ ಮಾಡಿದ್ದರೂ ಅವುಗಳಿಂದ ಬಿಡಲ್ಪಡುತ್ತಾನೆ. ವಿಪತ್ತುಗಳಿಂದ ಆವರಿಸಲ್ಪಟ್ಟವನು ಹರಿಗೂ ಅಪರಾಧ ಮಾಡುತ್ತಾನೆ. ಆ ಅಪರಾಧಗಳನ್ನು ಹರಿಯು ನಾಶಮಾಡುತ್ತಾನೆ.

೧೨. ನಾಮಗಳನ್ನು ಸ್ಮರಿಸುತ್ತಿದ್ದರೇನೆ ಅವನು ದುಃಖದಿಂದ ಪಾರಾಗಿ ಮೋಕ್ಷವನ್ನು ಹೊಂದುತ್ತಾನೆ. ಆ ನಾಮಗಳೇ ಸ್ನೇಹಿತರು. ಅಪರಾಧ ಮಾಡಿದರೆ ಅಧೋಗತಿ ಹೊಂದುತ್ತಾನೆ.

೧೩. ನಾರದನು ಹೇಳಿದನು :— ಭಗವಂತನ ನಾಮಗಳಲ್ಲಿ ಅಪರಾಧಗಳಾ

ವಿನಿಘ್ನಂತಿ ನೃಣಾಂ ಕೃತ್ಯಂ ಪ್ರಾಕೃತಂ ಹ್ಯಾನಯಂತಿ ಚ　　　　॥ ೧೩ ॥

॥ ಶ್ರೀ ಸನತ್ಕುಮಾರ ಉವಾಚ ॥

ಸತಾಂ ನಿಂದಾ ನಾಮ್ನಃ ಪರಮಮಪರಾಧಂ ವಿತನುತೇ
ಯತಃ ಖ್ಯಾತಿಂ ಯಾಂತಂ ಕಥಮು ಸಹತೇ ತದ್ವಿಗರ್ಹಾಂ ।
ಶಿವಸ್ಯ ಶ್ರೀವಿಷ್ಣೋರ್ಯ ಇಹ ಗುಣನಾಮಾದಿ ಸಕಲಂ
ಧಿಯಾ ಭಿನ್ನಂ ಪಶ್ಯೇತ್ಸ ಖಲು ಹರಿನಾಮಾಹಿತಕರಃ　　　　॥ ೧೪ ॥

ಗುರೋರವಜ್ಞಾ ಶ್ರುತಿಶಾಸ್ತ್ರನಿಂದನಂ
ತಥಾರ್ಥವಾದೋ ಹರಿನಾಮ್ನಿ ಕಲ್ಪನಂ ।
ನಾಮ್ನೋ ಬಲಾದ್ಯಸ್ಯ ಹಿ ಪಾಪಬುದ್ಧೀ
ರ್ನ ವಿದ ತೇ ತಸ್ಯ ಯಮೈರ್ಹಿ ಶುದ್ಧಿಃ　　　　॥ ೧೫ ॥

ಧರ್ಮವ್ರತತ್ಯಾಗಹುತಾದಿಸರ್ವ-
ಶುಭಕ್ರಿಯಾಸಾಮ್ಯಮಪಿ ಪ್ರಮಾದಃ ।
ಅಶ್ರದ್ಧದಾನೋ ವಿಮುಖೋಽಪ್ಯಶೃಣ್ವ-
ನ್ಯಶ್ಚೋಪದೇಶಃ ಶಿವನಾಮಾಪರಾಧಃ　　　　॥ ೧೬ ॥

---

ವ್ರವು? ಅವನ್ನು ಸ್ಮರಿಸಿದರೆ ಅವು ಹೇಗೆ ಪಾಪಗಳನ್ನು ನಾಶಮಾಡಿ ಕಾಣದಿ ರುವ ಸುಖವನ್ನು ತರುವುವು?

೧೪. ಸನತ್ಕುಮಾರನು ಹೇಳಿದನು :— ಸತ್ಪುರುಷರ ನಿಂದೆಯು ನಾಮಗಳಿಗೆ ಮಹಾಪರಾಧವನ್ನು ಮಾಡುತ್ತದೆ. ಖ್ಯಾತಿಯನ್ನು ಹೊಂದಿರುವ ಪುರುಷನನ್ನು ಸ್ಮರಿಸದೆ ಅವನನ್ನು ಹಳಿದರೂ ನಾಮಾಪರಾಧವಾಗುವುದು. ಯಾವನು ಗುಣ, ಹೆಸರು, ಕ್ರಿಯೆಗಳಿಂದ ಹರಿ ಶಿವರಿಗೆ ಭೇದವನ್ನು ತಿಳಿಸುತ್ತಾನೋ ಅವನು ಹರಿನಾಮಕ್ಕೆ ಶತ್ರುವು.

೧೫. ಗುರುವಿನ ತಿರಸ್ಕಾರ, ಶಾಸ್ತ್ರಗಳ ನಿಂದೆ, ಹರಿನಾಮಗಳಲ್ಲಿ ಅರ್ಥವಾದ ಕಲ್ಪನೆ. ಈ ನಾಮಾಪರಾಧಿಯಾದ ಪಾಪಿಗೆ ಯಮನಿಂದ ಶುದ್ಧಿಯಿಲ್ಲ.

೧೬. ಧರ್ಮವ್ರತಗಳನ್ನು ಬಿಡುವುದು, ಹೋಮ ಮೊದಲಾದ ಸಮಸ್ತ ಕ್ರಿಯೆಗಳೂ ಒಂದೇ ಎಂದು ತಿಳಿದು ಪ್ರಮಾದಪಡುವುದು, ಶ್ರದ್ಧೆಯಿಲ್ಲದಿರುವುದು, ಉಪದೇಶಗಳನ್ನು ವಿಮುಖವಾಗಿ ಕೇಳದಿರುವುದು, ಶಿವನಾಮಕ್ಕೆ ಅಪರಾಧ ಮಾಡುವುದು, ಇವೆಲ್ಲವೂ ನಾಮಾಪರಾಧಗಳು.

ಶ್ರುತ್ವಾಪಿ ನಾಮಮಾಹಾತ್ಮ್ಯಂ ಯಃ ಪ್ರೀತಿರಹಿತೋಽಧಮಃ ।
ಅಹಂಮಮಾದಿ ಪರಮೋ ನಾಮ್ನಿ ಸೋಽಪ್ಯಪರಾಧಕೃತ್ ॥ ೧೭ ॥

ಏವಂ ನಾರದ ಶಂಕರೇಣ ಕೃಪಯಾ ಮಹ್ಯಂ ಮುನೀನಾಂ ಪರಂ
ಪ್ರೋಕ್ತಂ ನಾಮ ಸುಖಾವಹಂ ಭಗವತೋ ವರ್ಜ್ಯಂ ಸದಾ ಯತ್ನತಃ ।
ಯೇ ಜ್ಞಾತ್ವಾಪಿ ನ ವರ್ಜಯಂತಿ ಸಹಸಾ ನಾಮ್ನೋಽಪರಾಧಾನ್ ದಶ
ಕ್ರುದ್ಧಾ ಮಾತರಮಪ್ಯಭೋಜನಪರಾಃ ಖಿದ್ಯಂತಿ ತೇ ಬಾಲವತ್ ॥ ೧೮ ॥

ಅಪರಾಧವಿಮುಕ್ತೋ ಹಿ ನಾಮ್ನಿ ಜಪ್ತಂ ಸದಾಚರ ।
ನಾಮ್ನೈವ ತವ ದೇವರ್ಷೇ ಸರ್ವಂ ಸೇತ್ಸ್ಯತಿ ನಾನ್ಯತಃ ॥ ೧೯ ॥

॥ ಶ್ರೀ ನಾರದ ಉವಾಚ ॥

ಸನತ್ಕುಮಾರ ಪ್ರಿಯ ಸಾಹಸಾನಾಂ
ವಿವೇಕವೈರಾಗ್ಯವಿವರ್ಜಿತಾನಾಂ ।
ದೇಹಪ್ರಿಯಾರ್ಥಾತ್ಮಪರಾಯಣಾನಾಂ
ಮುಕ್ತಾಪರಾಧಾಃ ಪ್ರಭವಂತಿ ನೋ ಕಥಂ ॥ ೨೦ ॥

---

೧೭. ನಾಮಮಹಿಮೆಯನ್ನು ಕೇಳಿದರೂ ಯಾವನು ಅದರಲ್ಲಿ ಪ್ರೀತಿ ತೋರುವುದಿಲ್ಲವೋ, ಅಹಂಕಾರದಿಂದಲೂ ಮಮಕಾರದಿಂದಲೂ ಕೂಡಿರುವನು, ಅವನು ನಾಮಾಪರಾಧಿಯು.

೧೮. ಎಲೈ! ನಾರದನೇ ಈ ರೀತಿಯಾಗಿ ನಾಮಸುಖವನ್ನೂ ಅದರಲ್ಲಿ ಬಿಡಬೇಕಾದುದನ್ನೂ ಶಂಕರನು ನನಗೆ ಹೇಳಿದನು. ಈ ಮೇಲೆ ಹೇಳಿದ ಹತ್ತು ಅಪರಾಧಗಳನ್ನು ಯಾರು ತಿಳಿದೂ ಬಿಡುವುದಿಲ್ಲವೋ ಅವರು ತಾಯಿಯ ಮೇಲೆ ಕೋಪಗೊಂಡು ಊಟಮಾಡದೆ ಹುಡುಗರು ದುಃಖಪಡುವಂತೆ ದುಃಖಿಸುತ್ತಾರೆ,

೧೯. ಅಪರಾಧಗಳನ್ನು ಮಾಡದೆ ನಾಮಜಪವನ್ನು ಯಾವಾಗಲೂ ಮಾಡು. ಆ ನಾಮಜಪಗಳಿಂದ ನಿನಗೆ ಎಲ್ಲವೂ ಸಿದ್ಧಿಸುತ್ತದೆ. ಮತ್ತೊಂದರಿಂದಿಲ್ಲ.

೨೦. ನಾರದನು ಹೇಳಿದನು:— ಎಲೈ ! ಸನತ್ಕುಮಾರನೇ, ಪೌರುಷವಂತರಾದ, ವಿವೇಕ ವೈರಾಗ್ಯಗಳಿಲ್ಲದ ದೇಹ, ಪ್ರಿಯೆ, ಅರ್ಥಗಳಲ್ಲಿ ಆಸಕ್ತರಾದವರು ಅಪರಾಧವನ್ನು ಹೇಗೆ ಮಾಡುವುದಿಲ್ಲ? ನಾಮಾಪರಾಧವು.

॥ ಶ್ರೀ ಸನತ್ಕುಮಾರ ಉವಾಚ ॥

ಜಾತೇ ನಾಮಾಪರಾಧೇ ತು ಪ್ರಮಾದೇ ತು ಕಥಂಚನ ।
ಸದಾ ಸಂಕೀರ್ತಯನ್ನಾಮ ತದೇಕಶರಣೋ ಭವೇತ್ ॥ ೨೧ ॥

ನಾಮಾಪರಾಧಯುಕ್ತಾನಿ ನಾಮಾನ್ಯೇವ ಹರಂತ್ಯಘಂ ।
ಅವಿಶ್ರಾಂತಿಪ್ರಯುಕ್ತಾನಿ ತಾನ್ಯೇವಾರ್ಥಕರಾಣಿ ಯತ್ ॥ ೨೨ ॥

ನಾಮೈಕಂ ಯಸ್ಯ ಚಿಹ್ನಂ ಸ್ಮರಣಪಥಗತಂ ಶ್ರೋತ್ರಮೂಲಂ ಗತಂ ವಾ
ಶುದ್ಧಂ ವಾಶುದ್ಧವರ್ಣಂ ವ್ಯವಹಿತರಹಿತಂ ತಾರಯತ್ಯೇವ ಸತ್ಯಂ ।
ತಚ್ಚೇದ್ದೇಹದ್ರವಿಣಜನಿತಾಲೋಭಪಾಷಂಡಮಧ್ಯೇ
ನಿಕ್ಷಿಪ್ತಂ ಸ್ಯಾನ್ನ ಫಲಜನಕಂ ಶೀಘ್ರಮೇವಾತ್ರ ವಿಪ್ರ ॥ ೨೩ ॥

ಇದಂ ರಹಸ್ಯಂ ಪರಮಂ ಪುರಾ ನಾರದ ಶಂಕರಾತ್ ।
ಶ್ರುತಂ ಸರ್ವಾಶುಭಹರಮಪರಾಧನಿವಾರಕಂ ॥ ೨೪ ॥

ವಿಷ್ಣೋರ್ನಾಮಾಭಿಧಾನಂ ಯೇ ಹ್ಯಪರಾಧಪರಾ ನರಾಃ ।
ತೇಷಾಮಪಿ ಭವೇನ್ಮುಕ್ತಿಃ ಪಠನಾದೇವ ನಾರದ ॥ ೨೫ ॥

---

೨೧. ಸನತ್ಕುಮಾರನು ಹೇಳಿದನು :— ಪ್ರಮಾದದಿಂದ ನಾಮಾಪರಾಧವಾದರೆ ಯಾವಾಗಲೂ ನಾಮಸ್ಮರಣೆ ಮಾಡುತ್ತಲೇ ಇರಬೇಕು. ಅದಕ್ಕೇ ಶರಣು ಹೊಂದಬೇಕು.

೨೨. ನಾಮಾಪರಾಧಗಳನ್ನು ನಾಮಗಳೇ ಪರಿಹರಿಸುತ್ತವೆ. ಎಡಬಿಡದೆ ಸ್ಮರಣೆ ಮಾಡಿದ ಆ ನಾಮಗಳೇ ಪ್ರಯೋಜನ ಕೊಡುತ್ತವೆ.

೨೩. ಸ್ವಾಮಿಯ ಹೆಸರಿನ ಚಿಹ್ನೆ ಯಾವ ನಾಮವು ಸ್ಮರಣಕ್ಕೆ ಬಂದರೂ, ಕಿವಿಯಲ್ಲಿ ಕೇಳಿದರೂ, ಅದು ಶುದ್ಧವಾಗಲಿ ಅಶುದ್ಧವಾಗಲಿ ವ್ಯವಧಾನವಿಲ್ಲದೆ ಉಚ್ಚರಿಸಿದರೆ ಖಂಡಿತವಾಗಿಯೂ ಕಾಪಾಡುತ್ತದೆ. ಆ ನಾಮವನ್ನು ದೇಹ, ಹಣಗಳ ಲೋಭದಲ್ಲಿ ಸೇರಿಸಿದರೂ ಪಾಷಂಡರ ಮಧ್ಯದಲ್ಲಿ ಉಚ್ಚರಿಸಿದರೂ ಅದು ಫಲದಾಯಕವಲ್ಲ.

೨೪. ಈ ರಹಸ್ಯವನ್ನು ಪೂರ್ವದಲ್ಲಿ ಶಂಕರನಿಂದ ಕೇಳಿರುವೆನು. ಇದು ಸರ್ವ ಅಶುಭಗಳನ್ನು ನಾಶಮಾಡುತ್ತದೆ. ಅಪರಾಧಗಳನ್ನು ನಾಶಮಾಡುತ್ತದೆ.

೨೫. ಅಪರಾಧಿಗಳಾದ ನರರು ವಿಷ್ಣುನಾಮವನ್ನು ಓದಿದರೆ ಅದರ ಪಠನದಿಂದ ಅವರಿಗೂ ಮುಕ್ತಿಯಾಗುತ್ತದೆ.

ನಾಮ್ನೋ ಮಾಹಾತ್ಮ್ಯಮಖಿಲಂ ಪುರಾಣೇ ಪರಿಗೀಯತೇ ।
ತತಃ ಪುರಾಣಮಖಿಲಂ ಶ್ರೋತುಮರ್ಹಸಿ ನಾರದ ॥ ೨೬ ॥

ಪುರಾಣಶ್ರವಣೇ ಶ್ರದ್ಧಾ ಯಸ್ಯ ಸ್ಯಾದ್ಭ್ರಾತರನ್ವಹಂ ।
ತಸ್ಯ ಸಾಕ್ಷಾತ್ಪ್ರಸನ್ನಸ್ಸ್ಯಾಚ್ಛಿವೋ ವಿಷ್ಣುಶ್ಚ ಸಾನುಗಃ ॥ ೨೭ ॥

ಯತ್ಸ್ನಾತ್ವಾ ಪುಷ್ಕರೇ ತೀರ್ಥೇ ಪ್ರಯಾಗೇ ಸಿಂಧುಸಂಗಮೇ ।
ತತ್ಫಲಂ ದ್ವಿಗುಣಂ ತಸ್ಯ ಶ್ರದ್ಧಯಾ ವೈ ಶೃಣೋತಿ ಯಃ ॥ ೨೮ ॥

ಯೇ ಪಠಂತಿ ಪುರಾಣಾನಿ ಶೃಣ್ವಂತಿ ಚ ಸಮಾಹಿತಾಃ ।
ಪ್ರತ್ಯಕ್ಷರಂ ಲಭಂತ್ಯೇತೇ ಕಪಿಲಾದಾನಜಂ ಫಲಂ ॥ ೨೯ ॥

ಅಪುತ್ರೋ ಲಭತೇ ಪುತ್ರಂ ಧನಾರ್ಥೀ ಲಭತೇ ಧನಂ ।
ವಿದ್ಯಾರ್ಥೀ ಲಭತೇ ವಿದ್ಯಾಂ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥

ಯೇ ಶೃಣ್ವಂತಿ ಪುರಾಣಾನಿ ಕೋಟಿಜನ್ಮಾರ್ಜಿತಂ ಖಲು ।
ಪಾಪಜಾಲಂ ತು ತೇ ಹಿತ್ವಾ ಗಚ್ಛಂತಿ ಹರಿಮಂದಿರಂ ॥ ೩೦ ॥

---

೨೬. ನಾಮಗಳ ಮಹಿಮೆಯು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಪುರಾಣಗಳನ್ನೆಲ್ಲಾ ಕೇಳು.

೨೭. ಪುರಾಣದಲ್ಲಿ ಶ್ರದ್ಧೆ ಯಾವನಿಗೆ ಇದೆಯೋ ಅವನಿಗೆ ಶಿವನೂ ವಿಷ್ಣುವೂ ಪರಿವಾರಗಳೊಡನೆ ಪ್ರಸನ್ನರಾಗುವರು.

೨೮. ಪುಷ್ಕರ, ಪ್ರಯಾಗ, ಸಿಂಧು ಸಂಗಮಗಳಲ್ಲಿ ಸ್ನಾನ ಮಾಡಿದರೆ ಬರುವ ಪುಣ್ಯದ ಎರಡರಷ್ಟು ಶ್ರದ್ಧೆಯಿಂದ ಕೇಳಿದವನಿಗೆ ಬರುತ್ತದೆ.

೨೯. ಪುರಾಣವನ್ನು ಕೇಳಿದರೂ ಓದಿದರೂ ಒಂದೊಂದು ಅಕ್ಷರಕ್ಕೂ ಕಪಿಲಾ ಗೋವನ್ನು ದಾನಮಾಡಿದ ಫಲವನ್ನು ಹೊಂದುತ್ತಾನೆ.

೩೦. ಪುರಾಣವನ್ನು ಕೇಳಿದರೆ ಮಕ್ಕಳಿಲ್ಲದವನು ಮಕ್ಕಳನ್ನೂ, ಧನವಿಲ್ಲದವನು ಧನವನ್ನೂ, ವಿದ್ಯಾರ್ಥಿಯು ವಿದ್ಯೆಯನ್ನೂ, ಮೋಕ್ಷಾರ್ಥಿಯು ಮೋಕ್ಷವನ್ನೂ, ಹೊಂದುತ್ತಾನೆ.

೩೧. ಪುರಾಣವನ್ನು ಕೇಳಿದವನು ಕೋಟಿಜನ್ಮದ ಪಾಪಗಳನ್ನು ಕಳೆದುಕೊಂಡು ಹರಿಯ ಮನೆಗೆ ಹೋಗುತ್ತಾನೆ.

ಪುರಾಣವಾಚಕಂ ವಿಪ್ರಂ ಪೂಜಯೇದ್ಭಕ್ತಿಭಾವತಃ ।
ಗೋಭೂಹಿರಣ್ಯವಸ್ತ್ರೈಶ್ಚ ಗಂಧಪುಷ್ಪಾದಿಭಿರ್ಮುನೇ ॥ ೩೨ ॥

ಕಾಂಸ್ಯೈರ್ವಿನಿರ್ಮಿತಂ ಪಾತ್ರಂ ಜಲಪಾತ್ರಂ ಮುದಾನ್ವಿತಃ ।
ಕರ್ಣಕುಂಡಲಕಂ ಚೈವ ಮುದ್ರಿಕಾಂ ಸ್ವರ್ಣನಿರ್ಮಿತಾಂ ॥ ೩೩ ॥

ಆಸನಂ ತು ತಥಾ ದದ್ಯಾತ್ಸ್ಪಷ್ಟಂ ಮಾಲ್ಯಂ ತಪೋಧನ ।
ವಿತ್ತಶಾಠ್ಯಂ ನ ಕುರ್ವೀತ ದಾನಂ ಹೀನಫಲಂ ಯತಃ ॥ ೩೪ ॥

ಪುರಾಣಂ ವಾಚಯೇದ್ವಿಪ್ರ ಸರ್ವಕಾಮಾರ್ಥಸಿದ್ಧಯೇ ।
ಸುವರ್ಣಂ ರಜತಂ ವಸ್ತ್ರಂ ಪುಷ್ಪಮಾಲ್ಯಂ ಚ ಚಂದನಂ ।
ದದ್ಯಾದ್ಯಃ ಪುಸ್ತಕಂ ಭಕ್ತ್ಯಾ ಸ ಗಚ್ಛೇದ್ಧರಿಮಂದಿರಂ ॥ ೩೫ ॥

ಕುರ್ವಂತಿ ವಿಧಿನಾನೇನ ಸಂಪೂರ್ಣಂ ಪುಸ್ತಕಂ ಚ ಯೇ ।
ತೇಷಾಂ ನಾಮಾನಿ ಲಿಂಪೇತ ಚಿತ್ರಗುಪ್ತೋಽರ್ಚನಾದ್ದ್ವಿಜ ॥ ೩೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕ
ಸಂವಾದೇ ಪಂಚವಿಂಶತಿತಮೋಽಧ್ಯಾಯಃ

---

೩೨. ಪುರಾಣ ಓದುವವನನ್ನು ಭಕ್ತಿಯಿಂದ ಪೂಜಿಸಿ ಗೋ ಭೂಹಿರಣ್ಯಗಳನ್ನು ಕೊಡಬೇಕು. ಹೂವು ಗಂಧಗಳಿಂದ ಪೂಜಿಸಬೇಕು.

೩೩. ಕಂಚಿನ ಜಲಪಾತ್ರೆಯನ್ನೂ, ಕುಂಡಲಗಳನ್ನೂ, ಚಿನ್ನದ ಉಂಗುರವನ್ನೂ ಕೊಡಬೇಕು.

೩೪. ಆಸನವನ್ನೂ, ಹೂಮಾಲೆಯನ್ನೂ ಕೊಡಬೇಕು. ದುಡ್ಡಿನಲ್ಲಿ ಲೋಭ ಮಾಡಬಾರದು. ದುಡ್ಡಿನಲ್ಲಿ ಲೋಭಮಾಡಿದರೆ ಫಲವು ಹೀನವಾಗುತ್ತದೆ.

೩೫. ಸಕಲ ಇಷ್ಟಸಿದ್ಧಿಗಳಿಗೋಸ್ಕರ ಪುರಾಣವನ್ನು ಓದಿಸಬೇಕು. ಅವನಿಗೆ ಚಿನ್ನ, ಬೆಳ್ಳಿ, ಬಟ್ಟೆ, ಹೂ, ಗಂಧಗಳನ್ನು ಕೊಟ್ಟರೆ ಹರಿಮಂದರಕ್ಕೆ ಹೋಗುತ್ತಾನೆ.

೩೬. ವಿಧಿವತ್ತಾಗಿ ಪುಸ್ತಕವನ್ನು ಸಂಪೂರ್ಣ ಮಾಡಿದವರ ಹೆಸರನ್ನು ಚಿತ್ರಗುಪ್ತನು ಬರೆದುಕೊಳ್ಳುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕ ಸಂವಾದದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ

### ಷಡ್ವಿಂಶೋಽಧ್ಯಾಯಃ

॥ ಶೌನಕ ಉವಾಚ ॥

ಶ್ರೋತುಮಿಚ್ಛಾಮಿ ತೇ ಪ್ರಾಜ್ಞ ಕಥಯಸ್ವ ಸಮೂಲಕಂ ।
ಪ್ರತಿಜ್ಞಾಪಾಲನೇ ಪುಣ್ಯಂ ಖಂಡನೇ ಕಿಂ ಚ ಕಿಲ್ಬಿಷಂ ॥ ೧ ॥

ಅನೃತೇ ಶಪಥೇ ಕಿಂ ವಾ ಸತ್ಯೇ ಕಿಂಚಿದ್ಭವೇನ್ಮುನೇ ।
ದಕ್ಷಿಣಂ ಕಿಂ ಕರಂ ದತ್ವಾ ಕೃಪಾಂ ಕೃತ್ವಾ ಕೃಪಾರ್ಣವ ॥ ೨ ॥

॥ ಸೂತ ಉವಾಚ ॥

ಶೃಣುಷ್ವ ಮುನಿಶಾರ್ದೂಲ ಕಥಯಾಮಿ ಸಮೂಲತಃ ।
ವೈಷ್ಣವಾನಾಂ ತ್ವಮುಗ್ರ್ಯೋಽಸಿ ಸರ್ವಲೋಕಹಿತೇ ರತಃ ॥ ೩ ॥

---

### ಇಪ್ಪತ್ತಾರನೆಯ ಅಧ್ಯಾಯವು.

೧. ಶೌನಕನು ಹೇಳಿದನು :— ಪ್ರತಿಜ್ಞೆಯನ್ನು ಕಾಪಾಡಿದರೆ ಬರುವ ಪುಣ್ಯವನ್ನೂ, ಪಾಲಿಸದಿದ್ದಲ್ಲಿ ಬರುವ ಪಾಪಗಳನ್ನೂ ತಿಳಿಸು. ಅದನ್ನು ತಿಳಿಯಲು ಕುತೂಹಲಪಡುತ್ತೇನೆ.

೨. ಪ್ರತಿಜ್ಞೆಯು ಸುಳ್ಳಾದರೆ ಬರುವ ದೋಷವನ್ನೂ, ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡುವುದರಿಂದ ಬರುವ ಪುಣ್ಯವನ್ನೂ ದಯೆಮಾಡಿ ಹೇಳು. ಬಲಗೈ ಮೇಲೆ ಬಲಗೈಯನ್ನು ಹಾಕಿ ಪ್ರತಿಜ್ಞೆ ಮಾಡುವುದರಿಂದ ಬರುವುದೇನು ?ಹೇಳು.

೩. ಸೂತನು ಹೇಳಿದನು :— ಎಲೈ ! ಶೌನಕನೇ, ನೀನು ವೈಷ್ಣವರಲ್ಲಿ ಶ್ರೇಷ್ಠನಾಗಿದ್ದೀಯೆ. ಮೊದಲಿನಿಂದ ಹೇಳುವೆನು ; ಕೇಳು.

ಧೇನೂನಾಂ ತು ಶತಂ ದತ್ವಾ ಯತ್ಫಲಂ ಲಭತೇ ನರಃ ।
ತಸ್ಮಾತ್ಪುಣ್ಯಂ ಕೋಟಿಗುಣಂ ಪ್ರತಿಜ್ಞಾಪಾಲನೇ ದ್ವಿಜ ॥ ೪ ॥

ಪ್ರತಿಜ್ಞಾಖಂಡನಾನ್ಮೂಢೋ ನಿರಯಂ ಯಾತಿ ದಾರುಣಂ ।
ಶತಮನ್ವಂತರಂ ಯಾವತ್ಪಚ್ಯತೇ ನಾತ್ರ ಸಂಶಯಃ ॥ ೫ ॥

ತತೋಽತ್ರ ಜನ್ಮ ಚಾಸಾದ್ಯ ನಿರ್ಧನಸ್ಯ ನಿಕೇತನೇ ।
ಅನ್ನವಸ್ತ್ರೈರ್ವಿಹೀನಸ್ಸ್ಯಾತ್ ಕ್ಲೇಶೀ ಚಾಪಿ ಸ್ವಕರ್ಮಣಾ ॥ ೬ ॥

ಸತ್ಯೇನ ಶಪಥಂ ಕುರ್ಯಾದ್ದೇವಾಗ್ನಿಗುರುಸಂನಿಧೌ ।
ತಾವದ್ದಹತಿ ವೈ ಗೋತ್ರಂ ವಿಷ್ಣೋರ್ವಂಶೋ ನ ಲುಪ್ಯತೇ ॥ ೭ ॥

ಮಿಥ್ಯಾಯಾಂ ಶಪಥೇ ವಿಪ್ರ ಕಿಮಹಂ ವಚ್ಮಿ ಸಾಂಪ್ರತಂ ।
ಸತ್ಯೇ ಚೈವಂ ಭವೇತ್ಪಾಪಮನೃತೇ ಶಪಥೇ ಕಿಮು ॥ ೮ ॥

ಸತ್ಯೇನ ಶ್ರೀಹರೇರ್ಗೋತ್ರಂ ಸ್ಪೃಷ್ಟ್ವಾ ಯಾತ್ಯತಿದಾರುಣಂ ।
ಶತಮನ್ವಂತರಂ ವಿಪ್ರ ನಿರಯಂ ಮಿಥ್ಯಯಾ ಕಿಮು ॥ ೯ ॥

---

೪. ನೂರು ಗೋವುಗಳನ್ನು ಕೊಟ್ಟರೆ ಬರುವ ಪುಣ್ಯಕ್ಕಿಂತ ಕೋಟಿಯಷ್ಟು ಪುಣ್ಯವು ಪ್ರತಿಜ್ಞೆಯನ್ನು ಪಾಲಿಸುವುದರಿಂದ ಬರುತ್ತದೆ.

೫. ಪ್ರತಿಜ್ಞೆಯನ್ನು ನಾಶಮಾಡಿಕೊಳ್ಳುವುದರಿಂದ ದಾರುಣವಾದ ನರಕವನ್ನು ಹೊಂದುತ್ತಾನೆ. ನೂರು ಮನ್ವಂತರಗಳವರೆಗೂ ನರಕದಲ್ಲಿರುತ್ತಾನೆ. ಸಂಶಯವಿಲ್ಲ.

೬. ಆ ಮೇಲೆ ಇಲ್ಲಿ ಬಡವನ ಮನೆಯಲ್ಲಿ ಹುಟ್ಟಿ, ಅನ್ನವಸ್ತ್ರಗಳಿಲ್ಲದೆ ತನ್ನ ಕರ್ಮದಿಂದ ಕ್ಲೇಶಪಡುತ್ತಾನೆ.

೭. ಸತ್ಯದ ವಿಷಯವನ್ನು ದೇವರು, ಅಗ್ನಿ, ಗುರುಗಳ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡಬಾರದು ಮಾಡಿದರೆ ಗೋತ್ರವನ್ನೇ ದಹಿಸುತ್ತದೆ. ಆದರೆ ವೈಷ್ಣವ ಗೋತ್ರವು ನಾಶವಾಗುವುದಿಲ್ಲ.

೮. ಸುಳ್ಳನ್ನು ಪ್ರತಿಜ್ಞೆಮಾಡಿದರೆ ನಾನು ಹೇಳಬೇಕಾದದ್ದೇನಿದೆ ? ಸತ್ಯದಿಂದಲೇ ಪಾಪಸಂಘಟನವಿರುವಾಗ ಸುಳ್ಳಿನಲ್ಲಿ ಹೇಳಬೇಕಾದ್ದೇನೂ ಇಲ್ಲ.

೯. ಹರಿಯನ್ನು ಮುಟ್ಟಿ ಸತ್ಯವನ್ನು ಪ್ರತಿಜ್ಞೆ ಮಾಡಿದರೆ ಅವನ ಗೋತ್ರವೇ

**ನಿರ್ಮಾಲ್ಯಂ ಶ್ರೀಹರೇಃ ಸ್ಪೃಷ್ಟ್ವಾ ಸತ್ಯೇನ ಮುನಿಪುಂಗವ ।**
**ಗೃಹೀತ್ವಾ ಪುರುಷಾನ್ಸಪ್ತ ಪಚ್ಯತೇ ನಿರಯೇ ಚಿರಂ ॥ ೧೦ ॥**

**ಕದಾಚಿಜ್ಜನ್ಮ ಸಂಪ್ರಾಪ್ಯ ಕುಷ್ಠೀ ಚ ಪ್ರತಿಜನ್ಮನಿ ।**
**ಸತ್ಯೇನೈವಂ ಭವೇದ್ವಿಪ್ರ ಅನೃತೇ ವೈ ಕಿಮುಚ್ಯತೇ ॥ ೧೧ ॥**

**ಯೋ ಮರ್ತ್ಯೋ ದಕ್ಷಿಣಂ ದತ್ವಾ ಕರಂ ತತ್ಪ್ರತಿಪಾಲಯೇತ್ ।**
**ತಸ್ಯ ಪ್ರಾಪ್ತಿರ್ಭವೇತ್ಕೃಷ್ಣಃ ಸತ್ಯಂ ಸತ್ಯಂ ವದಾಮ್ಯಹಂ ॥ ೧೨ ॥**

**ಕರಂ ದತ್ವಾ ತು ಯೋ ಮರ್ತ್ಯೋ ವಚನಸ್ಯ ಚ ಪಾಲನಂ ।**
**ಯಾವನ್ನ ಕುರ್ಯಾತ್ಪಿತರಃ ಪ್ರಾಪ್ನುವಂತಿ ಚ ಯಾತನಾಂ ॥ ೧೩ ॥**

**ಸ್ವಯಂ ತು ಮುನಿಶಾರ್ದೂಲ ನಿರಯಂ ಯಾತಿ ದಾರುಣಂ ।**
**ಉದ್ಧಾರಂ ಕೋಟಿಕಲ್ಪಾಂತೇ ಮೃತೋ ಯಾತಿ ನ ಸಂಶಯಃ ॥ ೧೪ ॥**

---

ಬಹು ದುಃಖವನ್ನು ನೂರು ಮನ್ವಂತರಗಳವರೆಗೂ ಹೊಂದುತ್ತದೆ. ಸುಳ್ಳಿನಿಂದ ಹೇಳಬೇಕಾದ್ದೇ ಇಲ್ಲ.

೧೦. ಶ್ರೀಹರಿಯ ನಿರ್ಮಾಲ್ಯವನ್ನು ಮುಟ್ಟಿ ಪ್ರತಿಜ್ಞೆ ಮಾಡಿದರೆ ತನ್ನ ಏಳು ತಲೆಯವರನ್ನು ತೆಗೆದುಕೊಂಡು ನರಕಭಾಗಿಯಾಗುತ್ತಾನೆ.

೧೧. ಆಮೇಲೆ ಯಾವಾಗಲೋ ಜನ್ಮ ಹೊಂದಿ ಜನ್ಮ ಜನ್ಮಕ್ಕೂ ಕುಷ್ಠ ರೋಗವುಳ್ಳವನಾಗುತ್ತಾನೆ. ಸತ್ಯದಿಂದ ಹೀಗಾಗುತ್ತದೆ. ಸುಳ್ಳಿನಿಂದ ಹೇಳತಕ್ಕದ್ದೇನಿದೆ ?

೧೨. ಯಾವನು ಕೈಯಲ್ಲಿ ಕೈಹಾಕಿ ಪ್ರತಿಜ್ಞೆ ಕೊಡುತ್ತಾನೋ ಮತ್ತು ಅದನ್ನು ಪಾಲಿಸುತ್ತಾನೋ ಅವನಿಗೆ ಕೃಷ್ಣನು ಪ್ರತ್ಯಕ್ಷನಾಗುತ್ತಾನೆ. ಸತ್ಯವನ್ನು ಹೇಳುತ್ತೇನೆ.

೧೩. ಕೈಗೆ ಕೈಹಾಕಿ, ಪ್ರತಿಜ್ಞೆಯನ್ನು ಪಾಲಿಸದಿದ್ದರೆ ಅವರ ಪಿತೃಗಳೂ ಕೂಡ ನರಕಯಾತನೆಯನ್ನು ಅನುಭವಿಸುತ್ತಾರೆ.

೧೪. ತಾನಂತೂ ನರಕವನ್ನು ಹೊಂದಿಯೇ ಹೊಂದುತ್ತಾನೆ. ಕೋಟಿ ಕಲ್ಪಗಳ ಕೊನೆಯಲ್ಲಿಯಾದರೂ ಉದ್ಧಾರವಾಗುತ್ತಾನೋ ಇಲ್ಲವೋ ಗೊತ್ತಿಲ್ಲ.

॥ ಶೌನಕ ಉವಾಚ ॥

ಕೃಷ್ಣಪ್ರಾಪ್ತಿಃ ಪುರಾ ಕಸ್ಯ ಕರಸ್ಯ ಪರಿಪಾಲನಾತ್ ।
ದಕ್ಷಿಣಸ್ಯ ಮುನೇ ಬ್ರೂಹಿ ಶ್ರೋತುಮಿಚ್ಛಾಮಿ ಸಾದರಾತ್ ॥ ೧೫ ॥

॥ ಸೂತ ಉವಾಚ ॥

ಪುರಾ ಕಾಂಚೀಪುರೇ ಶೂದ್ರೋ ನಾಮ್ನಾಸೀದ್ವೀರವಿಕ್ರಮಃ ।
ಬಹ್ವಾಶೀ ಪೃಥುಲಾಂಗಶ್ಚ ಬಹುವಕ್ತಾತಿಸುಂದರಃ ॥ ೧೬ ॥

ಧನವಾನ್ಪುತ್ರವಾನ್ಸಭ್ಯೋ ವಿದ್ವಾನ್ಸರ್ವಜನಪ್ರಿಯಃ ।
ವಿಪ್ರಾಣಾಮತಿಥೀನಾಂ ಚ ಪೂಜಕಃ ಸರ್ವದೈವ ತು ॥ ೧೭ ॥

ಪಿತೃಭಕ್ತೋ ದ್ವಿಜಶ್ರೇಷ್ಠ ಪ್ರತಿಜ್ಞಾಪಾಲಕಸ್ಸದಾ ।
ವಾಚಾಂ ಗುರುಜನಾನಾಂ ಚ ಪಾಲಕೋ ಹರಿಸೇವಕಃ ॥ ೧೮ ॥

ಏಕದಾ ಸುಂದರೋ ಗೇಹಂ ಶ್ವಪಚಸ್ತಸ್ಯ ಛದ್ಮನಾ ।
ಪ್ರಾಪ್ತೋ ಧೃತ್ವಾ ಬ್ರಾಹ್ಮಣಸ್ಯ ರೂಪಂ ವೈ ತರುಣಃ ಸುಧೀಃ ॥ ೧೯ ॥

---

೧೫. ಶೌನಕನು ಕೇಳಿದನು:—ಎಲೈ ಋಷಿಯೇ ಬಲಗೈ ಮೇಲೆ ಬಲಗೈಯನ್ನು ಹಾಕಿ ಆ ಪ್ರತಿಜ್ಞೆಯನ್ನು ಪಾಲಿಸುವುದರಿಂದ ಯಾರಿಗೆ ಕೃಷ್ಣನು ಪ್ರತ್ಯಕ್ಷನಾಗಿದ್ದೇನೆ? ಎಂಬುದನ್ನು ಕೇಳಲಿಚ್ಛಿಸುತ್ತೇನೆ. ಹೇಳು.

೧೬. ಸೂತನು ಹೇಳಿದನು :— ಪೂರ್ವದಲ್ಲಿ ಕಾಂಚೀಪುರದಲ್ಲಿ ವೀರವಿಕ್ರಮನೆಂಬ ಶೂದ್ರನಿದ್ದನು. ಅವನು ಹೊಟ್ಟೆಬಾಕನು. ಮೈ ಬಹು ದಪ್ಪ. ಸುಂದರನು. ಬಹುವಾಗಿ ಮಾತಾಡುವವನು.

೧೭. ಅವನು ಧನವಂತನು. ಪುತ್ರವಂತನು, ಸಭ್ಯನು, ವಿದ್ವಾಂಸನು, ಎಲ್ಲರಿಗೂ ಪ್ರಿಯನು, ಬ್ರಾಹ್ಮಣರನ್ನೂ ಅತಿಥಿಗಳನ್ನೂ ಯಾವಾಗಲೂ ಪೂಜಿಸುವನು.

೧೮. ಅವನು ಪಿತೃಭಕ್ತನು, ಪ್ರತಿಜ್ಞಾಪಾಲಕನು, ಮಾತಿಗೆ ತಪ್ಪತಕ್ಕವನಲ್ಲ. ಗುರುಸೇವೆ ಮಾಡುತ್ತಿರುವನು. ಹರಿಸೇವಕನು.

೧೯. ಒಂದು ಸಾರಿ ಒಬ್ಬ ಸುಂದರನಾದ ಚಂಡಾಲನು ಮೋಸಮಾಡಿ ಕಪಟ ಬ್ರಾಹ್ಮಣರೂಪವನ್ನು ಧರಿಸಿ ಅವನ ಮನೆಗೆ ಬಂದನು.

॥ ಬ್ರಾಹ್ಮಣ ಉವಾಚ ॥

ಶೃಣು ಮೇ ವಚನಂ ಧೀರ ಮಮ ಜಾಯಾ ಮೃತಾ ಶುಭಾ ।
ಕಿಂ ಕರೋಮಿ ಕ್ವ ಗಚ್ಛಾಮಿ ಕಥಯಾದ್ಯಾನುಕಂಪಯಾ ॥ ೨೦ ॥

ವಿವಾಹಂ ಯೋ ಜನಃ ಕುರ್ಯಾದ್ಬ್ರಾಹ್ಮಣಸ್ಯ ವಿಶೇಷತಃ ।
ಕಿಂ ಚ ದಾನೈಃ ಕಿಂ ಚ ತೀರ್ಥೈಃ ಕಿಂ ಯಜ್ಞೈರ್ವ್ರತಕೋಟಿಭಿಃ ॥ ೨೧ ॥

ಇತಿ ಶ್ರುತ್ವಾ ತ್ವಸೌ ವಿಪ್ರಂ ಚೋಕ್ತವಾನ್ವೀರವಿಕ್ರಮಃ ।
ಶೃಣು ಮೇ ವಚನಂ ಬ್ರಹ್ಮನ್ ಬಾಲಾಸ್ತಿ ಮಮ ಕನ್ಯಕಾ ॥ ೨೨ ॥

ಯದಿಚ್ಛಾ ತೇ ಭವೇದ್ವಿಪ್ರ ದಾಸ್ಯಾಮಿ ವಿಧಿಪೂರ್ವಕಂ ।
ನಯ ಮೇ ದಕ್ಷಿಣಂ ಹಸ್ತಂ ದಾಸ್ಯಾಮಿ ಚಾನ್ಯಥಾ ನ ಹಿ ॥ ೨೩ ॥

ತಸ್ಯೈತದ್ವಚನಂ ಶ್ರುತ್ವಾ ಜಗ್ರಾಹ ದಕ್ಷಿಣಂ ಕರಂ ।
ಶ್ವಪಚೋ ಹರ್ಷಯುಕ್ತೋ ವೈ ಪ್ರೋವಾಚ ವಚನಂ ತ್ವಿತಿ ॥ ೨೪ ॥

---

೨೦. ಕಪಟ ಬ್ರಾಹ್ಮಣನು ಹೇಳಿದನು :— ಎಲೈ! ಧೀರನೇ, ಚನ್ನಾಗಿದ್ದ ನನ್ನ ಹೆಂಡತಿಯು ಮೃತಳಾದಳು. ಈಗೇನು ಮಾಡಲಿ ? ಎಲ್ಲಿ ಹೋಗಲಿ ? ದಯವಿಟ್ಟು ಹೇಳು.

೨೧, ವಿವಾಹವನ್ನು ಮಾಡಿಸುವವನಿಗೆ ಅದರಲ್ಲೂ ಬ್ರಾಹ್ಮಣನಿಗೆ ಮಾಡಿಸಿದರೆ, ದಾನಗಳಿಂದಾಗಲಿ, ತೀರ್ಥಗಳಿಂದಾಗಲಿ, ಕೋಟಿ ಯಜ್ಞಗಳಿಂದಾಗಲಿ ಪ್ರಯೋಜನವೇನು ? ಅದಕ್ಕಿಂತಲೂ ಹೆಚ್ಚು ಫಲವು ಬರುವುದು.

೨೨. ಇದನ್ನು ಕೇಳಿ ಆ ವೀರವಿಕ್ರಮನು ನನಗೊಬ್ಬ ಕನ್ನಿಕೆಯಿದ್ದಾಳೆ. ನಿನಗಿಚ್ಛೆಯಿದ್ದರೆ ಕೊಡುತ್ತೇನೆ. ಮದುವೆ ಮಾಡಿಕೊಳ್ಳಬಹುದು ಎಂದನು.

೨೩. ನನ್ನ ಬಲಗೈ ತೆಗೆದುಕೋ ; ಭಾಷೆ ಕೊಡುತ್ತೇನೆ. ಬೇರೆ ನಡೆಯುವುದಿಲ್ಲ.

೨೪. ಆ ಚಂಡಾಲನು ಸಂತೋಷಪಟ್ಟು ಕೈಗೆ ಕೈಹಾಕಿ ಮಾತು ತೆಗೆದುಕೊಂಡನು. ಮತ್ತು ಇಂತೆಂದನು.

॥ ಬ್ರಾಹ್ಮಣ ಉವಾಚ ॥

ಕೃತ್ವಾಶು ಭಕ್ಷಣಂ ಮಹ್ಯಂ ದೇಹಿ ಕನ್ಯಾಂ ಶುಭಾನ್ವಿತಾಂ ।
ವಿಲಂಬೇ ಬಹುವಿಘ್ನಂ ಸ್ಯಾದಿತಿ ಶಾಸ್ತ್ರೇಷು ನಿಶ್ಚಿತಂ ॥ ೨೫ ॥

॥ ವೀರವಿಕ್ರಮ ಉವಾಚ ॥

ತುಭ್ಯಂ ಶ್ವಃ ಕನ್ಯಕಾಂ ಬ್ರಹ್ಮನ್ ದಾಸ್ಯಾಮಿ ನಾಸ್ತಿ ಚಾನ್ಯಥಾ ।
ದಕ್ಷಿಣಂ ಸ್ವಕರಂ ದತ್ವಾ ನ ಕುರ್ಯಾತ್ಪುರುಷಾಧಮಃ ॥ ೨೬ ॥

॥ ಸೂತ ಉವಾಚ ॥

ಬ್ರಾಹ್ಮಣಂ ಕೃಷ್ಣಶರ್ಮಾಣಂ ಚಾಹೂಯಾಕಥಯನ್ಮನೇ ।
ಪುರೋಹಿತಮಿದಂ ಸರ್ವಂ ಪ್ರೋವಾಚ ಸಂವಿದಂ ದ್ವಿಜ ॥ ೨೭ ॥

ಕಥಂ ಪ್ರಿಯಾಯ ತೇ ಕನ್ಯಾಂ ಶೂದ್ರಾಯ ದಾತುಮಿಚ್ಛಸಿ ।
ಅಜ್ಞಾತಾಯ ಕುಲೀನಾಯ ನ ದದಸ್ವ ವಿಶೇಷತಃ ॥ ೨೮ ॥

ಊಚುಸ್ತದ್ಜ್ಞಾತಯಸ್ಸರ್ವೇ ಜನಕಾದ್ಯಾಸ್ತಪೋಧನ ।
ಅಸ್ಮಾಕಂ ವಚನಂ ತಾತ ಶೃಣುಶ್ವ ವೀರವಿಕ್ರಮ ॥ ೨೯ ॥

---

೨೫. ಬ್ರಾಹ್ಮಣನು ಹೇಳಿದನು:— ಭಕ್ಷಣಗಳನ್ನೂ ಮಾಡಿ, ಜಾಗ್ರತೆಯಾಗಿ ನನಗೆ ಮದುವೆ ಮಾಡಿಕೊಡು. ವಿಲಂಬ ಮಾಡಿದರೆ ಬಹು ವಿಘ್ನಗಳು ಬರುವುವೆಂದು ಶಾಸ್ತ್ರದಲ್ಲಿ ಹೇಳಿದೆ.

೨೬. ವೀರವಿಕ್ರಮನು ಹೇಳಿದನು:— ನಾಳೆ ನಿನಗೆ ಹುಡುಗಿಯನ್ನು ಮದುವೆ ಮಾಡಿಕೊಡುತ್ತೇನೆ. ಬಲಗೈಯಲ್ಲಿ ಕೈಹಾಕಿ ಅವರಂತೆ ಕೊಡದಿದ್ದರೆ ಅವನು ಅಯೋಗ್ಯನು.

೨೭. ಸೂತನು ಹೇಳಿದನು:—ಪುರೋಹಿತನಾದ ಕೃಷ್ಣಶರ್ಮನೆಂಬ ಬ್ರಾಹ್ಮಣನನ್ನು ಕರೆದು ತನ್ನ ಮಾತನ್ನೂ, ತಾನು ಪ್ರತಿಜ್ಞೆ ಮಾಡಿರುವುದನ್ನೂ ಹೇಳಿದನು.

೨೮, ಶೂದ್ರನು ಪ್ರಿಯನಾಗಿದ್ದರೂ ಅವನಿಗೆ ಹೇಗೆ ಮಗಳನ್ನು ಕೊಡುತ್ತೀಯೆ? ಅವನು ಹುಟ್ಟು ಕಟ್ಟುಗಳು ಗೊತ್ತಿಲ್ಲದಿರುವುದರಿಂದ ಹೇಗೆ ಅವನಿಗೆ ಕನ್ಯೆಯನ್ನು ಕೊಡುತ್ತೀಯೆ?

೨೯. ಅವನ ತಂದೆಯೇ ಮೊದಲಾದ ಜ್ಞಾತಿಗಳು ಎಲೈ! ವೀರವಿಕ್ರಮನೇ, ನಮ್ಮ ಮಾತನ್ನು ಕೇಳು, ಎಂದರು.

ನ ಜ್ಞಾಯತೇ ಕುಲಂ ಯಸ್ಯ ದೇಶಗೋತ್ರಧನಂ ತಥಾ ।
ಶೀಲಂ ವಯಸ್ತಸ್ಯ ಕನ್ಯಾ ಸ್ವಜನೈರ್ನ ಚ ದೀಯತೇ ॥ ೩೦ ॥

ಸ ಉವಾಚ ದ್ವಿಜಶ್ರೇಷ್ಠ ದತ್ತಂ ಮೇ ದಕ್ಷಿಣಂ ಕರಂ ।
ಕದಾಚಿದನ್ಯಥಾ ಕರ್ತುಂ ನ ಶಕ್ನೋಮಿ ಚ ಸರ್ವಥಾ ॥ ೩೧ ॥

ಇತ್ಯುಕ್ತ್ವಾ ತಾನ್ಸ ವಿಪ್ರಾಯ ಕನ್ಯಾಂ ದಾತುಂ ಪ್ರಚಕ್ರಮೇ ।
ದೃಷ್ಟ್ವೇತಿ ಜ್ಞಾತಯಸ್ಸರ್ವೇ ವಿಸ್ಮಯಮುದ್ಭುತಂ ಯಯುಃ ॥ ೩೨ ॥

ಸತ್ಯಂ ತದ್ವಚನಂ ಶ್ರುತ್ವಾ ಶಂಖಚಕ್ರಗದಾಧರಃ ।
ಆವಿರ್ಬಭೂವ ಸಹಸಾ ಚಾರುಹ್ಯ ಗರುಡಂ ಮುನೇ ॥ ೩೩ ॥

॥ ಶ್ರೀ ಭಗವಾನುವಾಚ ॥

ಧನ್ಯಂ ತೇ ಚ ಕುಲಂ ಧರ್ಮೋ ಧನ್ಯಸ್ತೇ ಜನನೀ ಪಿತಾ ।
ಧನ್ಯಂ ತೇ ವಚನಂ ಸತ್ಯಂ ಧನ್ಯಂ ತೇ ದಕ್ಷಿಣಂ ಕರಂ ॥ ೩೪ ॥

ಧನ್ಯಂ ಕರ್ಮ ಚ ತೇ ಜನ್ಮ ತ್ರೈಲೋಕ್ಯೇ ನೈವ ವಿದ್ಯತೇ ।
ಏವಂ ತೇ ಕರ್ಮಣಾ ಸಾಧೋ ಚೋದ್ಧಾರಂ ಕುರುಷೇ ಕುಲಂ ॥ ೩೫ ॥

---

೩೦. ಅವನ ಕುಲ ಗೊತ್ತಿಲ್ಲ. ದೇಶ, ಗೋತ್ರ, ಧನಗಳು ಗೊತ್ತಿಲ್ಲ. ಶೀಲ, ವಯಸ್ಸು ಇವುಗಳಾವುವೂ ಗೊತ್ತಿಲ್ಲ. ಕನ್ಯೆಯನ್ನು ಹೇಗೆ ಕೊಡುತ್ತೀಯೆ ?

೩೧. ಅವನು ಹೇಳಿದನು. ಎಲೈ ! ಪುರೋಹಿತನೇ, ನಾನು ಕೈಗೆ ಕೈಹಾಕಿ ಮಾತು ಕೊಟ್ಟಿದ್ದೇನೆ. ಅದನ್ನು ಯಾವಾಗಲೂ ಬೇರೆ ಮಾಡಲಾರೆ.

೩೨. ಅವರಿಗೆಲ್ಲಾ ಹೀಗೆಂದು ಹೇಳಿ ಮಗಳನ್ನು ದಾನ ಮಾಡಲು ಉಪಕ್ರಮಿಸಿದನು. ಇವನ್ನು ಜ್ಞಾತಿಗಳು ನೋಡಿ ಆಶ್ಚರ್ಯಪಟ್ಟರು.

೩೩. ಅವನ ಸತ್ಯವಚನವನ್ನು ತಿಳಿದು ಶ್ರೀ ಕೃಷ್ಣನು ಶಂಖಚಕ್ರಗದಾಧರನಾಗಿ ಗರುಡನನ್ನು ಏರಿಕೊಂಡು ಅಲ್ಲಿಗೆ ಶೀಘ್ರವಾಗಿ ಬಂದನು.

೩೪-೩೫. ಭಗವಂತನು ಹೇಳಿದನು :—ನಿನ್ನ ಕುಲ, ಧರ್ಮ, ನಿನ್ನ ತಾಯಿ ತಂದೆಗಳು, ಎಲ್ಲರೂ ಧನ್ಯರು. ನಿನ್ನ ಮಾತು ಸತ್ಯವು. ನಿನ್ನ ಬಲಗೈ, ಕರ್ಮ, ಜನ್ಮ, ಇವೆಲ್ಲವೂ ಧನ್ಯವಾದುವು. ಇಂತಹವು ಮೂರು ಲೋಕದಲ್ಲಿಯೂ ಇಲ್ಲ. ಈ ಕೆಲಸದಿಂದ ನಿನ್ನ ಕುಲವು ಉದ್ಧಾರವಾಯಿತು.

॥ ಸೂತ ಉವಾಚ ॥

ಏವಂ ಬ್ರುವತಿ ಶ್ರೀಕೃಷ್ಣೇ ವಿಮಾನಂ ಸ್ವರ್ಣನಿರ್ಮಿತಂ ।
ಆಗತಂ ಹರಿಗಣೈರ್ಯುಕ್ತಂ ಸರ್ವತ್ರ ಗರುಡಧ್ವಜಂ ॥ ೩೬ ॥

ಸರ್ವಂ ತಸ್ಯ ಕುಲಂ ಬ್ರಹ್ಮನ್ ಸಶ್ವಪಾಕಪುರೋಹಿತಂ ।
ರಥೇ ಚಾರೋಪಯಾಮಾಸ ಶಂಖಪದ್ಮಧರಸ್ಸ್ವಯಂ ॥ ೩೭ ॥

ಗೃಹೀತ್ವಾ ತಾನ್ ಹರಿಸ್ಸರ್ವಾನ್ ಗತೋ ವೈಕುಂಠಮಂದಿರಂ ।
ತತ್ರ ತಸ್ಥುಶ್ಚಿರಂ ತೇ ಚ ಕೃತ್ವಾ ಭೋಗಂ ಸುದುರ್ಲಭಂ ॥ ೩೮ ॥

ವಚನಂ ಲಂಘಯೇದ್ಯಸ್ತು ದತ್ವಾ ಸ್ವಂ ದಕ್ಷಿಣಂ ಕರಂ ।
ಸಕುಲೋ ನಿರಯಂ ಯಾತಿ ಸತ್ಯಂ ಸತ್ಯಂ ವದಾಮ್ಯಹಂ ॥ ೩೯ ॥

ತಸ್ಯಾನ್ನಂ ಸಲಿಲಂ ಬ್ರಹ್ಮನ್ನಗ್ರಾಹ್ಯಂ ಪಿತೃದೈವತೈಃ ।
ತ್ಯಕ್ತ್ವಾ ಧರ್ಮೋ ಗೃಹಂ ತಸ್ಯ ಭೀತ್ಯಾ ಯಾತಿ ದ್ವಿಜೋತ್ತಮ ॥ ೪೦ ॥

ದತ್ವಾಶಾಂ ಯೋ ಜನಃ ಕುರ್ಯಾನ್ನೈರಾಶ್ಯಂ ಚೈವ ಮೂಢಧೀಃ ।
ಸ ಸ್ವಕಾನ್ ಕೋಟಿಪುರುಷಾನ್ ಗೃಹೀತ್ವಾ ನರಕಂ ವ್ರಜೇತ್ ॥ ೪೧ ॥

---

೩೬. ಸೂತನು ಹೇಳಿದನು:— ಹೀಗೆ ಕೃಷ್ಣನು ಹೇಳುತ್ತಿರಲು ಸ್ವರ್ಣದ ವಿಮಾನವು ಗರುಡನ ಬಾವುಟಗಳಿಂದ ಅಲಂಕೃತವಾಗಿ ಹರಿಗಣಗಳಿಂದ ಕೂಡಿಕೊಂಡು ತರಲ್ಪಟ್ಟಿತು.

೩೭. ಅವನ ಕುಲದವರನ್ನೂ, ಆ ಚಾಂಡಾಲನನ್ನೂ, ಪುರೋಹಿತನನ್ನೂ ರಥದಲ್ಲಿ ಸ್ವಾಮಿಯು ತಾನಾಗಿಯೇ ಕೂರಿಸಿದನು.

೩೮. ಅವರೆಲ್ಲರನ್ನೂ ಹರಿಯು ಕರೆದುಕೊಂಡು ವೈಕುಂಠಕ್ಕೆ ಹೋದನು. ಅಲ್ಲಿ ಅನೇಕ ಭೋಗಗಳನ್ನು ಅವರು ಅನುಭವಿಸುತ್ತಿದ್ದರು.

೩೯. ಬಲಗೈಕೊಟ್ಟು ಯಾವನು ಮಾತನ್ನು ಮೀರುತ್ತಾನೋ ಅವನು ತನ್ನ ಕುಲದೊಂದಿಗೆ ನರಕಕ್ಕೆ ಹೋಗುತ್ತಾನೆ. ಸತ್ಯವು, ಸತ್ಯವು.

೪೦. ಅವನ ಅನ್ನ ನೀರುಗಳನ್ನು ಪಿತೃದೇವತೆಗಳು ತೆಗೆದುಕೊಳ್ಳುವುದಿಲ್ಲ. ಧರ್ಮವು ಅವನ ಮನೆಯನ್ನು ಬಿಟ್ಟು ಹೆದರಿಕೆಯಿಂದ ಹೊರಟು ಹೋಗುತ್ತದೆ.

೪೧. ಯಾವ ಮೂಢನು ಆಶೆಯನ್ನು ತೋರಿಸಿ ನಿರಾಶೆಯನ್ನುಂಟುಮಾಡುತ್ತಾನೋ ಅವನು ತನ್ನ ಕುಲದ ಕೋಟಿ ಪುರುಷರೊಂದಿಗೆ ನರಕಕ್ಕೆ ಹೋಗುತ್ತಾನೆ.

ವಚನಂ ಲಂಘಯೇದ್ಯಸ್ತು ಧರ್ಮಸ್ತೇಷಾಂ ವಿಲಂಘತಿ ।
ನೃಪಾಗ್ನಿತಸ್ಕರೈರ್ವಿಪ್ರ ಸತ್ಯಂ ಸತ್ಯಂ ಸುನಿಶ್ಚಿತಂ ॥ ೪೨ ॥

ಸ್ವರ್ಗೋತ್ತರಮಿಮಂ ಸಮ್ಯಕ್ ಶ್ರುತ್ವಾ ಸ್ವರ್ಗೋತ್ತರಂ ವ್ರಜೇತ್ ।
ಜೀವನ್ಮುಕ್ತಸ್ತ್ವಿಹಾಮುತ್ರ ಕೃಷ್ಣಾಖ್ಯಂ ಧಾಮ ಚೋತ್ತಮಂ ॥ ೪೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಬ್ರಹ್ಮಖಂಡೇ ಸೂತಶೌನಕ
ಸಂವಾದೇ ಷಡ್ವಿಂಶತಿತಮೋಧ್ಯಾಯಃ
ಇತಿ ಶ್ರೀ ಮಹಾಮುನಿ ವ್ಯಾಸಪ್ರಣೀತೇ ಮಹಾಪುರಾಣೇ
ಪಾದ್ಮೇ ತೃತೀಯಂ ಸ್ವರ್ಗಖಂಡಾಪರನಾಮಧೇಯಂ
ಬ್ರಹ್ಮಖಂಡಂ ಸಮಾಪ್ತಂ

---

೪೨. ಯಾವನು ಮಾತಿಗೆ ತಪ್ಪುತ್ತಾನೋ ಅವನನ್ನು ರಾಜ, ಬೆಂಕಿ, ಕಳ್ಳ ರಿಂದ ಧರ್ಮವು ವಂಚಿಸುತ್ತದೆ. ಸತ್ಯವು, ಸತ್ಯವು, ನಿಶ್ಚಯವು.

೪೩. ಸ್ವರ್ಗೋತ್ತರವಾದ ಈ ಅಧ್ಯಾಯವನ್ನು ಕೇಳುವವನು ಆ ಮೇಲೆ ಸ್ವರ್ಗವನ್ನು ಹೊಂದುತ್ತಾನೆ. ಈ ಲೋಕದಲ್ಲಿ ಜೀವನ್ಮುಕ್ತನಾಗಿದ್ದು ಅನಂತರ ಕೃಷ್ಣನ ಲೋಕವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಬ್ರಹ್ಮಖಂಡದಲ್ಲಿ ಸೂತಶೌನಕ ಸಂವಾದದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.
ಇಲ್ಲಿಗೆ ಶ್ರೀ ವ್ಯಾಸ ಮಹಾಮುನಿಯಿಂದ ಪ್ರಣೀತದಾದ ಪದ್ಮಮಹಾಪುರಾಣದ
ಮೂರನೆಯದಾದ ಬ್ರಹ್ಮಖಂಡವು ಮುಗಿದುದು.

॥ ಶುಭಂ ಭೂಯಾತ್ ॥

